# ಶ್ರೀದುರ್ಗಾಸಪ್ತಶತೀ




ಶ್ರೀರಾಮಕೃಷ್ಣ ಆಶ್ರಮ, ಯಾದವಗಿರಿ, ಮೈಸೂರು-೨೦

ಸ್ವಾಮಿ ಹರ್ಷಾನಂದ

# ಶ್ರೀದುರ್ಗಾಸಪ್ತಶತೀ

## (ದೇವೀಮಾಹಾತ್ಮ್ಯಮ್)

ಮತ್ತು

## ಕೆಲವು ದೇವೀಸ್ತೋತ್ರಗಳು

(ಮೂಲ ಮತ್ತು ಭಾವಾರ್ಥ)

ಸ್ವಾಮಿ ಹರ್ಷಾನಂದ



ಶ್ರೀರಾಮಕೃಷ್ಣ ಆಶ್ರಮ
ಯಾದವಗಿರಿ, ಮೈಸೂರು 570 020

ಎಂಟನೆಯ ಪ್ರಕಾಶನ 1999

ಪ್ರತಿಗಳು : 10,000



ಪ್ರಕಾಶಕರು :
ಅಧ್ಯಕ್ಷರು, ಶ್ರೀರಾಮಕೃಷ್ಣ ಆಶ್ರಮ
ಯಾದವಗಿರಿ, ಮೈಸೂರು 570 020

ಬೆಲೆ : ರೂ. 36/-

ಕಂಪ್ಯೂಟರ್ ಅಕ್ಷರಜೋಡಣೆ :
ಟೈಪ್ ಕಾರ್ನರ್
ದಿ ಕಂಪ್ಲೀಟ್ ಡಿಜಿಟಲ್ ಪ್ರೀ-ಪ್ರೆಸ್
3-ಬಿ, ಲುಂಬಿನಿ ಅಪಾರ್ಟ್‌ಮೆಂಟ್ಸ್
ನಂ. 5, ರೆಸ್ಟ್ ಹೌಸ್ ರೋಡ್
ಬೆಂಗಳೂರು - 560 001
ಫೋನ್ : 5586470



ಮುದ್ರಕರು :
...ಟೆಬ್ ಪ್ರಿಂಟ್ಸ್
..., ಮೈಸೂರು
ಫೋನ್ : 444880

# ಮುನ್ನುಡಿ

ಶಾಕ್ತ-ಶಾಸ್ತ್ರದಲ್ಲಿ ದೇವೀಮಾಹಾತ್ಮ್ಯವು ಲೋಕೋತ್ತರವಾದ ಗ್ರಂಥ. ಇದಕ್ಕೆ ''ದುರ್ಗಾಸಪ್ತಶತೀ'' ಎಂಬ ಹೆಸರೂ ಇದೆ. ವಂಗದೇಶದಲ್ಲಂತೂ ''ಶ್ರೀಶ್ರೀಚಂಡೀ'' ಎಂಬ ಹೆಸರಿನಿಂದ ಪ್ರಖ್ಯಾತಿಯನ್ನು ಹೊಂದಿ ಅಲ್ಲಿನ ಶಾಕ್ತರಿಗೆ ಗೀತೆಯಂತೆಯೇ ಪರಮಪೂಜ್ಯವಾಗಿದೆ. ದೇವೀಮಾಹಾತ್ಮ್ಯವು ಮಾರ್ಕಂಡೇಯ ಪುರಾಣದ ೧೩ ಅಧ್ಯಾಯಗಳ ವಿಷಯವಾಗಿದೆ.

ದೇವಿಯ ಉಪಾಸನೆಯು ಕೇವಲ ತಾಂತ್ರಿಕವೆಂದಾಗಲಿ ಅಥವಾ ಪೌರಾಣಿಕವೆಂದಾಗಲಿ ತಿಳಿಯಕೂಡದು; ಇದು ಋಗ್ವೇದದಷ್ಟೇ ಪುರಾತನವಾಗಿದೆ. ಋಗ್ವೇದದ ಹತ್ತನೆಯ ಮಂಡಲದಲ್ಲಿ ಬರುವ ದೇವೀಸೂಕ್ತ- ರಾತ್ರಿ ಸೂಕ್ತಗಳು ದೇವಿಯ ಪರವಾಗಿವೆ. ವೈದಿಕ-ಯುಗದಲ್ಲಿ ಅಂಭೃಣ ಎಂಬ ಮಹರ್ಷಿಯಿದ್ದನು. ಆವನಿಗೆ ಬ್ರಹ್ಮವಿದುಷಿಯಾದ ವಾಕ್ ಎಂಬ ಮಗಳಿದ್ದಳು. ಅವಳೇ ಈ ದೇವೀಸೂಕ್ತದ ಋಷಿ; ಸಚ್ಚಿದಾನಂದ ಸ್ವರೂಪನಾದ ಪರಮಾತ್ಮನೇ ದೇವತೆ. ಪರಮಾತ್ಮನೊಂದಿಗೆ ಐಕ್ಯವನ್ನು ಅನುಭವಿಸುತ್ತಿರುವ ಆ. ಋಷಿಪುತ್ರಿಯು ಸರ್ವಜಗದ್ರೂಪದಿಂದ ಸಮಸ್ತಕಾರ್ಯಗಳ ಅಧಿಷ್ಠಾತೃವೇ ತಾನಾಗಿರುವೆನೆಂದು ಭಾವಿಸಿ ತನ್ನನ್ನೇ ಈ ಸೂಕ್ತದಲ್ಲಿ ಸ್ತುತಿಸಿಕೊಂಡಿರುತ್ತಾಳೆ. ಮೊದಲನೆಯ ಸೂಕ್ತದ ಪ್ರಕಾರ ದೇವಿಯೇ ಸಮಸ್ತ ದೇವತೆಗಳ ರೂಪದಿಂದ ಸಂಚರಿಸುತ್ತಾಳೆ. ಎರಡನೆಯ ಸೂಕ್ತದ ಪ್ರಕಾರ ದೇವಿಯು ಸೋಮವನ್ನು ಪೋಷಿಸುತ್ತಾಳೆ ಮತ್ತು ಸೋಮ ರಸವನ್ನು ಹಿಂಡಿ ಅರ್ಪಿಸುವ ಯಜಮಾನನಿಗೆ ಧನವನ್ನು ಕೊಡುತ್ತಾಳೆ. ಮೂರನೆಯ ಸೂಕ್ತದ ಪ್ರಕಾರ ಸಮಸ್ತ ಜಗತ್‌ಸ್ವಾಮಿನಿಯಾದ ಮಹಾ ದೇವಿಯೇ ಎಲ್ಲ ಪ್ರಾಣಿಗಳಲ್ಲಿಯೂ ಜೀವರೂಪದಿಂದ ನೆಲಸಿರುತ್ತಾಳೆ. ಮನುಷ್ಯನು ತನ್ನ ಸಕಲ ವ್ಯಾಪಾರಗಳನ್ನೂ ದೇವಿಯ ಮೂಲಕವೇ ನಡೆಸುತ್ತಾನೆಂಬುದು ನಾಲ್ಕನೆಯ ಸೂಕ್ತದ ಅಭಿಪ್ರಾಯ. ತಾನೇ ಪರಬ್ರಹ್ಮಾತ್ಮಕವಸ್ತುವೆಂದೂ ತನ್ನಿಂದಲೇ ಮನುಷ್ಯನು ಉತ್ತಮ ಪದವಿಯನ್ನಾಗಲಿ ಋಷಿತ್ವವನ್ನಾಗಲಿ ಹೊಂದುತ್ತಾನೆಂದೂ ದೇವಿಯು ಐದನೆಯ

ಸೂಕ್ತದಲ್ಲಿ ತಿಳಿಸುತ್ತಾಳೆ. ರುದ್ರನು ದುಷ್ಟರನ್ನು ಸಂಹರಿಸುವಾಗ ದೇವಿಯೇ ಆವನ ಧನುಸ್ಸನ್ನು ಬಗ್ಗಿಸುತ್ತಾಳೆ ಮತ್ತು ದ್ಯಾವಾಪೃಥಿವಿಗಳನ್ನು ಅಂತರ್ಯಾಮಿ ರೂಪದಿಂದ ಪ್ರವೇಶಿಸಿದ್ದಾಳೆ – ಎಂಬುದು ಆರನೆಯ ಸೂಕ್ತದ ಅಭಿಪ್ರಾಯ. ದೇವಿಯೇ ಪಿತೃಭೂತವಾದ ಸ್ವರ್ಗವನ್ನು ಮೇಲು ಭಾಗದಲ್ಲಿ ಉತ್ಪತ್ತಿಮಾಡಿರುತ್ತಾಳೆ ಎಂದು ಏಳನೆಯ ಸೂಕ್ತವು ತಿಳಿಸುತ್ತದೆ. ಲೋಕಗಳನ್ನು ಉತ್ಪತ್ತಿಮಾಡುತ್ತ, ವಾಯುವಿನಂತೆ ಬೀಸುತ್ತ, ದ್ಯಾವಾಪೃಥಿವಿಗಳ ಆಚೆ ತನ್ನ ಮಹಿಮೆಯಲ್ಲಿಯೇ ದೇವಿಯು ನಿಂತಿರುತ್ತಾಳೆಂದು ಕೊನೆಯ ಸೂಕ್ತವು ತಿಳಿಸುತ್ತದೆ. ಸಚ್ಚಿದಾನಂದ ಸ್ವರೂಪನಾದ ಭಗವಂತನೇ ಜಗದ್ರೂಪದಿಂದ ಇರುವನೆಂಬುದೂ ಸಮಸ್ತ ದೇವತೆಗಳ ಶಕ್ತಿಯಾಗಿರುವ ನೆಂಬುದೂ ದೇವೀಸೂಕ್ತದ ತಾತ್ಪರ್ಯವಾಗಿದೆ. ಸುರಥ ಮತ್ತು ಸಮಾಧಿ – ಇವರಿಬ್ಬರೂ ದೇವೀಸೂಕ್ತವನ್ನು ಜಪಿಸುತ್ತ ತಪಸ್ಸನ್ನು ಮಾಡಿದರೆಂದು ದೇವೀಮಾಹಾತ್ಮ್ಯವು (೧೩.೯) ತಿಳಿಸುತ್ತದೆ.

ಮಾರ್ಕಂಡೇಯಮುನಿಯು ಕ್ರೌಷ್ಟುಕಿಗೆ ದೇವೀಮಾಹಾತ್ಮ್ಯವನ್ನು ವಿವರಿಸುತ್ತಾನೆ. ಇದು ಪುರಾಣದ ಒಂದು ಭಾಗವಾಗಿದ್ದರೂ ಮಂತ್ರ ಶಾಸ್ತ್ರವೆಂದು ತಂತ್ರಗಳಲ್ಲಿ ಪ್ರಸಿದ್ಧವಾಗಿದೆ. ಕಾತ್ಯಾಯನೀ-ತಂತ್ರದ ಪ್ರಕಾರ ದೇವೀಮಾಹಾತ್ಮ್ಯದ ಪ್ರತಿಯೊಂದು ಶ್ಲೋಕವೂ ಮಂತ್ರವಾಗಿದ್ದು ದೇವೀ ಪೂಜೆಯಲ್ಲಿ ಪ್ರಯೋಗಿಸಲ್ಪಡುತ್ತದೆ. ಮಂತ್ರಕ್ಕೂ ದೇವಿಗೂ ಯಾವ ಭೇದವೂ ಇಲ್ಲ. ಆದುದರಿಂದಲೇ ದೇವೀಮಾಹಾತ್ಮ್ಯವನ್ನು ವಿಪದ್ಭಂಜನಕ್ಕೆ, ದೇವಿಯ ಅನುಗ್ರಹಕ್ಕೆ ಮತ್ತು ಸುಖಪ್ರಾಪ್ತಿಗೆ ಉಪಾಸಕರು ಮನೆಮನೆ ಯಲ್ಲಿಯೂ ಪಾರಾಯಣ ಮಾಡುತ್ತಾರೆ.

ದೇವೀಮಾಹಾತ್ಮ್ಯದಲ್ಲಿ ಮೂರು ಚರಿತ್ರೆಗಳಿವೆ; ಒಂದೊಂದು ಚರಿತ್ರವೂ ದೇವಿಯ ಅಸಾಧಾರಣರೂಪದ ಮಾಹಾತ್ಮ್ಯವನ್ನು ಪ ಕಾಶ ಪಡಿಸುತ್ತದೆ. ಮಹಾಕಾಳಿಗೆ ಸಂಬಂಧಿಸಿದ ಪ್ರಥಮಚರಿತ್ರವು ಮೊದಲನೆಯ ಅಧ್ಯಾಯದಲ್ಲಿ ಅಡಕವಾಗಿದೆ. ಮಹಾಲಕ್ಷ್ಮಿಗೆ ವಿನಿಯೋಗಿಸಲ್ಪಟ್ಟಿರುವ ದ್ವಿತೀಯಚರಿತ್ರವು ಮುಂದಿನ ಮೂರು ಅಧ್ಯಾಯಗಳಲ್ಲಿ ಬರುತ್ತದೆ. ಮಹಾಸರಸ್ವತಿಗೆ ನಿವೇದಿಸಲ್ಪಟ್ಟಿರುವ ತೃತೀಯಚರಿತ್ರವು ಉಳಿದ ಅಧ್ಯಾಯ ಗಳನ್ನು ಒಳಗೊಂಡಿದೆ.

## ಪ್ರಥಮ ಚರಿತ್ರ

ತನ್ನ ರಾಜ್ಯವನ್ನು ಕಳೆದುಕೊಂಡ ಸುರಥ ಎಂಬ ರಾಜನೂ ಐಶ್ವರ್ಯ ವನ್ನೆಲ್ಲ ಕಳೆದುಕೊಂಡ ಸಮಾಧಿ ಎಂಬ ವೈಶ್ಯನೂ ಸುಮೇಧನೆಂಬ ಋಷಿಯ ಆಶ್ರಮಕ್ಕೆ ಬರುತ್ತಾರೆ. ಸಮಾಧಿಯು ಶ್ರೀಮಂತರ ಕುಲದಲ್ಲಿ ಹುಟ್ಟಿದ್ದರೂ ಪತ್ನೀಪುತ್ರರಿಂದ ವಂಚಿತನಾಗಿ ಸರ್ವಸ್ವವನ್ನೂ ಕಳೆದು ಕೊಂಡು ಬಂದಿರುತ್ತಾನೆ. ಇವರಿಬ್ಬರೂ ಋಷಿಗೆ ಪ್ರಣಾಮವನ್ನು ಮಾಡಿ, ತಮ್ಮ ಕಷ್ಟಗಳನ್ನು ಹೇಳಿಕೊಂಡು ಋಷಿಯನ್ನು ಪ್ರಶ್ನಿಸುತ್ತಾರೆ. ಸುರಥನು ಹೀಗೆ ಹೇಳುತ್ತಾನೆ :

'ಮುನಿಶ್ರೇಷ್ಠನೆ, ನಾನು ರಾಜ್ಯಭ್ರಷ್ಟನಾಗಿದ್ದರೂ ಸಮಸ್ತ ರಾಜ್ಯಾಂಗ ಗಳಲ್ಲಿ ನನ್ನ ಮಮತ್ವವು ಹೋಗಿಲ್ಲ, ಇದಕ್ಕೆ ಕಾರಣವೇನು? ಈ ವೈಶ್ಯನು ಪತ್ನೀಪುತ್ರರಿಂದ ನಿರಾಕರಿಸಲ್ಪಟ್ಟಿದ್ದರೂ ಅವರ ಬಗ್ಗೆ ಆಸಕ್ತಿಯು ಇವನಿಂದ ಹೋಗಿಲ್ಲ. ಈ ಮೂಢತನಕ್ಕೆ ಕಾರಣವೇನು ?'

ಸುಮೇಧಮುನಿಯು ಇವರ ದುಃಖದ ಕಾರಣವನ್ನು ವಿವರಿಸುತ್ತ ಪರಿಹಾರವನ್ನು ಹೇಳುತ್ತಾನೆ :

'ಮಹಾಭಾಗ, ಪ್ರಾಣಿಗಳಿಗೆಲ್ಲ ತಮ್ಮ ತಮ್ಮ ವಿಷಯಗಳಲ್ಲಿ ಜ್ಞಾನ ವಿರುತ್ತದೆ. ಅಂಥ ವಿಷಯಗಳು ನಾನಾಬಗೆಯಾಗಿ ಗೋಚರವಾಗುತ್ತವೆ. ಕೆಲವು ಪ್ರಾಣಿಗಳು ಹಗಲಿನಲ್ಲಿ ಕುರುಡಾಗಿದ್ದರೆ ಇನ್ನು ಕೆಲವು ರಾತ್ರಿಯಲ್ಲಿ ಕುರುಡಾಗಿರುತ್ತವೆ; ಮತ್ತೆ ಕೆಲವು ಹಗಲುರಾತ್ರಿಗಳಲ್ಲಿ ಸಮಾನದೃಷ್ಟಿಯನ್ನು ಪಡೆದಿರುತ್ತವೆ. ಮನುಜರು ಮಾತ್ರ ಜ್ಞಾನಸಂಪನ್ನರೆಂದು ಹೇಳಲಾಗುವು ದಿಲ್ಲ ; ಪಶುಪಕ್ಷಿ ಮೃಗಾದಿಗಳೆಲ್ಲ ಜ್ಞಾನವನ್ನು ಹೊಂದಿರುತ್ತವೆ. ಅವುಗಳಿಗೂ ಮನುಷ್ಯರಂತೆಯೇ ಮಮತೆ-ಮೋಹಗಳಿರುತ್ತವೆ. ಮಕ್ಕಳು ಪ್ರತ್ಯುಪಕಾರ ವನ್ನು ಮಾಡುತ್ತಾರೆಂಬ ಲೋಭದಿಂದ ಮನುಷ್ಯರು ತಮ್ಮ ಮಕ್ಕಳಲ್ಲಿ ಆಸಕ್ತಿಯುಳ್ಳವರಾಗಿರುತ್ತಾರೆ. ಸಂಸಾರಕ್ಕೆ ಕಾರಣವಾದ ''ಮಹಾಮಾಯೆಯ'' ಪ್ರಭಾವದಿಂದ ಮನುಷ್ಯರು ಮಮತೆಯೆಂಬ ಸುಳಿಯಿಂದ ಕೂಡಿದ ಮೋಹವೆಂಬ ಹೊಂಡದಲ್ಲಿ ಬಿದ್ದಿರುತ್ತಾರೆ. ಇದರಲ್ಲಿ ವಿಸ್ಮಯವೇನೂ ಇಲ್ಲ; ಏಕೆಂದರೆ ಆವಳು ಜಗತ್ಪತಿಯಾದ ಶ್ರೀವಿಷ್ಣುವಿನ ಮಹಾಮಾಯೆ.

ಮಹಾಮಾಯೆಯಿಂದಲೇ ಬಂಧಮೋಕ್ಷಗಳಾಗುವುವು ; ಅವುಗಳಿಂದಲೇ ಜಗತ್ತಿನ ಸೃಷ್ಟಿಸ್ಥಿತಿಲಯಗಳಾಗುವುವು. ನಿತ್ಯಳಾದ ಆ ಜಗನ್ಮೂರ್ತಿಯಿಂದ ವಿಶ್ವವೆಲ್ಲವೂ ಆವರಿಸಲ್ಪಟ್ಟಿದೆ. ದೇವತೆಗಳ ಕಾರ್ಯಸಿದ್ಧಿಗಾಗಿ ಅವಳು ಆವಿರ್ಭಾವವನ್ನು ಹೊಂದಿದಾಗ ಆ ನಿತ್ಯಶಕ್ತಿಯು ಉತ್ಪನ್ನಳಾದಳೆಂದು ಲೋಕದಲ್ಲಿ ಹೇಳಿಕೊಳ್ಳುತ್ತಾರೆ.

ಕಲ್ಪಾಂತರದಲ್ಲಿ ಜಗತ್ತೆಲ್ಲ ಜಲಮಯವಾಗಿರಲು ಭಗವಂತನಾದ ಶ್ರೀಮನ್ನಾರಾಯಣನು ಆದಿಶೇಷವೆಂಬ ಶಯನದ ಮೇಲೆ ಯೋಗ ನಿದ್ರೆಯನ್ನು ಹೊಂದಿದನು. ಆಗ ಮಧು-ಕೈಟಭರೆಂಬ ಅಸುರರು ವಿಷ್ಣುಕರ್ಣ ಮಲದಿಂದ ಉದ್ಭೂತರಾಗಿ ಕರ್ತೃವಾದ ಬ್ರಹ್ಮನನ್ನು ಕೊಲ್ಲಲು ಪ್ರಯತ್ನಿಸಿದರು. ಆಗ ಬ್ರಹ್ಮನು ವಿಷ್ಣುವನ್ನು ಎಚ್ಚರಗೊಳಿಸಲು ಅವನ ಕಣ್ಣುಗಳಲ್ಲಿದ್ದ ಯೋಗನಿದ್ರೆಯನ್ನು ಪ್ರಾರ್ಥಿಸಿದನು. ಆಗ ತಾಮಸೀ ರಾತ್ರಿಯಾದ ಯೋಗನಿದ್ರೆಯು ವಿಷ್ಣುವನ್ನು ಎಚ್ಚರಗೊಳಿಸಿ ಅವನ ಮೂಲಕ ಮಧು-ಕೈಟಭರನ್ನು ನಾಶಮಾಡಿಸಿದಳು. ಆದುದರಿಂದ ದೇವಿಗೆ ಮಧು-ಕೈಟಭ ನಾಶಿನಿಯೆಂಬ ಹೆಸರು ಬಂದಿದೆ. ಇಲ್ಲಿಗೆ ಪ್ರಥಮಚರಿತ್ರವು ಮುಗಿಯುತ್ತದೆ.

## ದ್ವಿತೀಯ ಚರಿತ್ರ

ಎರಡನೆಯ ಚರಿತ್ರದಲ್ಲಿ ಸುಮೇಧಋಷಿಯು ಮಹಾಲಕ್ಷ್ಮಿಯ ಚರಿತ್ರೆಯನ್ನು ವಿವರಿಸುತ್ತಾನೆ. ಅಸುರೇಶ್ವರನಾದ ಮಹಿಷಾಸುರನು ದೇವ ಸೈನ್ಯವನ್ನು ಸೋಲಿಸಿ ಇಂದ್ರಪದವಿಯನ್ನು ಪಡೆದನು. ಆಗ ಪರಾಜಿತರಾದ ದೇವತೆಗಳು ಬ್ರಹ್ಮನನ್ನು ಮುಂದೆ ಮಾಡಿಕೊಂಡು ಹರಿ-ಹರರು ಇದ್ದಲ್ಲಿಗೆ ಬಂದರು. ಇವರು ದೇವತೆಗಳ ಅವಮಾನ-ಪರಾಜಯಗಳನ್ನು ಕೇಳಿದ ಕೂಡಲೆ ಅತ್ಯಂತವಾಗಿ ಕೋಪಗೊಂಡರು. ಅನಂತರ ಅತಿ ಕೋಪಪೂರ್ಣರಾದ ಹರಿ-ಹರ-ಬ್ರಹ್ಮರ ಮುಖಗಳಿಂದಲೂ ಇತರ ದೇವತೆಗಳ ಶರೀರದಿಂದಲೂ ಮಹತ್ತಾದ ಒಂದು ತೇಜಃಪುಂಜವು ಹೊರಗೆ ಬಂದಿತು. ಅತುಲವಾದ ಆ ತೇಜಃಪುಂಜವು ಒಂದು ನಾರಿಯ ಆಕಾರವನ್ನು ತಾಳಿ, ದಿಗಂತವನ್ನು ವ್ಯಾಪಿಸಿಕೊಂಡಿತು. ಭಿನ್ನ ಭಿನ್ನ ದೇವತೆಗಳ ತೇಜಸ್ಸುಗಳು ಮಹಾನಾರಿಯ ಅಂಗಗಳಾದುವು: ಶಾಂಭವ ತೇಜಸ್ಸು ಅವಳ

ಮುಖವಾಯಿತು; ವೈಷ್ಣವ ತೇಜಸ್ಸು ಅವಳ ಬಾಹುಗಳಾದುವು, ಬ್ರಹ್ಮ ತೇಜಸ್ಸಿನಿಂದ ಅವಳ ಪಾದಗಳಾದುವು. ಹೀಗೆಯೇ ಯಮ, ಸೋಮ, ಇಂದ್ರ, ವರುಣ ಇವರ ತೇಜಸ್ಸುಗಳಿಂದ ಕೂದಲು, ಸ್ತನ, ನಡು, ಮೊಣಕಾಲು ಮೊದಲಾದ ಅಂಗಗಳಾದುವು. ಅನಂತರ ಜಯಾರ್ಥಿಗಳಾದ ದೇವತೆಗಳು ತಮ್ಮ ತಮ್ಮ ಆಯುಧಗಳನ್ನು ಆ ದೇವತೆಗೆ ಕೊಟ್ಟರು. ಈ ದೇವಿಯೇ ಮಹಾಲಕ್ಷ್ಮೀ. ಇವಳ ಘೋರ ಗರ್ಜನೆಯಿಂದ ಲೋಕಗಳು ಕಂಪನಗೊಂಡವು. ಅನಂತರ ಸರ್ವೇಶ್ವರಿಯೂ ಜಗನ್ಮಾತೆಯೂ ಆದ ದೇವಿಯು ರಾಕ್ಷಸನಾಯಕರನ್ನೆಲ್ಲ ವಧಿಸಿ, ತನ್ನ ಪಾದದಿಂದ ಮಹಿಷಾಸುರನನ್ನು ಆಕ್ರಮಿಸಿಕೊಂಡು ಶೂಲದಿಂದ ಪ್ರಹರಿಸಿ ಆತನನ್ನು ಮಹಿಷಶರೀರದಿಂದ ಮುಕ್ತನನ್ನಾಗಿ ಮಾಡಿದಳು; ಆಗ ಸಮಸ್ತ ಭೂತಗಳೂ ಜಯಘೋಷವನ್ನು ಮಾಡಿದವು. ಮಹಿಷಾಸುರನ ವಧೆಯಾದ ಮೇಲೆ ಇಂದ್ರಾದಿದೇವತೆಗಳೆಲ್ಲ ದೇವಿಯನ್ನು ಸ್ತುತಿಸಿದರು. ಪ್ರಸನ್ನಳಾದ ದೇವಿಯು ದೇವತೆಗಳು ಸ್ಮರಿಸಿ ಕೊಂಡಾಗಲೆಲ್ಲ ತಾನು ಬಂದು ಅವರ ಕಷ್ಟಗಳನ್ನು ಪರಿಹರಿಸುವುದಾಗಿಯೂ ಭಕ್ತಜನರಿಗೆ ವೈಭವವನ್ನು ಅನುಗ್ರಹಿಸುವುದಾಗಿಯೂ ಮಾತುಕೊಟ್ಟು ಅದೃಶ್ಯಳಾದಳು.

ಇಲ್ಲಿಗೆ ಮಹಿಷಾಸುರಮರ್ದಿನಿಯೂ ರಜೋಗುಣಪ್ರವರ್ತಕಳೂ ಆದ ಮಹಾಲಕ್ಷ್ಮಿಯ ಮಧ್ಯಮಚರಿತ್ರವು ಮುಗಿಯುತ್ತದೆ.

## ತೃತೀಯ ಚರಿತ್ರ

ದೇವಿಯ ಕೊನೆಯ ಚರಿತ್ರಕ್ಕೆ ಉತ್ತಮ ಚರಿತ್ರವೆಂಬ ಹೆಸರೂ ಇದೆ. ಹಿಂದೆ ಶುಂಭ, ನಿಶುಂಭ ಎಂಬ ಅಸುರರು ತಮ್ಮ ಪರಾಕ್ರಮದಿಂದ ಇಂದ್ರನ ಅಧಿಕಾರವನ್ನೂ ದೇವತೆಗಳ ಹವಿರ್ಭಾಗಗಳನ್ನೂ ಅಪಹರಿಸಿದ್ದರು. ಅಯೋನಿಜೆಯಾದ ಕನ್ಯೆಯಿಂದ ಹೊರತು ಮತ್ತೆ ಯಾರಿಂದಲೂ ಮೃತ್ಯುವು ಸಂಭವಿಸುವುದಿಲ್ಲವೆಂಬ ಬ್ರಹ್ಮನ ವರವೂ ಇದ್ದಿತು. ಇಂಥ ಆಪತ್ತಿಗೆ ಗುರಿಯಾದ ದೇವತೆಗಳೆಲ್ಲರೂ 'ಆಪತ್ತಿನಲ್ಲಿರುವಾಗ ನನ್ನನ್ನು ಸ್ಮರಿಸಿ, ಆ ಕ್ಷಣದಲ್ಲಿಯೇ ನಿಮ್ಮ ಆಪತ್ತುಗಳನ್ನು ನಾಶಮಾಡುತ್ತೇನೆ' ಎಂಬ ದೇವಿಯ ವರವನ್ನು ಸ್ಮರಿಸಿಕೊಂಡು ಹಿಮಾಲಯಕ್ಕೆ ಹೋಗಿ ವಿಷ್ಣುಮಾಯೆ

ಯಾದ ದೇವಿಯನ್ನು ಸ್ತುತಿಸಿದರು. ಆಗ ಪಾರ್ವತಿಯು ಜಾಹ್ನವೀ ಜಲದಲ್ಲಿ ಸ್ನಾನ ಮಾಡಲು ಬಂದು ದೇವತೆಗಳಿಗೆ ಪ್ರತ್ಯಕ್ಷಳಾದಳು. ಪಾರ್ವತಿಯ ಶರೀರಕೋಶದಿಂದ ಅತೀವ ಸುಂದರಿಯೂ ಮಂಗಳಮೂರ್ತಿಯೂ ಆದ ದೇವಿಯು ಉದ್ಭವಿಸಿದಳು. ಶರೀರ ಕೋಶದಿಂದ ಹುಟ್ಟಿದುದರಿಂದ ಕೌಶಿಕೀ ಎಂಬ ಹೆಸರು ಬಂದಿತು. ದೇವಿಯ ಲಾವಣ್ಯದಿಂದ ಮೋಹಿತನಾದ ಶುಂಭಾಸುರನು ಅವಳನ್ನು ಕರೆತರಲು ತನ್ನ ದೈತ್ಯರನ್ನು ಕಳುಹಿಸಿದನು. ಅವರಾರೂ ಜೀವದಿಂದ ಹಿಂತಿರುಗಲಿಲ್ಲ. ಮೊದಲು ಧೂಮ್ರ ಲೋಚನನೆಂಬ ದಂಡಾಧಿಕಾರಿಯು ದೇವಿಯ ಹುಂಕಾರದಿಂದಲೇ ಭಸ್ಮೀಭೂತನಾದನು. ಅನಂತರ ದೇವಿಯ ಲಲಾಟದಿಂದ ಉದ್ಭವಿಸಿದ ಕಾಳೀದೇವಿಯಿಂದ ಚಂಡ-ಮುಂಡರು ನಾಶವಾದರು. ಚಂಡ-ಮುಂಡರನ್ನು ವಧಿಸಿದ್ದ ರಿಂದ ಕಾಳಿಗೆ ಚಾಮುಂಡೀ ಎಂಬ ಹೆಸರು ಬಂದಿತು. ಅನಂತರ ರಕ್ತಬೀಜ, ಶುಂಭ, ನಿಶುಂಭ ಇವರೆಲ್ಲರೂ ದೇವಿಯಿಂದ ಹತರಾದರು. ಶುಂಭನು ಮಡಿಯುವುದಕ್ಕೆ ಮೊದಲು ಅಸುರರೆಲ್ಲ ದೇವಿಯ ಶಕ್ತಿಗಳಾದ ಶಿವದೂತೀ, ಕೌಮಾರೀ, ಬ್ರಹ್ಮಾಣೀ, ಮಾಹೇಶ್ವರೀ, ವೈಷ್ಣವೀ ಮೊದಲಾದ ಮಾತೃಕೆಗಳಿಂದ ಮಡಿದರು. ಆದರೆ ಶುಂಭನನ್ನು ಕೊಲ್ಲಲು ದೇವಿಯು ತನ್ನ ಶಕ್ತಿಗಳನ್ನೆಲ್ಲ ತನ್ನಲ್ಲಿಯೇ ಉಪಸಂಹರಿಸಿಕೊಂಡು ತಾನೊಬ್ಬಳೇ ನಿಂತಳು. ದೇವಿಯು ಅದ್ವಿತೀಯಳೆಂಬುದು ಆ ದೈತ್ಯನಿಗೆ ತಿಳಿದಿರಲಿಲ್ಲ.

ದೇವಿಯ ಶೂಲಾಗ್ರದಿಂದ ಶುಂಭನು ತನ್ನ ಅಸುವನ್ನು ನೀಗಿಕೊಂಡ ಮೇಲೆ ದೇವತೆಗಳು ದೇವಿಯ ಅನುಪಮಶಕ್ತಿಯನ್ನೂ ನಾನಾ ವ್ಯಕ್ತಿಗಳನ್ನೂ ಮಾತೃಹೃದಯವನ್ನೂ ಹೊಗಳುತ್ತಾರೆ. ಅನಂತರ ದೇವಿಯು ದೇವತೆಗಳನ್ನೆಲ್ಲ ಪುನಃ ಅನುಗ್ರಹಿಸಿ ತನ್ನ ಮುಂದಿನ ಅವತಾರಗಳನ್ನು ತಿಳಿಸುತ್ತಾಳೆ. ಇಲ್ಲಿಗೆ ಸತ್ತ್ವಮೂರ್ತಿಯಾದ ಮಹಾಸರಸ್ವತಿಯ ಚರಿತ್ರವು ಮುಗಿಯುತ್ತದೆ.

ಸುಮೇಧ ಋಷಿಯಿಂದ ದೇವೀತತ್ತ್ವವನ್ನೂ ಅವಳ ಪೂಜಾ ಕ್ರಮವನ್ನೂ ಅರಿತುಕೊಂಡು ಸುರಥನೂ ಸಮಾಧಿಯೂ ನದೀಪುಲಿನದಲ್ಲಿ ಸಂಸ್ಥಿತರಾಗಿ ಮೃನ್ಮಯಿಯಾದ ದೇವಿಯ ಮೂರ್ತಿಯನ್ನು ಮಾಡಿ ದೇವೀ ಸೂಕ್ತದಿಂದ ಅವಳನ್ನು ಜಪಿಸಿ, ಅವಳ ದರ್ಶನವನ್ನು ಪಡೆಯುತ್ತಾರೆ. ಇವರ ತಪಸ್ಸಿನಿಂದ ತೃಪ್ತಳಾದ ಜಗದ್ಧಾತ್ರಿಯು ವರವನ್ನು ಕೊಡಲು ಬಯಸುತ್ತಾಳೆ.

ರಾಜನು ರಾಜ್ಯಾಧಿಕಾರವನ್ನು ಕೇಳಿಕೊಂಡು ಮುಂದಿನ ಜನ್ಮದಲ್ಲಿ ಸಾವರ್ಣಿಕ-ಮನುವಾಗಿ ಹುಟ್ಟುತ್ತಾನೆ. ಆದರೆ ಜ್ಞಾನಿಯಾದ ವೈಶ್ಯವರ್ಯನು ವಿರಕ್ತಮಾನಸನಾಗಿ ಅಹಂಕಾರ-ಮಮಕಾರ ರೂಪದಲ್ಲಿರುವ ಆಸಕ್ತಿಯನ್ನು ನಾಶಮಾಡುವ ಜ್ಞಾನವನ್ನು ಬಯಸಿ ಸಂಸಿದ್ಧಿಯನ್ನು ಪಡೆಯುತ್ತಾನೆ.

ದೇವಿಯು ವಿಶ್ವೇಶ್ವರೀ, ಜಗದ್ಧಾತ್ರೀ; ಉತ್ಪತ್ತಿಸ್ಥಿತಿಲಯಗಳಿಗೆ ಕಾರಣಳು; ಇವಳೇ ಸ್ವಾಹಾ-ಸ್ವಧಾ-ವಷಟ್ ಮೊದಲಾದ ಮಂತ್ರಗಳ ಸ್ವರೂಪಳು; ಅ ಉ ಮ ಎಂಬ ಮೂರು ಮಾತ್ರೆಗಳ ಸ್ವರೂಪಳು. ವರ್ಣಮಾಲೆಯಲ್ಲಿರುವ ಶಕ್ತಿಯೆಲ್ಲ ಅವಳದೇ. ಇವಳನ್ನು ಉಚ್ಚರಿಸಲು ಸಾಧ್ಯವಿಲ್ಲ. ಇವಳೇ ಮಹಾವಿದ್ಯೆಯೂ ಮಹಾಮೋಹಳೂ ಆಗಿರುತ್ತಾಳೆ, ಇವಳೇ ಸರ್ವಕ್ಕೂ ಕಾರಣಳಾಗಿ ಗುಣತ್ರಯವನ್ನು ಕಾರ್ಯರೂಪಕ್ಕೆ ತಂದಿರುತ್ತಾಳೆ. ಇವಳೇ ಕಾಳರಾತ್ರಿ, ಮಹಾರಾತ್ರಿ ಮತ್ತು ಮೋಹರಾತ್ರಿ. ಬುದ್ಧಿಯ ವೃತ್ತಿಗಳೆಲ್ಲ ದೇವಿಯ ರೂಪಗಳೇ. ನಾನಾ ಆಯುಧಗಳನ್ನು ಧರಿಸಿ ಭಯಂಕರಳಾಗಿ ಕಂಡುಬಂದರೂ, ಜಗನ್ಮಾತೆಯು ಸೌಮ್ಯಸ್ವರೂಪಳು. ಜಗತ್ತಿನಲ್ಲಿರುವ ಸೌಮ್ಯವಸ್ತುಗಳಿಗಿಂತಲೂ ಸೌಮ್ಯತರಳು. ಅತಿ ಸುಂದರಿಯು. ಪರಾಪರಗಳನ್ನೂ ಮೀರಿರುವ ಪರಮೇಶ್ವರಿಯು. ಜಗತ್ತಿನಲ್ಲಿ ಸತ್ ಅಥವಾ ಅಸತ್ ಎಂಬ ವಸ್ತುವಿದ್ದರೆ ಅದರಲ್ಲಿರುವ ಶಕ್ತಿಯು ಇವಳದ್ದೇ. ಇದು ಮೊದಲನೆಯ ಚರಿತ್ರದಲ್ಲಿ ಬರುವ ಸ್ತುತಿಯ ಸಾರ, ದೇವಿಯ ಸ್ವರೂಪ-ರೂಪ-ಗುಣಗಳು.

ಮಧ್ಯಮಚರಿತ್ರದಲ್ಲಿ ಕೆಲವು ಗಂಭೀರವೂ ಕಾವ್ಯಗುಣದಿಂದ ಕೂಡಿರುವುದೂ ಆದ ಸ್ತುತಿಗಳು ಬರುತ್ತವೆ: ಯಾವಳು ಪುಣ್ಯವಂತರ ಮನೆಗಳಲ್ಲಿ ಲಕ್ಷ್ಮೀಸ್ವರೂಪಳಾಗಿರುವಳೋ ಅವಳೇ ಪಾಪಿಗಳ ಮನೆಯಲ್ಲಿ ಅಲಕ್ಷ್ಮಿಯಾಗಿದ್ದಾಳೆ, ಜ್ಞಾನಿಗಳ ಹೃದಯದಲ್ಲಿ ಬುದ್ಧಿಯಾಗಿದ್ದಾಳೆ. ಸಾಧುಗಳಲ್ಲಿ ಶ್ರದ್ಧೆಯಾಗಿದ್ದಾಳೆ, ಸತ್ಕುಲಪ್ರಸೂತರಲ್ಲಿ ಲಜ್ಜೆಯಾಗಿದ್ದಾಳೆ. ಭಗವತಿಯೇ ಮೋಕ್ಷಕ್ಕೆ ಕಾರಣವಾದ ಬ್ರಹ್ಮವಿದ್ಯೆ. ಮುಮುಕ್ಷುಗಳೂ ಜಿತೇಂದ್ರಿಯರೂ ಆದ ಮುನಿಗಳು ಅವಳನ್ನೇ ಉಪಾಸಿಸುತ್ತಾರೆ. ದೇವಿಯು ವಿಮಲವಾದ ವೇದಗಳಾಗಿದ್ದರೂ ಶಬ್ದಬ್ರಹ್ಮಸ್ವರೂಪಳಾಗಿದ್ದರೂ ಜಗತ್ತಿನ ಯೋಗಕ್ಷೇಮಗಳಿಗೆ ಸಾಧನವಾದ ಲೌಕಿಕ ವಿದ್ಯೆಯೂ ಆಗಿದ್ದಾಳೆ.

ದುರ್ಗಮವಾದ ಭವಸಾಗರವನ್ನು ದಾಟಿಸುವ ಅಸಂಗವಾದ ನೌಕೆಯು ದುರ್ಗಾದೇವಿ. ಮಂದಹಾಸದಿಂದ ಕೂಡಿ ಪರಿಪೂರ್ಣಚಂದ್ರನಂತೆ ನಿರ್ಮಲವಾಗಿ ರಾರಾಜಿಸುವ ದೇವಿಯ ಜಗನ್ಮೋಹಕವಾದ ಮುಖವನ್ನು ನೋಡಿ ಮಹಿಷಾಸುರನಿಗೆ ಕೋಪವುಂಟಾದುದು ಆಶ್ಚರ್ಯವೇ ಸರಿ! ಹಾಗೆಯೇ ಅವಳು ಕೋಪ ಗೊಂಡಾಗ ಅವಳ ಭಯಂಕರವಾದ ಮುಖವನ್ನು ನೋಡಿ ಆ ಅಸುರನು ತಕ್ಷಣವೇ ಪ್ರಾಣವನ್ನು ಬಿಡದಿದ್ದುದು ಮತ್ತೂ ಆಶ್ಚರ್ಯವೇ ಸರಿ! ದೇವಿಯು ಭಕ್ತಜನರಲ್ಲಿ ಪ್ರಸನ್ನಳಾದರೆ ಅವರು ಯಶಸ್ಸಿಗೆ ಭಾಗಿಗಳಾಗುತ್ತಾರೆ; ಪುರುಷಾರ್ಥಗಳು ಬರುತ್ತವೆ. ವಿನಯವಂತರಾದ ಪತ್ನೀ-ಪುತ್ರ-ಭೃತ್ಯರಿಂದ ಧನ್ಯರಾಗುವರು. ಕಷ್ಟದಲ್ಲಿ ಅವಳನ್ನು ಸ್ಮರಿಸಿ ಕೊಂಡರೆ, ಭೀತಿಯನ್ನು ನಿವಾರಿಸುತ್ತಾಳೆ; ಸುಖದಲ್ಲಿರುವಾಗ ಸ್ಮರಿಸಿಕೊಂಡರೆ ಅತೀವ ಶುಭವಾದ ಮತಿಯನ್ನು ಕೊಡುತ್ತಾಳೆ. ಇವಳಿಗಿಂತ ದಯಾರ್ದ್ರವಾದ ಹೃದಯವುಳ್ಳವರು ಮತ್ತಾರೂ ಇಲ್ಲ. ದೇವಿಯು ತನ್ನ ಪ್ರಚಂಡ ದೃಷ್ಟಿಯಿಂದಲೇ ಅಸುರರನ್ನು ಬೂದಿ ಮಾಡಬಲ್ಲಳಾದರೂ ಅವರು ಶಸ್ತ್ರಪೂತರಾಗಿ ಒಳ್ಳೆಯ ಗತಿಯನ್ನು ಹೊಂದಲಿ ಎಂಬ ಅಭಿಪ್ರಾಯದಿಂದ ಶಸ್ತ್ರಗಳನ್ನು ಅವರ ಮೇಲೆ ಪ್ರಹರಿಸುತ್ತಾಳೆ. ದೇವಿಯ ಶಸ್ತ್ರಾಸ್ತ್ರಗಳಿಂದ ಹೊರಸೂಸುವ ತೀಕ್ಷ್ಣಕಾಂತಿ ಪ್ರವಾಹದಿಂದ ಅಸುರಸೈನ್ಯಗಳು ನಾಶವಾಗದಿದ್ದರೆ ಇಂದುಖಂಡದಂತೆ ಶೀತಲರಶ್ಮಿಗಳನ್ನು ಹೊರಸೂಸುತ್ತಿರುವ ದೇವಿಯ ಮುಖವನ್ನು ಅವರು ನೋಡಿದುದೇ ಕಾರಣ. ಅವಳ ಪ್ರತಿಯೊಂದು ಕೆಲಸವೂ ವೈರಿಗಳಲ್ಲಿ ದಯೆಯನ್ನು ತೋರಿಸುತ್ತದೆ. ಹೃದಯದಲ್ಲಿ ಅನುಕಂಪೆ, ಸಮರದಲ್ಲಿ ನಿಷ್ಠುರತೆ ಇವೆರಡರ ಸಂಗಮ ದೇವಿಯಲ್ಲಿ ಹೊರತು ಇನ್ನೆಲ್ಲಿಯೂ ಕಂಡುಬರುವುದಿಲ್ಲ. ಜಗದಂಬಿಕೆಯನ್ನು ಯಾರು ಭಕ್ತಿಯಿಂದ ಸ್ತುತಿಸುತ್ತಾರೆಯೋ ಅವರ ಸಮೃದ್ಧಿಗೆ ಅವಳು ಕಾರಣಳಾಗುತ್ತಾಳೆ.

ಉತ್ತಮಚರಿತ್ರದಲ್ಲಿ ಮಂತ್ರರೂಪದಲ್ಲಿರುವ ಕೆಲವು ಪ್ರಸಿದ್ಧವಾದ ಸ್ತವಗಳು ಬರುತ್ತವೆ: 'ಯಾವ ದೇವಿಯು ಸರ್ವಪ್ರಾಣಿಗಳಲ್ಲಿ ವಿಷ್ಣು ಮಾಯೆಯೆಂದು ಕರೆಯಲ್ಪಡುವಳೋ ಅವಳನ್ನು ಪುನಃ ಪುನಃ ನಮಿಸುತ್ತೇವೆ', ಯಾ ದೇವೀ ಸರ್ವಭೂತೇಷು ವಿಷ್ಣುಮಾಯೇತಿ ಶಬ್ದಿತಾ । ನಮಸ್ತಸ್ಯೈ

ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ಎಂಬುದು ದೇವತೆಗಳು ಮಾಡುವ ಮೊದಲನೆಯ ಪ್ರಾರ್ಥನೆಯ ಮಾದರಿಯಾಗಿರುತ್ತದೆ. ಹೀಗೆಯೇ ದೇವಿಯು ಸಮಸ್ತ ಪ್ರಾಣಿಗಳ ಚೇತನ, ಬುದ್ಧಿ, ನಿದ್ರೆ, ಹಸಿವು, ಛಾಯೆ, ಶಕ್ತಿ, ಬಾಯಾರಿಕೆ, ಕ್ಷಮೆ, ಜಾತಿ, ಲಜ್ಜೆ, ಶಾಂತಿ, ಶ್ರದ್ಧೆ, ಲಕ್ಷ್ಮೀ, ಧೃತಿ, ವೃತ್ತಿ, ಸ್ಮೃತಿ, ದಯೆ, ನೀತಿ, ತುಷ್ಟಿ, ಪುಷ್ಟಿ, ಮಾತೃ, ಭ್ರಾಂತಿ, ಇಂದ್ರಿಯಗಳ ಅಧಿಷ್ಠಾತ್ರಿ– ಇವುಗಳಾಗಿರುತ್ತಾಳೆ.

ದೇವಿಯು ಶುಂಭಾಸುರನೇ ಮೊದಲಾದ ಅಸುರರನ್ನು ಸಂಪೂರ್ಣವಾಗಿ ಸಂಹರಿಸಿದಮೇಲೆ ಇಂದ್ರಾದಿದೇವತೆಗಳು ಕಾತ್ಯಾಯನೀ ಎನಿಸಿದ ದೇವಿಯನ್ನು ಮತ್ತೊಂದು ಸಲ ಸ್ತುತಿಸುತ್ತಾರೆ; 'ನಾರಾಯಣಿ ನಮೋಽಸ್ತು ತೇ' ಎಂಬುದು ಈ ಪ್ರಾರ್ಥನೆಯ ಆಕೃತಿ; ದೇವಿಯು ಭೂಮಿಯ ಸ್ವರೂಪದಿಂದ ಜಗತ್ತಿಗೆ ಆಧಾರಳಾಗಿರುತ್ತಾಳೆ: ಅವಳ ಜಲ ರೂಪದಿಂದ ಜಗತ್ತಿಗೆ ತೃಪ್ತಿಯುಂಟಾಗಿದೆ. ಅವಳ ಮಾಯಾರೂಪದಿಂದ ವಿಶ್ವವು ಮೋಹವನ್ನು ಹೊಂದಿದ್ದರೂ ಅವಳು ಪ್ರಸನ್ನಳಾದರೆ ಮುಕ್ತಿಯನ್ನೂ ಅನುಗ್ರಹಿಸುತ್ತಾಳೆ. ಸಮಸ್ತ ಸ್ತ್ರೀಯರೂ, ಸಮಸ್ತ ವಿದ್ಯೆಗಳೂ ದೇವಿಯ ಅಂಶಗಳು. ಸಮಸ್ತ ಜಂತುಗಳ ಹೃದಯದಲ್ಲಿ ಬುದ್ಧಿಯಾಗಿದ್ದು ಸ್ವರ್ಗಾಪವರ್ಗಗಳನ್ನು ದೇವಿಯು ಅನುಗ್ರಹಿಸುತ್ತಾಳೆ; ಅಂಥ ನಾರಾಯಣವಲ್ಲಭೆಯನ್ನು ನಾವು ನಮಿಸುತ್ತೇವೆ. ಅವಳೇ ಕಾಲದ ಸೂಕ್ಷ್ಮಾಂಶಗಳಾಗಿ ಜಗತ್ತಿನ ಪರಿಣಾಮವನ್ನು ಉಂಟುಮಾಡುತ್ತಾಳೆ. ದೇವಿಯು ಸರ್ವಮಂಗಳಗಳ ಮಂಗಳಸ್ವರೂಪಳು, ಶಿವೆಯು, ಸರ್ವಾರ್ಥಗಳನ್ನು ಸಾಧಿಸುವವಳು, ಶರಣಾಗತ ವತ್ಸಲಳು, ತ್ರಿನೇತ್ರಳಾದ ಗೌರಿ ಮತ್ತು ನಾರಾಯಣಪ್ರಿಯೆ. ಅವಳು ಸಂತುಷ್ಟಳಾದರೆ ಸಮಸ್ತ ರೋಗಗಳನ್ನೂ ನಾಶಗೊಳಿಸುತ್ತಾಳೆ, ಮನೋರಥಗಳನ್ನೆಲ್ಲ ಅನುಗ್ರಹಿಸುತ್ತಾಳೆ; ಅವಳನ್ನು ಆಶ್ರಯಿಸಿದವರಿಗೆ ವಿಪತ್ತಿಲ್ಲ; ಇಷ್ಟೇ ಅಲ್ಲ, ಇವರು ಕೂಡ ಇತರರಿಗೆ ಆಶ್ರಯದಾತರಾಗುತ್ತಾರೆ.

ದೇವೀಮಾಹಾತ್ಮ್ಯದಲ್ಲಿ ಬರುವ ಸ್ತವಗಳೆಲ್ಲ ಅತ್ಯಂತ ಲಲಿತವಾದ. ರಮಣೀಯವಾದ ಕಾವ್ಯಭಾಷೆಯಲ್ಲಿ ದೇವಿಯ ಉಗ್ರ-ಸುಂದರ

ರೂಪಗಳನ್ನೂ ದುಷ್ಟಮರ್ದನ-ಶಿಷ್ಟರಕ್ಷಣಗಳನ್ನೂ ಬಹುವಿಧ ಶಕ್ತಿಗಳನ್ನೂ, ವಂದಾರುಜನ ವಾತ್ಸಲ್ಯವನ್ನೂ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಅವಳು ಕಾರಣವಾಗಿರುವುದನ್ನೂ ವರ್ಣಗಳಲ್ಲಿ ಘಾತ್ಮಕೆಯಾಗಿರುವುದನ್ನೂ, ವೇದ ಮಂತ್ರಗಳ ಸ್ವರೂಪ ವಾಗಿರುವುದನ್ನೂ ವರ್ಣಿಸಿ, ನಮಗೆ ಅವಳಲ್ಲಿ ಭಕ್ತಿಯನ್ನೂ ಸಮಸ್ತ ಸ್ತ್ರೀಯರಲ್ಲಿ ಮಾತೃಭಾವವನ್ನೂ ಉತ್ಪನ್ನ ಮಾಡುತ್ತವೆ. ದೇವೀಮಾಹಾತ್ಮ್ಯವನ್ನು ಭಕ್ತಿಯಿಂದ ಓದಿದವರಿಗೆಲ್ಲ ಜಗದಂಬಿಕೆಯು ಭಕ್ತಿಮುಕ್ತಿಗಳನ್ನು ನೀಡಲಿ.

ಮೈಸೂರಿನ ಶ್ರೀರಾಮಕೃಷ್ಣಾಶ್ರಮವು ೧೯೫೮ರಲ್ಲಿ ಶ್ರೀಲಲಿತಾಸಹಸ್ರ ನಾಮವನ್ನು ಭಾಷ್ಯಸಹಿತ ಮೊದಲನೆಯ ಸಲ ಪ್ರಕಾಶಿಸಿತು. ಅಂದಿನಿಂದ ಅನೇಕ ಜನ ಮುಮುಕ್ಷುಗಳು ದೇವೀಮಾಹಾತ್ಮ್ಯವನ್ನು ಅದೇ ರೀತಿ ಭಾಷಾಂತರಿಸಿ ಪ್ರಕಟಿಸಬೇಕೆಂದು ಒತ್ತಾಯಮಾಡುತ್ತಿದ್ದರು. ಅವರ ಬಯಕೆ ಈಗ ಈಡೇರಿದ್ದಕ್ಕೆ ನಮಗೆ ಅತ್ಯಾನಂದವಾಗಿದೆ. ಸ್ವಾಮಿ ಹರ್ಷಾನಂದರು ಮಾಡಿರುವ ದೇವೀಮಾಹಾತ್ಮ್ಯದ ಈ ಅನುವಾದವು ಪ್ರಾಮಾಣಿಕವೂ ನಿರ್ದುಷ್ಟವೂ ಆಗಿದ್ದು ಕನ್ನಡ ಜನರಿಗೆ ಮಹದುಪಕಾರವನ್ನು ಮಾಡಿದೆ.

ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ ।
ಶರಣ್ಯೇ ತ್ರ್ಯಂಬಕೇ ಗೌರಿ ನಾರಾಯಣಿ ನಮೋಽಸ್ತು ತೇ ॥

ಶ್ರೀರಾಮಕೃಷ್ಣ ಆಶ್ರಮ, ಮಂಗಳೂರು — ಸ್ವಾಮಿ ಆದಿದೇವಾನಂದ
ಚಾಂದ್ರಮಾನ ಯುಗಾದಿ, ೨-೪-೧೯೭೦

# ಅರಿಕೆ

## (ಪ್ರಥಮ ಮುದ್ರಣ)

ಪಾರಾಯಣವಿಧಿ, ಕವಚಾದಿತ್ರಯ, ರಹಸ್ಯತ್ರಯ – ಇವುಗಳ ಕನ್ನಡಾನುವಾದ ಸಹಿತ ಶ್ರೀ ದುರ್ಗಾಸಪ್ತಶತಿಯು ಕನ್ನಡದಲ್ಲಿ ಈ ರೂಪದಲ್ಲಿ ಬರುತ್ತಿರುವುದು, ನಮಗೆ ತಿಳಿದಂತೆ, ಮೊದಲಬಾರಿ. ಈ ಗ್ರಂಥದಲ್ಲಿ ಎರಡು ಭಾಗಗಳಿವೆ. ಪ್ರಥಮಾರ್ಧದಲ್ಲಿ ಸಾಂಗಸಪ್ತಶತಿಯನ್ನೂ ದ್ವಿತೀಯಾರ್ಧದಲ್ಲಿ ಕೆಲವು ದೇವೀಸ್ತೋತ್ರಗಳನ್ನೂ ಕೊಡಲಾಗಿದೆ.

ಸಪ್ತಶತಿಯ ಪಾಠವನ್ನು ಕೊಡುವಾಗ ಮದ್ರಾಸಿನ ಶ್ರೀರಾಮಕೃಷ್ಣ ಮಠದಿಂದ ಪ್ರಕಾಶಿತವಾದ ದೇವೀಮಾಹಾತ್ಮ್ಯವನ್ನೂ, ಬೆಂಗಳೂರು ಪ್ರೆಸ್ಸಿನ ಶ್ರೀದುರ್ಗಾಸಪ್ತಶತಿಯನ್ನೂ ಮತ್ತು ಗೋರಖ್‌ಪುರದ ಗೀತಾಪ್ರೆಸ್ಸಿನ ಸಚಿತ್ರ ಶ್ರೀದುರ್ಗಾಸಪ್ತಶತಿಯನ್ನೂ ಬಳಸಲಾಗಿದೆ. ಅನುವಾದ ಮಾಡುವಾಗ ಅಕ್ಷರಾರ್ಥವು ಕೆಡದಂತೆ ಭಾವಾರ್ಥವನ್ನು ಕೊಡಲು ಪ್ರಯತ್ನಿಸಿದೆ.

ಪ್ರಸ್ಥಾನತ್ರಯ, ಲಲಿತಾಸಹಸ್ರನಾಮ ಮೊದಲಾದ ಗ್ರಂಥಗಳನ್ನು ಅನುವಾದಿಸಿ ಕನ್ನಡ ಮುಮುಕ್ಷು-ಪ್ರಪಂಚಕ್ಕೆ ಚಿರಪರಿಚಿತರಾಗಿರುವ ಪೂಜ್ಯ ಆದಿದೇವಾನಂದಸ್ವಾಮಿಗಳು ಈ ಗ್ರಂಥಕ್ಕೆ ಮುನ್ನುಡಿಯನ್ನು ಬರೆದು ಕೊಟ್ಟದ್ದಕ್ಕಾಗಿ ಅವರಿಗೆ ಅತ್ಯಂತ ಕೃತಜ್ಞನಾಗಿರುತ್ತೇನೆ.

'ನಮೋ ದೇವ್ಯೈ ಮಹಾದೇವ್ಯೈ ಶಿವಾಯೈ ಸತತಂ ನಮಃ'

ಮೈಸೂರು
ಚಾಂದ್ರಮಾನ ಯುಗಾದಿ — ಸ್ವಾಮಿ ಹರ್ಷಾನಂದ
೨-೪-೧೯೭೦

# ವಿಷಯ ಸೂಚಿಕೆ

## ಶ್ರೀದುರ್ಗಾಸಪ್ತಶತೀ

## ಕೆಲವು ದೇವೀಸ್ತೋತ್ರಗಳು

# ಶ್ರೀದುರ್ಗಾಸಪ್ತಶತೀಪಾರಾಯಣಕ್ರಮಃ

೧. ಆಚಮನ.

೨. ಪ್ರಾಣಾಯಾಮ.

೩. ಸಂಕಲ್ಪ :

ಓಂ ನಮಃ ಪರಮಾತ್ಮನೇ, ಶ್ರೀಪುರಾಣಪುರುಷೋತ್ತಮಸ್ಯ ಶ್ರೀವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಅದ್ಯ ಶ್ರೀಬ್ರಹ್ಮಣೋ ದ್ವಿತೀಯಪರಾರ್ಧೇ ಶ್ರೀ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮ ಚರಣೇ ಜಂಬೂದ್ವೀಪೇ ಭಾರತವರ್ಷೇ ಭರತಖಂಡೇ ಆರ್ಯಾವರ್ತಾಂತರ್ಗತಬ್ರಹ್ಮಾವರ್ತೈಕ ದೇಶೇ...ಪುಣ್ಯಪ್ರದೇಶೇ...ನಾಮಸಂವತ್ಸರೇ...ಆಯನೇ...ಮಾಸೇ... ಪಕ್ಷೇ...ತಿಥೌ...ವಾಸರಾನ್ವಿತಾಯಾಂ...ನಕ್ಷತ್ರೇ...ರಾಶಿಸ್ಥಿತೇ ಭಾಸ್ಕರೇ ಅಸ್ಮಾಕಂ ಸರ್ವೇಷಾಂ ಸಹಕುಟುಂಬಾನಾಂ ಕ್ಷೇಮಸ್ಥೈರ್ಯವಿಜಯ ವೀರ್ಯಾಯುರಾರೋಗ್ಯೈಶ್ವರ್ಯಾದ್ಯಭಿವೃದ್ಧ್ಯರ್ಥಂ ಸಮಸ್ತಮಂಗಲಾ ವಾಪ್ತ್ಯರ್ಥಂ ಆದಿತ್ಯಾದಿ ನವಗ್ರಹದೋಷಪೀಡಾಪರಿಹಾರಾರ್ಥಂ ಧರ್ಮಾರ್ಥಕಾಮಮೋಕ್ಷಚತುರ್ವಿಧಪುಣ್ಯಪುರುಷಾರ್ಥಸಿದ್ಧ್ಯರ್ಥಂ ಚ ಶ್ರೀಮಹಾಕಾಲೀ-ಮಹಾಲಕ್ಷ್ಮೀ-ಮಹಾಸರಸ್ವತೀ ದೇವತಾ ಪ್ರೀತ್ಯರ್ಥಂ ಚಂಡೀಸಪ್ತಶತೀಪಾಠಾಖ್ಯಂ ಕರ್ಮ ಕರಿಷ್ಯೇ, ತದಂಗತ್ವೇನ ಕವಚ-ಅರ್ಗಲಾ-ಕೀಲಕ-ಪಠನಮ್ ಆದ್ಯಂತಯೋರಷ್ಟೋತ್ತರ ಶತಸಂಖ್ಯ ನವಾರ್ಣಜಪಪೂರ್ವಕಂ ಕ್ರಮೇಣ ರಾತ್ರಿಸೂಕ್ತ-ದೇವೀ ಸೂಕ್ತ ಪಠನಮ್ ಅಂತೇ ರಹಸ್ಯತ್ರಯಪಠನಮ್ ಶಾಪೋದ್ಧಾರಾದಿಕಂ ಚ ಕರಿಷ್ಯೇ ॥

---

ಈ ಸಂಕಲ್ಪದ ಪ್ರಕಾರ ಪಾಠಕ್ರಮವು ಹೀಗಿರುತ್ತದೆ. ಕವಚ, ಅರ್ಗಲಾ, ಕೀಲಕ, ನವಾರ್ಣ ಮಂತ್ರಜಪ, ರಾತ್ರಿಸೂಕ್ತ, ಸಪ್ತಶತೀ, ಪುನಃ ನವಾರ್ಣಮಂತ್ರ ಜಪ, ದೇವೀಸೂಕ್ತ, ರಹಸ್ಯತ್ರಯ, ಶಾಪೋದ್ಧಾರಮಂತ್ರಜಪ ಮತ್ತು ಕ್ಷಮಾ ಪ್ರಾರ್ಥನೆ. ಯೋಗರತ್ನಾವಲಿಯೇ ಮೊದಲಾದ ಕೆಲವು ಗ್ರಂಥಗಳಲ್ಲಿ ಕವಚಾದಿತ್ರಯವನ್ನು ಇಲ್ಲಿರುವುದಕ್ಕೆ ವ್ಯತಿರಿಕ್ತವಾಗಿ ಕೊಟ್ಟಿದೆ.

೪. ದೀಪಸ್ಥಾಪನೆ: ದೇವೀಪೀಠದ ಬಲಗಡೆ ನೆಲದ ಮೇಲೆ ದೀಪವೊಂದನ್ನು ಹಚ್ಚಿಟ್ಟು, ಅದಕ್ಕೆ ಗಂಧ-ಪುಷ್ಪ-ಅಕ್ಷತೆಗಳನ್ನು ಸಮರ್ಪಿಸಿ, ಪಂಚೋಪಚಾರಪೂಜೆಯನ್ನು ಮಾಡಿ ಹೀಗೆ ಪ್ರಾರ್ಥಿಸಬೇಕು:

**ಭೋ ದೀಪ ದೇವೀರೂಪಸ್ತ್ವಂ ಕರ್ಮಸಾಕ್ಷೀ ಹ್ಯವಿಘ್ನಕೃತ್ ।**
**ಯಾವತ್ಕರ್ಮಸಮಾಪ್ತಿಃ ಸ್ಯಾತ್ ತಾವತ್ತ್ವಂ ಸುಸ್ಥಿರೋ ಭವ ॥**

ಅನಂತರ ದೀಪವನ್ನು ನಮಸ್ಕರಿಸಬೇಕು.

೫. ಸರಸ್ವತೀಪೂಜೆ (ಸಪ್ತಶತೀರೂಪದಲ್ಲಿರುವ ಸರಸ್ವತಿಯನ್ನು ಈ ಮಂತ್ರದಿಂದ ಆಹ್ವಾನಿಸಬೇಕು) :

**ಓಂ ನಮಃ ಪಿಶಾಚನಿಕರಂಕಿನಿ ತ್ರಿಶೂಲಖಡ್ಗಹಸ್ತೇ ಸಿಂಹಾರೂಢೇ ಏಹ್ಯೇಹಿ, ಆಗಚ್ಛ ಆಗಚ್ಛ, ಇಮಾಂ ಪೂಜಾಂ ಗೃಹ್ಣ ಗೃಹ್ಣ ಸ್ವಾಹಾ । ಶ್ರೀಸಪ್ತಶತೀಸರಸ್ವತ್ಯೈ ನಮಃ, ಆವಾಹಯಾಮಿ ॥**

ಈಗ —

**ನಮೋ ದೇವ್ಯೈ ಮಹಾದೇವ್ಯೈ ಶಿವಾಯೈ ಸತತಂ ನಮಃ ।**
**ನಮಃ ಪ್ರಕೃತ್ಯೈ ಭದ್ರಾಯೈ ನಿಯತಾಃ ಪ್ರಣತಾಃ ಸ್ಮ ತಾಮ್ ॥**

ಎಂಬ ಮಂತ್ರದಿಂದ ಪುಸ್ತಕಕ್ಕೆ ಪಂಚೋಪಚಾರಪೂಜೆಯನ್ನು ಸಲ್ಲಿಸಬೇಕು.

೬. ಶಾಪೋದ್ಧಾರಮಂತ್ರಜಪ – ಈ ಮಂತ್ರವನ್ನು ಏಳು ಬಾರಿ ಜಪಿಸಬೇಕು :

**ಓಂ ಹ್ರೀಂ ಕ್ಲೀಂ ಶ್ರೀಂ ಕ್ರಾಂ ಕ್ರೀಂ ಚಂಡಿಕೇ ದೇವಿ ಶಾಪಾನುಗ್ರಹಂ ಕುರು ಕುರು ಸ್ವಾಹಾ ॥**

# ಕವಚಮ್

ಅಸ್ಯ ಶ್ರೀಚಂಡೀಕವಚಸ್ಯ ಬ್ರಹ್ಮಾ ಋಷಿಃ, ಅನುಷ್ಟುಪ್ ಛಂದಃ, ಚಾಮುಂಡಾ ದೇವತಾ, ಅಂಗನ್ಯಾಸೋಕ್ತಮಾತರೋ ಬೀಜಮ್, ದಿಗ್ಬಂಧದೇವತಾಸ್ತತ್ತ್ವಮ್, ಶ್ರೀಜಗದಂಬಾಪ್ರೀತ್ಯರ್ಥೇ ಸಪ್ತಶತೀ ಪಾಠಾಂಗಕವಚಸ್ತೋತ್ರಜಪೇ ವಿನಿಯೋಗಃ ॥ ಓಂ ನಮಶ್ಚಂಡಿಕಾಯೈ ॥

॥ ಮಾರ್ಕಂಡೇಯ ಉವಾಚ ॥

ಓಂ ಯದ್ಗುಹ್ಯಂ ಪರಮಂ ಲೋಕೇ ಸರ್ವರಕ್ಷಾಕರಂ ನೃಣಾಮ್ ।
ಯನ್ನ ಕಸ್ಯಚಿದಾಖ್ಯಾತಂ ತನ್ಮೇ ಬ್ರೂಹಿ ಪಿತಾಮಹ ॥ ೧ ॥

॥ ಬ್ರಹ್ಮೋವಾಚ ॥

ಅಸ್ತಿ ಗುಹ್ಯತಮಂ ವಿಪ್ರ ಸರ್ವಭೂತೋಪಕಾರಕಮ್ ।
ದೇವ್ಯಾಸ್ತು ಕವಚಂ ಪುಣ್ಯಂ ತಚ್ಛೃಣುಷ್ವ ಮಹಾಮುನೇ ॥ ೨ ॥

ಪ್ರಥಮಂ ಶೈಲಪುತ್ರೀ ಚ ದ್ವಿತೀಯಂ ಬ್ರಹ್ಮಚಾರಿಣೀ ।
ತೃತೀಯಂ ಚಂದ್ರಘಂಟೇತಿ ಕೂಷ್ಮಾಂಡೇತಿ ಚತುರ್ಥಕಮ್ ॥ ೩ ॥

ಪಂಚಮಂ ಸ್ಕಂದಮಾತೇತಿ ಷಷ್ಠಂ ಕಾತ್ಯಾಯನೀತಿ ಚ ।
ಸಪ್ತಮಂ ಕಾಲರಾತ್ರಿಶ್ಚ ಮಹಾಗೌರೀತಿ ಚಾಷ್ಟಮಮ್ ॥ ೪ ॥

ನವಮಂ ಸಿದ್ಧಿದಾತ್ರೀ ಚ ನವದುರ್ಗಾಃ ಪ್ರಕೀರ್ತಿತಾಃ ।
ಉಕ್ತಾನ್ಯೇತಾನಿ ನಾಮಾನಿ ಬ್ರಹ್ಮಣೈವ ಮಹಾತ್ಮನಾ ॥ ೫ ॥

ಅಗ್ನಿನಾ ದಹ್ಯಮಾನಸ್ತು ಶತ್ರುಮಧ್ಯೇ ಗತೋ ರಣೇ ।
ವಿಷಮೇ ದುರ್ಗಮೇ ಚೈವ ಭಯಾರ್ತಾಃ ಶರಣಂ ಗತಾಃ ॥ ೬ ॥

ನ ತೇಷಾಂ ಜಾಯತೇ ಕಿಂಚಿದಶುಭಂ ರಣಸಂಕಟೇ ।
ನಾಪದಂ ತಸ್ಯ ಪಶ್ಯಾಮಿ ಶೋಕದುಃಖಭಯಂ ನ ಹಿ ॥ ೭ ॥

ಯೈಸ್ತು ಭಕ್ತ್ಯಾ ಸ್ಮೃತಾ ನೂನಂ ತೇಷಾಂ ವೃದ್ಧಿಃ ಪ್ರಜಾಯತೇ ।
ಯೇ ತ್ವಾಂ ಸ್ಮರಂತಿ ದೇವೇಶಿ ರಕ್ಷಸೇ ತಾನ್ನ ಸಂಶಯಃ ॥ ೮ ॥

# ಕವಚ

೧. ಮಾರ್ಕಂಡೇಯನು ಕೇಳಿದನು: ಹೇ ಪಿತಾಮಹ, ಈ ಲೋಕದಲ್ಲಿ ಯಾವುದು ಅತ್ಯಂತ ರಹಸ್ಯವಾದುದೋ, ಯಾವುದು ಮನುಷ್ಯರನ್ನು ಎಲ್ಲದರಿಂದಲೂ ರಕ್ಷಿಸುವುದೋ, ಯಾವುದನ್ನು (ಇದುವರೆಗೂ) ಯಾರಿಗೂ ಹೇಳಿಲ್ಲವೋ ಅದನ್ನು ನನಗೆ ಉಪದೇಶಿಸು!

೨. ಬ್ರಹ್ಮನು ಹೇಳಿದನು: ಎಲೈ ಮಹಾಮುನಿಯೇ, ವಿಪ್ರಶ್ರೇಷ್ಠನೇ, ಸರ್ವಜೀವಿಗಳಿಗೂ ಉಪಕಾರವನ್ನುಂಟುಮಾಡುವ ಅತ್ಯಂತ ರಹಸ್ಯ ವೊಂದಿರುವುದು; ಅದೇ ಪುಣ್ಯಕರವಾದ ದೇವೀಕವಚ. ಅದನ್ನು ಆಲಿಸು.

೩. ಶೈಲಪುತ್ರಿಯೆಂಬುದು ಮೊದಲನೆಯದು. ಬ್ರಹ್ಮಚಾರಿಣಿಯೆಂಬುದು ಎರಡನೆಯದು. ಚಂದ್ರಘಂಟಾ ಎಂಬುದು ಮೂರನೆಯದು. ಕೂಷ್ಮಾಂಡಾ ಎಂಬುದು ನಾಲ್ಕನೆಯದು.

೪. ಸ್ಕಂದಮಾತೆಯೆಂಬುದು ಐದನೆಯದು. ಕಾತ್ಯಾಯನಿಯೆಂಬುದು ಆರನೆಯದು. ಕಾಲರಾತ್ರಿ ಎಂಬುದು ಏಳನೆಯದು. ಮಹಾಗೌರಿಯೆಂಬುದು ಎಂಟನೆಯದು.

೫. ಒಂಬತ್ತನೆಯದು ಸಿದ್ಧಿದಾತ್ರಿ ಎಂಬುದು. ಹೀಗೆ ಒಂಬತ್ತು ದುರ್ಗೆಯರು ಪ್ರಸಿದ್ಧರಾಗಿರುತ್ತಾರೆ. ಈ ಹೆಸರುಗಳು ಮಹಾತ್ಮನಾದ ಬ್ರಹ್ಮನಿಂದಲೇ ಹೇಳಲ್ಪಟ್ಟಿವೆ.

೬-೭. ಅಗ್ನಿಯಿಂದ ಸುಡಲ್ಪಡುತ್ತಿರುವವನು, ಅಸಮಾನವಾದ ಯುದ್ಧದಲ್ಲಿ ಶತ್ರುಗಳ ನಡುವೆ ಸಿಕ್ಕಿಬಿದ್ದಿರುವವನು, ಘೋರಾರಣ್ಯದ ನಡುವೆಯಿರುವವನು – ಇಂಥವರೆಲ್ಲರೂ ಭಯದಿಂದ ಆರ್ತರಾಗಿ (ದುರ್ಗೆಯನ್ನು) ಶರಣು ಹೊಂದಿದ್ದೇ ಆದರೆ ಅವರಿಗೆ ಅತ್ಯಂತ ಸಂಕಟಮಯ ಸನ್ನಿವೇಶದಲ್ಲೂ ಸ್ವಲ್ಪವೂ ಅಶುಭವುಂಟಾಗದು. ಅಂಥವರಿಗೆ ಆಪತ್ತಾಗಲಿ ಶೋಕದುಃಖಗಳಾಗಲಿ ಭಯವಾಗಲಿ ಬರುವುದನ್ನು ನಾನು ಕಾಣೆನು.

೮. ಯಾರು ಅವಳನ್ನು ಭಕ್ತಿಯಿಂದ ಸ್ಮರಿಸುವರೊ ಅವರಿಗೆ ಸಮೃದ್ಧಿಯುಂಟಾಗುತ್ತದೆ. ಹೇ ದೇವೇಶಿ, ಯಾರು ನಿನ್ನನ್ನು ಸ್ಮರಿಸುವರೋ ಅವರನ್ನು ನೀನು ಕಾಪಾಡುವೆ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ.

ಪ್ರೇತಸಂಸ್ಥಾ ತು ಚಾಮುಂಡಾ ವಾರಾಹೀ ಮಹಿಷಾಸನಾ ।
ಐಂದ್ರೀ ಗಜಸಮಾರೂಢಾ ವೈಷ್ಣವೀ ಗರುಡಾಸನಾ ॥ ೯ ॥

ಮಾಹೇಶ್ವರೀ ವೃಷಾರೂಢಾ ಕೌಮಾರೀ ಶಿಖಿವಾಹನಾ ।
ಲಕ್ಷ್ಮೀಃ ಪದ್ಮಾಸನಾ ದೇವೀ ಪದ್ಮಹಸ್ತಾ ಹರಿಪ್ರಿಯಾ ॥ ೧೦ ॥

ಶ್ವೇತರೂಪಧರಾ ದೇವೀ ಈಶ್ವರೀ ವೃಷವಾಹನಾ ।
ಬ್ರಾಹ್ಮೀ ಹಂಸಸಮಾರೂಢಾ ಸರ್ವಾಭರಣಭೂಷಿತಾ ॥ ೧೧ ॥

ಇತ್ಯೇತಾ ಮಾತರಸ್ಸರ್ವಾಃ ಸರ್ವಯೋಗಸಮನ್ವಿತಾಃ ।
ನಾನಾಽಽಭರಣಶೋಭಾಢ್ಯಾ ನಾನಾರತ್ನೋಪಶೋಭಿತಾಃ ।
ದೃಶ್ಯಂತೇ ರಥಮಾರೂಢಾ ದೇವ್ಯಃ ಕ್ರೋಧಸಮಾಕುಲಾಃ ॥ ೧೨ ॥

ಶಂಖಂ ಚಕ್ರಂ ಗದಾಂ ಶಕ್ತಿಂ ಹಲಂ ಚ ಮುಸಲಾಯುಧಮ್ ।
ಖೇಟಕಂ ತೋಮರಂ ಚೈವ ಪರಶುಂ ಪಾಶಮೇವ ಚ ॥ ೧೩ ॥

ಕುಂತಾಯುಧಂ ತ್ರಿಶೂಲಂ ಚ ಶಾರ್ಙ್ಗಮಾಯುಧಮುತ್ತಮಮ್ ।
ದೈತ್ಯಾನಾಂ ದೇಹನಾಶಾಯ ಭಕ್ತಾನಾಮಭಯಾಯ ಚ ।
ಧಾರಯಂತ್ಯಾಯುಧಾನೀತ್ಥಂ ದೇವಾನಾಂ ಚ ಹಿತಾಯ ವೈ ॥ ೧೪ ॥

ನಮಸ್ತೇಽಸ್ತು ಮಹಾರೌದ್ರೇ ಮಹಾಘೋರಪರಾಕ್ರಮೇ ।
ಮಹಾಬಲೇ ಮಹೋತ್ಸಾಹೇ ಮಹಾಭಯವಿನಾಶಿನಿ ।
ತ್ರಾಹಿ ಮಾಂ ದೇವಿ ದುಷ್ಪ್ರೇಕ್ಷ್ಯೇ ಶತ್ರೂಣಾಂ ಭಯವರ್ಧಿನಿ ॥ ೧೫ ॥

ಪ್ರಾಚ್ಯಾಂ ರಕ್ಷತು ಮಾಮೈಂದ್ರೀ ಆಗ್ನೇಯ್ಯಾಮಗ್ನಿದೇವತಾ ।
ದಕ್ಷಿಣೇಽವತು ವಾರಾಹೀ ನೈರ್ಋತ್ಯಾಂ ಖಡ್ಗಧಾರಿಣೀ ॥ ೧೬ ॥

ಪ್ರತೀಚ್ಯಾಂ ವಾರುಣೀ ರಕ್ಷೇದ್ವಾಯವ್ಯಾಂ ಮೃಗವಾಹಿನೀ ।
ಉದೀಚ್ಯಾಂ ಪಾತು ಕೌಬೇರೀ ಈಶಾನ್ಯಾಂ ಶೂಲಧಾರಿಣೀ ॥ ೧೭ ॥

೯. ಚಾಮುಂಡಾಂಬಿಕೆಗೆ ಪ್ರೇತವೇ ಆಸನ. ವಾರಾಹಿಯು ಮಹಿಷದ ಮೇಲೆ ಕುಳಿತಿರುವಳು. ಐಂದ್ರಿಯು ಆನೆಯ ಮೇಲೆ ಆರೂಢಳಾಗಿರುವಳು. ವೈಷ್ಣವಿಗಾದರೋ ಗರುಡವೇ ಆಸನ.

೧೦. ಮಾಹೇಶ್ವರಿಯು ವೃಷಭವಾಹನಳು. ಕೌಮಾರಿಗೆ ನವಿಲೇ ವಾಹನ. ಶ್ರೀಹರಿಗೆ ಪ್ರಿಯಳಾದ ಲಕ್ಷ್ಮೀದೇವಿಯು ಕೈಯಲ್ಲಿ ಪದ್ಮವನ್ನು ಧರಿಸಿ ಪದ್ಮದ ಮೇಲೆ ಮಂಡಿಸಿರುವಳು.

೧೧. ಬಿಳಿಯ ಬಣ್ಣದ ರೂಪವನ್ನು ಧರಿಸಿರುವ ಈಶ್ವರೀದೇವಿಯು ವೃಷಭವನ್ನು ವಾಹನವಾಗಿ ಹೊಂದಿರುವಳು. ಸರ್ವಾಭರಣಗಳಿಂದಲೂ ಅಲಂಕೃತಳಾಗಿರುವ ಬ್ರಾಹ್ಮೀಶಕ್ತಿಯು ಹಂಸದ ಮೇಲೆ ಕುಳಿತಿರುವಳು.

೧೨. ಹೀಗೆ ಸಕಲಯೋಗಗಳಿಂದಲೂ ಕೂಡಿರುವ ನಾನಾ ಆಭರಣ ಗಳಿಂದ ಮತ್ತು ರತ್ನಗಳಿಂದ ಶೋಭಿಸುತ್ತಿರುವ ಈ ಮಾತೆಯರೆಲ್ಲರೂ ರಥವನ್ನೇರಿದವರಾಗಿ ಕ್ರೋಧದಿಂದ ತುಂಬಿ ಕಾಣಿಸಿಕೊಳ್ಳುತ್ತಿದ್ದಾರೆ.

೧೩. ಶಂಖ, ಚಕ್ರ, ಗದೆ, ಶಕ್ತ್ಯಾಯುಧ, ಹಲಾಯುಧ, ಮುಸಲಾಯುಧ, ಗುರಾಣಿ, ತೋಮರ, ಪರಶು, ಮತ್ತು ಪಾಶ – ಇವುಗಳನ್ನೂ...,

೧೪. (ಮತ್ತು) ಕುಂತಾಯುಧ, ತ್ರಿಶೂಲ, ಉತ್ತಮವಾದ ಶಾರ್ಙ್ಗಾಯುಧ – ಈ ಆಯುಧಗಳನ್ನೂ ದೈತ್ಯರ ದೇಹನಾಶಕ್ಕಾಗಿ, ಭಕ್ತರಿಗೆ ಅಭಯದಾನಕ್ಕಾಗಿ ಮತ್ತು ದೇವತೆಗಳಿಗೆ ಹಿತವನ್ನುಂಟುಮಾಡುವುದಕ್ಕಾಗಿ ಧರಿಸಿರುವ,....

೧೫. ಮಹಾರೌದ್ರಳೂ ಮಹಾಘೋರಪರಾಕ್ರಮಯುಕ್ತಳೂ ಮಹಾ ಬಲವಂತಳೂ ಮಹಾ ಉತ್ಸಾಹಶೀಲಳೂ ಮಹಾಭಯವನ್ನು ನಾಶಮಾಡ ಬಲ್ಲವಳೂ ಆದ ದೇವಿಗೆ ನಮಸ್ಕಾರ! ಹೇ ದೇವಿ, ನೋಡಲಸಾಧ್ಯ ಳಾಗಿರುವವಳೆ, ಶತ್ರುಗಳ ಭಯವನ್ನು ಹೆಚ್ಚಿಸುವವಳೆ, ನನ್ನನ್ನು ಕಾಪಾಡು!

೧೬. ಐಂದ್ರಿಯು ನನ್ನನ್ನು ಪೂರ್ವದಲ್ಲಿ ರಕ್ಷಿಸಲಿ. ಅಗ್ನಿದೇವತೆಯು ಆಗ್ನೇಯದಿಕ್ಕಿನಲ್ಲೂ ವಾರಾಹಿಯು ದಕ್ಷಿಣದಲ್ಲೂ ಖಡ್ಗಧಾರಿಣೀದೇವಿಯು ನೈರ್ಋತ್ಯದಲ್ಲೂ ರಕ್ಷಿಸಲಿ.

೧೭. ವಾರುಣಿಯು ಪಶ್ಚಿಮದಲ್ಲಿ ರಕ್ಷಿಸಲಿ. ಮೃಗವಾಹಿನಿಯು ವಾಯುವ್ಯದಲ್ಲಿ ಕಾಪಾಡಲಿ. ಉತ್ತರದಲ್ಲಿ ಕೌಬೇರಿಯು ಕಾಪಾಡಲಿ. ಶೂಲ ಧಾರಿಣಿಯು ಈಶಾನ್ಯದಿಕ್ಕಿನಲ್ಲಿ ರಕ್ಷಿಸಲಿ.

ಊರ್ಧ್ವಂ ಬ್ರಹ್ಮಾಣೀ ಮೇ ರಕ್ಷೇದಧಸ್ತಾದ್ವೈಷ್ಣವೀ ತಥಾ ।
ಏವಂ ದಶ ದಿಶೋ ರಕ್ಷೇಚ್ಚಾಮುಂಡಾ ಶವವಾಹನಾ ॥ ೧೮ ॥

ಜಯಾ ಮೇ ಜಾಗ್ರತಃ ಪಾತು ವಿಜಯಾ ಪಾತು ಪೃಷ್ಠತಃ ।
ಅಜಿತಾ ವಾಮಪಾರ್ಶ್ವೇ ತು ದಕ್ಷಿಣೇ ಚಾಪರಾಜಿತಾ ॥ ೧೯ ॥

ಶಿಖಾಮುದ್ಯೋತಿನೀ ರಕ್ಷೇದುಮಾ ಮೂರ್ಧ್ನಿ ವ್ಯವಸ್ಥಿತಾ ।
ಮಾಲಾಧರೀ ಲಲಾಟೇ ಚ ಭ್ರುವೌ ರಕ್ಷೇದ್ಯಶಸ್ವಿನೀ ॥ ೨೦ ॥

ತ್ರಿನೇತ್ರಾ ಚ ಭ್ರುವೋರ್ಮಧ್ಯೇ ಯಮಘಂಟಾ ಚ ನಾಸಿಕೇ ।
ಶಂಖಿನೀ ಚಕ್ಷುಷೋರ್ಮಧ್ಯೇ ಶ್ರೋತ್ರಯೋರ್ದ್ವಾರವಾಸಿನೀ ॥ ೨೧ ॥

ಕಪೋಲೌ ಕಾಲಿಕಾ ರಕ್ಷೇತ್ ಕರ್ಣಮೂಲೇ ತು ಶಾಂಕರೀ ।
ನಾಸಿಕಾಯಾಂ ಸುಗಂಧಾ ಚ ಉತ್ತರೋಷ್ಠೇ ಚ ಚರ್ಚಿಕಾ ॥ ೨೨ ॥

ಅಧರೇ ಚಾಮೃತಕಲಾ ಜಿಹ್ವಾಯಾಂ ಚ ಸರಸ್ವತೀ ।
ದಂತಾನ್ ರಕ್ಷತು ಕೌಮಾರೀ ಕಂಠದೇಶೇ ತು ಚಂಡಿಕಾ ॥ ೨೩ ॥

ಘಂಟಿಕಾಂ ಚಿತ್ರಘಂಟಾ ಚ ಮಹಾಮಾಯಾ ಚ ತಾಲುಕೇ ।
ಕಾಮಾಕ್ಷೀ ಚಿಬುಕಂ ರಕ್ಷೇದ್ವಾಚಂ ಮೇ ಸರ್ವಮಂಗಲಾ ॥ ೨೪ ॥

ಗ್ರೀವಾಯಾಂ ಭದ್ರಕಾಲೀ ಚ ಪೃಷ್ಠವಂಶೇ ಧನುರ್ಧರೀ ।
ನೀಲಗ್ರೀವಾ ಬಹಿಃಕಂಠೇ ನಲಿಕಾಂ ನಲಕೂಬರೀ ॥ ೨೫ ॥

೧೮. ಬ್ರಹ್ಮಾಣಿಯು ನನ್ನನ್ನು ಮೇಲುಗಡೆಯಲ್ಲಿಯೂ ಹಾಗೆಯೇ ವೈಷ್ಣವಿಯು ಕೆಳಗಿನ ದಿಕ್ಕಿನಲ್ಲಿಯೂ ಕಾಪಾಡಲಿ. ಹೀಗೆ ಶವವಾಹನೆಯಾದ ಚಾಮುಂಡಾಂಬಿಕೆಯು (ನನ್ನನ್ನು) ಹತ್ತು ದಿಕ್ಕುಗಳಲ್ಲಿಯೂ ರಕ್ಷಿಸಲಿ.

೧೯. ಜಯೆಯು ನನ್ನನ್ನು ಮುಂದಿನಿಂದಲೂ ವಿಜಯೆಯು ಹಿಂದಿನಿಂದಲೂ ರಕ್ಷಿಸಲಿ. ಅಜಿತೆಯು ಎಡದಲ್ಲಿಯೂ ಅಪರಾಜಿತೆಯು ಬಲದಲ್ಲಿಯೂ ಕಾಪಾಡಲಿ.

೨೦. ಉದ್ಯೋತಿನೀದೇವಿಯು ನನ್ನ ಶಿಖೆಯನ್ನು ರಕ್ಷಿಸಲಿ. ಉಮೆಯು ಶಿರಸ್ಸಿನಲ್ಲಿದ್ದುಕೊಂಡು (ರಕ್ಷಿಸಲಿ). ಮಾಲಾಧರಿಯು ಹಣೆಯಲ್ಲಿದ್ದುಕೊಂಡು (ರಕ್ಷಿಸಲಿ). ಯಶಸ್ವಿನಿಯು ಹುಬ್ಬುಗಳನ್ನು ಕಾಪಾಡಲಿ.

೨೧. ತ್ರಿನೇತ್ರೆಯು ಹುಬ್ಬುಗಳ ಮಧ್ಯದಲ್ಲಿಯೂ ಯಮಘಂಟಾದೇವಿಯು ಮೂಗಿನಲ್ಲಿಯೂ ಶಂಖಿನಿಯು ಕಣ್ಣುಗಳ ಮಧ್ಯದಲ್ಲಿಯೂ ದ್ವಾರವಾಸಿನಿಯು ಕಿವಿಗಳ (ಮಧ್ಯದಲ್ಲಿಯೂ) ಇದ್ದುಕೊಂಡು ನನ್ನನ್ನು ರಕ್ಷಿಸಲಿ.

೨೨. ಕಪೋಲಗಳನ್ನು ಕಾಳಿಕಾದೇವಿಯೂ ಕಿವಿಗಳ ಬುಡಗಳನ್ನು ಶಾಂಕರಿಯೂ ಘ್ರಾಣೇಂದ್ರಿಯದಲ್ಲಿದ್ದುಕೊಂಡು ಸುಗಂಧೆಯೂ ಮೇಲ್ತುಟಿಯಲ್ಲಿ ನೆಲಸಿ ಚರ್ಚಿಕೆಯೂ ಕಾಪಾಡಲಿ.

೨೩. ಅಮೃತಕಲೆಯು ಕೆಳದುಟಿಯಲ್ಲಿಯೂ ಸರಸ್ವತಿಯು ನಾಲಗೆಯಲ್ಲಿಯೂ (ನೆಲಸಿ ರಕ್ಷಿಸಲಿ). ಕೌಮಾರಿಯು ದಂತಗಳನ್ನು ರಕ್ಷಿಸಲಿ. ಕಂಠದೇಶದಲ್ಲಿದ್ದುಕೊಂಡು ಚಂಡಿಕೆಯು (ಅದನ್ನು) ರಕ್ಷಿಸಲಿ.

೨೪. ಚಿತ್ರಘಂಟಾದೇವಿಯು ಘಂಟಿಕೆಯನ್ನೂ ಮಹಾಮಾಯೆಯು ತಾಲುಪ್ರದೇಶವನ್ನೂ ಕಾಮಾಕ್ಷಿಯು ಗಲ್ಲವನ್ನೂ ಸರ್ವಮಂಗಲೆಯು ನನ್ನ ವಾಗಿಂದ್ರಿಯವನ್ನೂ ರಕ್ಷಿಸಲಿ.

೨೫. ಭದ್ರಕಾಳಿಯು ಕತ್ತಿನಲ್ಲಿಯೂ, ಪೃಷ್ಠಭಾಗದಲ್ಲಿ ಧನುರ್ಧರಿಯೂ, ಹೊರಕತ್ತಿನಲ್ಲಿ ನೀಲಗ್ರೀವೆಯೂ, ಕಂಠನಾಳಗಳಲ್ಲಿ ನಲಕೂಬರಿಯೂ ನೆಲಸಿ ಕಾಪಾಡಲಿ.

ಸ್ಕಂಧಯೋಃ ಖಡ್ಗಿನೀ ರಕ್ಷೇದ್ಬಾಹೂ ಮೇ ವಜ್ರಧಾರಿಣೀ ।
ಹಸ್ತಯೋರ್ದಂಡಿನೀ ರಕ್ಷೇದಂಬಿಕಾ ಚಾಂಗುಲೀಸ್ತಥಾ ॥ ೨೬ ॥

ನಖಾಂಛೂಲೇಶ್ವರೀ ರಕ್ಷೇತ್ ಕುಕ್ಷೌ ರಕ್ಷೇತ್ಕುಲೇಶ್ವರೀ ।
ಸ್ತನೌ ರಕ್ಷೇನ್ಮಹಾದೇವೀ ಮನಶ್ಶೋಕವಿನಾಶಿನೀ ॥ ೨೭ ॥

ಹೃದಯೇ ಲಲಿತಾದೇವೀ ಉದರೇ ಶೂಲಧಾರಿಣೀ ।
ನಾಭೌ ಚ ಕಾಮಿನೀ ರಕ್ಷೇದ್ಗುಹ್ಯಂ ಗುಹ್ಯೇಶ್ವರೀ ತಥಾ ॥ ೨೮ ॥

ಪೂತನಾ ಕಾಮಿಕಾ ಮೇಢ್ರಂ ಗುದೇ ಮಹಿಷವಾಹಿನೀ ।
ಕಟ್ಯಾಂ ಭಗವತೀ ರಕ್ಷೇಜ್ಜಾನುನೀ ವಿಂಧ್ಯವಾಸಿನೀ ॥ ೨೯ ॥

ಜಂಘೇ ಮಹಾಬಲಾ ರಕ್ಷೇತ್ ಸರ್ವಕಾಮಪ್ರದಾಯಿನೀ ।
ಗುಲ್ಫಯೋರ್ನಾರಸಿಂಹೀ ಚ ಪಾದಪೃಷ್ಠೇ ತು ತೈಜಸೀ ॥ ೩೦ ॥

ಪಾದಾಂಗುಲೀಷು ಶ್ರೀ ರಕ್ಷೇತ್ಪಾದಾಧಸ್ತಲವಾಸಿನೀ ।
ನಖಾನ್ ದಂಷ್ಟ್ರಾಕರಾಲೀ ಚ ಕೇಶಾಂಶ್ಚೈವೋರ್ಧ್ವಕೇಶಿನೀ ॥ ೩೧ ॥

ರೋಮಕೂಪೇಷು ಕೌಮಾರೀ ತ್ವಚಂ ವಾಗೀಶ್ವರೀ ತಥಾ ।
ರಕ್ತಮಜ್ಜಾವಸಾಮಾಂಸಾನ್ಯಸ್ಥಿಮೇಧಾಂಸಿ ಪಾರ್ವತೀ ॥ ೩೨ ॥

ಅಂತ್ರಾಣಿ ಕಾಲರಾತ್ರಿಶ್ಚ ಪಿತ್ತಂ ಚ ಮುಕುಟೇಶ್ವರೀ ।
ಪದ್ಮಾವತೀ ಪದ್ಮಕೋಶೇ ಕಫೇ ಚೂಡಾಮಣಿಸ್ತಥಾ ॥ ೩೩ ॥

ಜ್ವಾಲಾಮುಖೀ ನಖಜ್ವಾಲಾಮಭೇದ್ಯಾ ಸರ್ವಸಂಧಿಷು ।
ಶುಕ್ರಂ ಬ್ರಹ್ಮಾಣೀ ಮೇ ರಕ್ಷೇಚ್ಛಾಯಾಂ ಛತ್ರೇಶ್ವರೀ ತಥಾ ॥ ೩೪ ॥

೨೬. ಖಡ್ಗಿನಿ, ವಜ್ರಧಾರಿಣಿ, ದಂಡಿನಿ, ಅಂಬಿಕೆ – ಇವರು ಕ್ರಮವಾಗಿ ಹೆಗಲುಗಳನ್ನು, ಬಾಹುಗಳನ್ನು, ಕೈಗಳನ್ನು ಮತ್ತು ಬೆರಳುಗಳನ್ನು ರಕ್ಷಿಸಲಿ.

೨೭. ಶೂಲೇಶ್ವರಿಯು ಉಗುರುಗಳನ್ನು ರಕ್ಷಿಸಲಿ. ಕುಲೇಶ್ವರಿಯು ಹೊಟ್ಟೆಯನ್ನು ರಕ್ಷಿಸಲಿ. ಮಹಾದೇವಿಯು ಸ್ತನಗಳನ್ನೂ ಶೋಕವಿನಾಶಿನಿಯು ಮನಸ್ಸನ್ನೂ ರಕ್ಷಿಸಲಿ.

೨೮. ಲಲಿತಾದೇವಿ-ಶೂಲಧಾರಿಣಿಯರು ಕ್ರಮವಾಗಿ ಹೃದಯ ದಲ್ಲಿಯೂ ಉದರದಲ್ಲಿಯೂ ಇದ್ದುಕೊಂಡು ಅವನ್ನು ರಕ್ಷಿಸಲಿ. ಕಾಮಿನಿಯು ನಾಭಿಯಲ್ಲಿದ್ದು ಅದನ್ನು ರಕ್ಷಿಸಲಿ. ಹಾಗೆಯೇ ಗುಹ್ಯೇಶ್ವರಿಯು ಗುಹ್ಯವನ್ನು ರಕ್ಷಿಸಲಿ.

೨೯. ಪೂತನೆಯಾದ ಕಾಮಿಕಾದೇವಿಯು ಜನನೇಂದ್ರಿಯವನ್ನೂ ಮಹಿಷವಾಹಿನಿಯು ಗುದವನ್ನೂ ಭಗವತಿಯು ಸೊಂಟವನ್ನೂ ವಿಂಧ್ಯ ವಾಸಿನಿಯು ಮೊಳಕಾಲುಗಳನ್ನೂ ರಕ್ಷಿಸಲಿ.

೩೦. ಸರ್ವಕಾಮಗಳನ್ನೂ ಕೊಡಬಲ್ಲ ಮಹಾಬಲೆಯು ಜಂಘ ಗಳನ್ನೂ, ನಾರಸಿಂಹಿಯು ಗುಲ್ಫಗಳನ್ನೂ, ತೈಜಸಿಯು ಪಾದಗಳ ಹಿಮ್ಮಡಿ ಗಳನ್ನೂ ರಕ್ಷಿಸಲಿ.

೩೧. ಪಾದಗಳ ಕೆಳಭಾಗದಲ್ಲಿ ವಾಸಿಸುವ ಶ್ರೀಯು ಪಾದಾಂಗುಲಿ ಗಳನ್ನೂ, ಕಾಲುಉಗುರುಗಳನ್ನು ದಂಷ್ಟ್ರಾಕರಾಲಿಯೂ, ಕೇಶಗಳನ್ನು ಊರ್ಧ್ವ ಕೇಶಿನಿಯೂ ರಕ್ಷಿಸಲಿ.

೩೨. ರೋಮಕೂಪಗಳನ್ನು ಕೌಮಾರಿಯೂ, ಚರ್ಮವನ್ನು ವಾಗೀಶ್ವರಿಯೂ, ರಕ್ತ, ಮಜ್ಜೆ, ವಸೆ, ಮಾಂಸ, ಮೂಳೆ ಮತ್ತು ಮೇಧಸ್ಸು - ಇವುಗಳನ್ನು ಪಾರ್ವತಿಯೂ ರಕ್ಷಿಸಲಿ.

೩೩. ಕಾಲರಾತ್ರಿಯು ನರಗಳನ್ನೂ ಮುಕುಟೇಶ್ವರಿಯು ಪಿತ್ತವನ್ನೂ, ಪದ್ಮಕೋಶವನ್ನು ಪದ್ಮಾವತಿಯೂ, ಕಫವನ್ನು ಚೂಡಾಮಣಿಯೂ ರಕ್ಷಿಸಲಿ.

೩೪. ಜ್ವಾಲಾಮುಖಿಯು ಉಗುರುಗಳ ಕಾಂತಿಯನ್ನೂ, ಅಭೇದ್ಯಾ ದೇವಿಯು ಎಲ್ಲ ಕೀಲುಗಳನ್ನೂ, ಬ್ರಹ್ಮಾಣಿಯು ನನ್ನ ವೀರ್ಯವನ್ನೂ ಮತ್ತು ಛತ್ರೇಶ್ವರಿಯು ನೆರಳನ್ನೂ ರಕ್ಷಿಸಲಿ.

ಅಹಂಕಾರಂ ಮನೋ ಬುದ್ಧಿಂ ರಕ್ಷ ಮೇ ಧರ್ಮಚಾರಿಣಿ ।
ಪ್ರಾಣಾಪಾನೌ ತಥಾ ವ್ಯಾನಂ ಸಮಾನೋದಾನಮೇವ ಚ ॥ ೩೫ ॥

ವಜ್ರಹಸ್ತಾ ಚ ಮೇ ರಕ್ಷೇತ್ ಪ್ರಾಣಕಲ್ಪಂ ಚ ಶೋಭನಾ ।
ರಸೇ ರೂಪೇ ಚ ಗಂಧೇ ಚ ಶಬ್ದೇ ಸ್ಪರ್ಶೇ ಚ ಯೋಗಿನೀ ॥ ೩೬ ॥

ಸತ್ತ್ವಂ ರಜಸ್ತಮಶ್ಚೈವ ರಕ್ಷೇನ್ನಾರಾಯಣೀ ಸದಾ ।
ಆಯೂ ರಕ್ಷತು ವಾರಾಹೀ ಧರ್ಮಂ ರಕ್ಷತು ವೈಷ್ಣವೀ ॥ ೩೭ ॥

ಯಶಃ ಕೀರ್ತಿಂ ಚ ಲಕ್ಷ್ಮೀಂ ಚ ಧನಂ ವಿದ್ಯಾಂ ಚ ಚಕ್ರಿಣೀ ।
ಗೋತ್ರಮಿಂದ್ರಾಣೀ ಮೇ ರಕ್ಷೇತ್ ಪಶೂನ್ಮೇ ರಕ್ಷ ಚಂಡಿಕೇ ॥ ೩೮ ॥

ಪುತ್ರಾನ್ ರಕ್ಷೇನ್ಮಹಾಲಕ್ಷ್ಮೀರ್ಭಾರ್ಯಾಂ ರಕ್ಷತು ಭೈರವೀ ।
ಪಂಥಾನಂ ಸುಪಥಾ ರಕ್ಷೇನ್ಮಾರ್ಗಂ ಕ್ಷೇಮಕರೀ ತಥಾ ॥ ೩೯ ॥

ರಾಜದ್ವಾರೇ ಮಹಾಲಕ್ಷ್ಮೀರ್ವಿಜಯಾ ಸರ್ವತಃ ಸ್ಥಿತಾ ॥ ೪೦ ॥

ರಕ್ಷಾಹೀನಂ ತು ಯತ್ ಸ್ಥಾನಂ ವರ್ಜಿತಂ ಕವಚೇನ ತು ।
ತತ್ಸರ್ವಂ ರಕ್ಷ ಮೇ ದೇವಿ ಜಯಂತಿ ಪಾಪನಾಶಿನಿ ॥ ೪೧ ॥

ಪದಮೇಕಂ ನ ಗಚ್ಛೇತ್ತು ಯದೀಚ್ಛೇಚ್ಛುಭಮಾತ್ಮನಃ ।
ಕವಚೇನಾವೃತೋ ನಿತ್ಯಂ ಯತ್ರ ಯತ್ರೈವ ಗಚ್ಛತಿ ॥ ೪೨ ॥

ತತ್ರ ತತ್ರಾರ್ಥಲಾಭಶ್ಚ ವಿಜಯಃ ಸಾರ್ವಕಾಮಿಕಃ ।
ಯಂ ಯಂ ಚಿಂತಯತೇ ಕಾಮಂ ತಂ ತಂ ಪ್ರಾಪ್ನೋತಿ ನಿಶ್ಚಿತಮ್
॥ ೪೩ ॥

೩೫. ಹೇ ಧರ್ಮಚಾರಿಣಿ, ನನ್ನ ಅಹಂಕಾರ, ಮನಸ್ಸು, ಬುದ್ಧಿ, ಪ್ರಾಣಾಪಾನಾದಿ ಪಂಚಪ್ರಾಣಗಳು – ಇವನ್ನು ರಕ್ಷಿಸು.

೩೬. ಶೋಭನಳಾದ ವಜ್ರಹಸ್ತೆಯು ನನ್ನ ಪ್ರಾಣಕ್ಕೆ ಸಮಾನವಾದುದೆಲ್ಲವನ್ನೆಲ್ಲ ರಕ್ಷಿಸಲಿ. ಯೋಗಿನಿಯು ರೂಪ, ರಸ, ಗಂಧ, ಸ್ಪರ್ಶ ಹಾಗೂ ಶಬ್ದ – ಇವನ್ನು ರಕ್ಷಿಸಲಿ.

೩೭. ನಾರಾಯಣೀದೇವಿಯು ಸದಾಕಾಲವೂ ನನ್ನ ಸತ್ತ್ವ, ರಜಸ್ಸು ಮತ್ತು ತಮಸ್ಸುಗಳನ್ನು ರಕ್ಷಿಸಲಿ. ವಾರಾಹಿಯು ಆಯುಸ್ಸನ್ನೂ, ವೈಷ್ಣವಿಯು ಧರ್ಮವನ್ನೂ ಕಾಪಾಡಲಿ.

೩೮. ಚಕ್ರಿಣಿಯು ನನ್ನ ಯಶಸ್ಸನ್ನೂ ಕೀರ್ತಿಯನ್ನೂ ಐಶ್ವರ್ಯವನ್ನೂ ಧನವನ್ನೂ ಮತ್ತು ವಿದ್ಯೆಯನ್ನೂ ರಕ್ಷಿಸಲಿ. ಇಂದ್ರಾಣಿಯು ನನ್ನ ವಂಶವನ್ನು ರಕ್ಷಿಸಲಿ. ಹೇ ಚಂಡಿಕೆ, ನನ್ನ ಪಶುಗಳನ್ನು ರಕ್ಷಿಸು.

೩೯-೪೦. ಮಹಾಲಕ್ಷ್ಮಿಯು ನನ್ನ ಪುತ್ರರನ್ನು ರಕ್ಷಿಸಲಿ. ಭೈರವಿಯು ನನ್ನ ಪತಿಯನ್ನು ರಕ್ಷಿಸಲಿ. ಸುಪಥೆಯು ಪಂಥವನ್ನು ರಕ್ಷಿಸಲಿ. ಕ್ಷೇಮಕರಿಯು ಮಾರ್ಗದಲ್ಲಿ ಕ್ಷೇಮವನ್ನುಂಟುಮಾಡಲಿ. ವಿಜಯಶೀಲಳಾದ ಮಹಾಲಕ್ಷ್ಮಿಯು ರಾಜದ್ವಾರದಲ್ಲಿ ಎಲ್ಲ ಕಡೆಯಿಂದಲೂ ನೆಲಸಿರಲಿ.

೪೧. ಕವಚವಿಲ್ಲದ್ದರಿಂದ ರಕ್ಷಣೆಯನ್ನು ಕಳೆದುಕೊಂಡಿರುವ ನನ್ನ ಸ್ಥಾನವಾವುದಾದರೂ ಇದ್ದರೆ ಅದೆಲ್ಲವನ್ನೂ – ಹೇ ದೇವಿ ಜಯಂತಿ, ಪಾಪನಾಶಿನಿ – ರಕ್ಷಿಸು.

೪೨. ತನಗೆ ಶುಭವನ್ನು ಬಯಸುವವನು (ಕವಚವಿಲ್ಲದೆ) ಒಂದು ಹೆಜ್ಜೆಯನ್ನೂ ಇಡಬಾರದು. ಎಲ್ಲೆಲ್ಲಿಗೆ ಹೋದರೂ ಸದಾ ಕವಚದಿಂದ ಆವೃತನಾಗಿಯೇ ಹೋಗಬೇಕು.

೪೩. (ಕವಚದಿಂದ ಆವೃತನಾಗಿ ಎಲ್ಲೆಲ್ಲಿಗೆ ಹೋಗುವನೊ) ಅಲ್ಲೆಲ್ಲ ಧನಲಾಭವೂ, ಸರ್ವಕರ್ಮಗಳಲ್ಲಿ ವಿಜಯವೂ ಉಂಟಾಗುವುವು. (ಅವನು) ಯಾವ ಯಾವ ಕಾಮವನ್ನು ಕುರಿತು ಚಿಂತಿಸುವನೊ ಅದನ್ನು ನಿಶ್ಚಯವಾಗಿ ಪಡೆಯುವನು.

ಪರಮೈಶ್ವರ್ಯಮತುಲಂ ಪ್ರಾಪ್ಸ್ಯತೇ ಭೂತಲೇ ಪುಮಾನ್ ।
ನಿರ್ಭಯೋ ಜಾಯತೇ ಮರ್ತ್ಯಃ ಸಂಗ್ರಾಮೇಷ್ವಪರಾಜಿತಃ ॥ ೪೪ ॥

ತ್ರೈಲೋಕ್ಯೇ ತು ಭವೇತ್ಪೂಜ್ಯಃ ಕವಚೇನಾವೃತಃ ಪುಮಾನ್ ।
ಇದಂ ತು ದೇವ್ಯಾಃ ಕವಚಂ ದೇವಾನಾಮಪಿ ದುರ್ಲಭಮ್ ॥ ೪೫ ॥

ಯಃ ಪಠೇತ್ ಪ್ರಯತೋ ನಿತ್ಯಂ ತ್ರಿಸಂಧ್ಯಂ ಶ್ರದ್ಧಯಾಽನ್ವಿತಃ ।
ದೈವೀಕಲಾ ಭವೇತ್ತಸ್ಯ ತ್ರೈಲೋಕ್ಯೇಷ್ವಪರಾಜಿತಃ ॥ ೪೬ ॥

ಜೀವೇದ್ವರ್ಷಶತಂ ಸಾಗ್ರಮಪಮೃತ್ಯುವಿವರ್ಜಿತಃ ।
ನಶ್ಯಂತಿ ವ್ಯಾಧಯಸ್ಸರ್ವೇ ಲೂತಾವಿಸ್ಫೋಟಕಾದಯಃ ॥ ೪೭ ॥

ಸ್ಥಾವರಂ ಜಂಗಮಂ ಚೈವ ಕೃತ್ರಿಮಂ ಚಾಪಿ ಯದ್ವಿಷಮ್ ।
ಅಭಿಚಾರಾಣಿ ಸರ್ವಾಣಿ ಮಂತ್ರಯಂತ್ರಾಣಿ ಭೂತಲೇ ॥ ೪೮ ॥

ಭೂಚರಾಃ ಖೇಚರಾಶ್ಚೈವ ಜಲಜಾಶ್ಚೋಪದೇಶಿಕಾಃ ।
ಸಹಜಾಃ ಕುಲಜಾ ಮಾಲಾಃ ಶಾಕಿನೀ ಡಾಕಿನೀ ತಥಾ ॥ ೪೯ ॥

ಅಂತರಿಕ್ಷಚರಾ ಘೋರಾ ಡಾಕಿನ್ಯಶ್ಚ ಮಹಾಬಲಾಃ ।
ಗ್ರಹಭೂತಪಿಶಾಚಾಶ್ಚ ಯಕ್ಷಗಂಧರ್ವರಾಕ್ಷಸಾಃ ॥ ೫೦ ॥

ಬ್ರಹ್ಮರಾಕ್ಷಸವೇತಾಲಾಃ ಕೂಷ್ಮಾಂಡಾ ಭೈರವಾದಯಃ ।
ನಶ್ಯಂತಿ ದರ್ಶನಾತ್ ತಸ್ಯ ಕವಚೇ ಹೃದಿ ಸಂಸ್ಥಿತೇ ॥ ೫೧ ॥

೪೪. (ಅಂತಹ) ಮನುಷ್ಯನು ಇಹಲೋಕದಲ್ಲಿಯೇ ಎಣೆಯಿಲ್ಲದ ಪರಮೈಶ್ವರ್ಯವನ್ನು ಪಡೆಯುತ್ತಾನೆ. ಸಂಗ್ರಾಮಗಳಲ್ಲಿ ಸೋಲನ್ನರಿಯದೆ ನಿರ್ಭಯನಾಗುತ್ತಾನೆ.

೪೫. ಕವಚದಿಂದ ಆವೃತನಾದ ಪುರುಷನು ಮೂರು ಲೋಕಗಳಲ್ಲೂ ಪೂಜ್ಯನಾಗುತ್ತಾನೆ. ಈ ದೇವೀಕವಚವಾದರೋ ದೇವತೆಗಳಿಗೂ ದುರ್ಲಭವು.

೪೬. ಯಾವನು ಶ್ರದ್ಧೆಯಿಂದ ಕೂಡಿ ಏಕಾಗ್ರಚಿತ್ತನಾಗಿ ಇದನ್ನು ಪ್ರತಿದಿನವೂ ಮೂರು ಸಂಧ್ಯೆಗಳಲ್ಲೂ ಪಠಿಸುತ್ತಾನೆಯೋ ಅವನಿಗೆ ದೈವೀ ವಿದ್ಯೆಗಳು ಸಿದ್ಧಿಸುತ್ತವೆ. ಅವನು ಮೂರುಲೋಕಗಳಲ್ಲೂ ಸೋಲಿಲ್ಲದವನಾಗುತ್ತಾನೆ.

೪೭. ಅವನು ಅಪಮೃತ್ಯುವಿಲ್ಲದೆ, ಸಂಪೂರ್ಣವಾಗಿ ನೂರುವರ್ಷ ಜೀವಿಸುವನು. ಸೀತಾಳಸಿಡುಬೇ ಮೊದಲಾದ ವ್ಯಾಧಿಗಳೆಲ್ಲವೂ ನಾಶವಾಗುತ್ತವೆ.

೪೮. (ವೃಕ್ಷಾದಿಗಳ) ಸ್ಥಾವರವಿಷ, (ಹಾವು ಮೊದಲಾದವುಗಳ) ಜಂಗಮವಿಷ, ಕೃತ್ರಿಮವಾಗಿ ತಯಾರಿಸಲ್ಪಟ್ಟ ವಿಷ, ಎಲ್ಲ ಆಭಿಚಾರ ಕರ್ಮಗಳು, ಈ ಲೋಕದ ಮಾಟ ಮಂತ್ರ ಯಂತ್ರಗಳು....

೪೯. (ಉಪದ್ರವ ಕೊಡಬಲ್ಲ) ಭೂಮಿಯಲ್ಲಿ ಮತ್ತು ಆಕಾಶದಲ್ಲಿ ಚಲಿಸುವ ಜಂತುಗಳು, ನೀರಿನ ಪ್ರಾಣಿಗಳು, ಉಪದೇಶಮಾತ್ರದಿಂದ ಸಿದ್ಧವಾಗುವ ಕ್ಷುದ್ರ ದೇವತೆಗಳು, ಜನ್ಮದಿಂದಲೇ ಒಡನೆ ಬಂದಿರುವ ದೇವತೆಗಳು, ವಂಶ ದೇವತೆಗಳು, ಕಂಠಮಾಲಾದಿಗಳು, ಶಾಕಿನಿ - ಡಾಕಿನಿಗಳು....

೫೦. ಅಂತರಿಕ್ಷಚಾರಿಗಳೂ ಘೋರರೂ ಮಹಾಬಲಶಾಲಿಗಳೂ ಆದ ಡಾಕಿನಿಗಳು; ಗ್ರಹಗಳು, ಭೂತಗಳು, ಪಿಶಾಚಗಳು, ಯಕ್ಷರು, ಗಂಧರ್ವರು, ರಾಕ್ಷಸರು....

೫೧. ಬ್ರಹ್ಮರಾಕ್ಷಸರು, ಬೇತಾಲಗಳು, ಕೂಷ್ಮಾಂಡಗಳು, ಭೈರವರೇ ಮೊದಲಾದವರು – ಇವೆಲ್ಲವೂ ಹೃದಯದಲ್ಲಿ ಕವಚವು ನೆಲೆಸಿರುವವನ ದರ್ಶನಮಾತ್ರದಿಂದಲೇ ನಾಶವಾಗುತ್ತವೆ.

ಮಾನೋನ್ನತಿರ್ಭವೇದ್ರಾಜ್ಞಸ್ತೇಜೋವೃದ್ಧಿಕರಂ ಪರಮ್ ।
ಯಶಸಾ ವರ್ಧತೇ ಸೋಽಪಿ ಕೀರ್ತಿಮಂಡಿತಭೂತಲೇ ॥ ೫೨ ॥

ಜಪೇತ್ಸಪ್ತಶತೀಂ ಚಂಡೀಂ ಕೃತ್ವಾತು ಕವಚಂ ಪುರಾ ।
ಯಾವದ್ಭೂಮಂಡಲಂ ಧತ್ತೇ ಸಶೈಲವನಕಾನನಮ್ ॥ ೫೩ ॥

ತಾವತ್ತಿಷ್ಠತಿ ಮೇದಿನ್ಯಾಂ ಸಂತತಿಃ ಪುತ್ರಪೌತ್ರಿಕೀ ।
ದೇಹಾಂತೇ ಪರಮಂ ಸ್ಥಾನಂ ಯತ್ಸುರೈರಪಿ ದುರ್ಲಭಮ್ ॥ ೫೪ ॥

ಪ್ರಾಪ್ನೋತಿ ಪುರುಷೋ ನಿತ್ಯಂ ಮಹಾಮಾಯಾಪ್ರಸಾದತಃ ।
ಲಭತೇ ಪರಮಂ ರೂಪಂ ಶಿವೇನ ಸಹ ಮೋದತೇ ॥ ೫೫ ॥

॥ ಇತಿ ವಾರಾಹಪುರಾಣೇ ಹರಿಹರಬ್ರಹ್ಮವಿರಚಿತಂ ದೇವ್ಯಾಃ ಕವಚಮ್ ॥

## ಅರ್ಗಲಾಸ್ತೋತ್ರಮ್

ಅಸ್ಯ ಶ್ರೀ ಅರ್ಗಲಾಸ್ತೋತ್ರಮಂತ್ರಸ್ಯ ವಿಷ್ಣುರ್ಋಷಿಃ, ಅನುಷ್ಟುಪ್ ಛಂದಃ, ಶ್ರೀಮಹಾಲಕ್ಷ್ಮೀರ್ದೇವತಾ, ಶ್ರೀಜಗದಂಬಾಪ್ರೀತಯೇ ಸಪ್ತಶತೀಪಾಠಾಂಗ-ಅರ್ಗಲಾಸ್ತೋತ್ರ-ಜಪೇ ವಿನಿಯೋಗಃ ॥

॥ ಓಂ ನಮಶ್ಚಂಡಿಕಾಯೈ ॥

ಜಯಂತೀ ಮಂಗಲಾ ಕಾಲೀ ಭದ್ರಕಾಲೀ ಕಪಾಲಿನೀ ।
ದುರ್ಗಾ ಕ್ಷಮಾ ಶಿವಾ ಧಾತ್ರೀ ಸ್ವಾಹಾ ಸ್ವಧಾ ನಮೋಽಸ್ತು ತೇ ॥೧॥

ಮಧುಕೈಟಭವಿದ್ರಾವಿ ವಿಧಾತೃವರದೇ ನಮಃ ।
ರೂಪಂ ದೇಹಿ ಜಯಂ ದೇಹಿ ಯಶೋ ದೇಹಿ ದ್ವಿಷೋ ಜಹಿ ॥ ೨ ॥

ಮಹಿಷಾಸುರನಿರ್ನಾಶವಿಧಾತ್ರಿ, ವರದೇ ನಮಃ ।
ರೂಪಂ ದೇಹಿ ಜಯಂ ದೇಹಿ ಯಶೋ ದೇಹಿ ದ್ವಿಷೋ ಜಹಿ ॥ ೩ ॥

೫೨. ಅಂಥವನಿಗೆ ರಾಜನಿಂದ ಸನ್ಮಾನವು ದೊರಕುವುದು. (ಈ ಕವಚವು) ಅತ್ಯಂತವಾಗಿ ತೇಜೋವೃದ್ಧಿಯನ್ನುಂಟುಮಾಡತಕ್ಕದ್ದು. (ಕವಚ ಯುಕ್ತನಾದ) ಅವನೂ ಕೂಡ ತನ್ನ ಕೀರ್ತಿಯಿಂದ ಅಲಂಕೃತವಾದ ಈ ಭೂತಲದಲ್ಲಿ ಮತ್ತಷ್ಟು ಯಶಸ್ಸಿನಿಂದ ವರ್ಧಿಸುತ್ತಾನೆ.

೫೩. ಮೊದಲು ಕವಚವನ್ನು ಮಾಡಿ ಅನಂತರ ಸಪ್ತಶತಿಯನ್ನು ಜಪಿಸಬೇಕು. ಪರ್ವತ-ವನ-ಕಾಡುಗಳಿಂದ ಕೂಡಿದ ಭೂಮಂಡಲವು ಎಲ್ಲಿಯವರೆಗೆ ನಿಂತಿರುವುದೋ....

೫೪-೫೫. ಅಲ್ಲಿಯವರೆಗೆ ಈ ಭೂಲೋಕದಲ್ಲಿ ಪುತ್ರಪೌತ್ರರಿಂದ ಕೂಡಿದ ಅವನ ಸಂತತಿಯು ನೆಲಸಿರುವುದು. ದೇಹಾವಸಾನವಾದ ಮೇಲೆ ಆ ಪುರುಷನು ದೇವತೆಗಳಿಗೂ, ದುರ್ಲಭವಾದ ಪರಮಸ್ಥಾನವನ್ನು ಮಹಾಮಾಯೆಯ ಪ್ರಸಾದದಿಂದಲೇ ಶಾಶ್ವತವಾಗಿ ಪಡೆಯುವನು. ಅತ್ಯುತ್ತಮವಾದ ರೂಪವನ್ನು ಧರಿಸಿ ಶಿವನೊಂದಿಗೆ ಆನಂದಿಸುವನು.

ಹೀಗೆ ವರಾಹಪುರಾಣದಲ್ಲಿ ಹರಿಹರಬ್ರಹ್ಮರಿಂದ ಮಾಡಲ್ಪಟ್ಟ
ದೇವೀ ಕವಚವು (ಸಮಾಪ್ತವಾಯಿತು)

# ಅರ್ಗಲಾಸ್ತೋತ್ರ

೧. ಜಯಂತಿ, ಮಂಗಳೆ, ಕಾಳಿ, ಭದ್ರಕಾಳಿ, ಕಪಾಲಿನಿ, ದುರ್ಗೆ, ಕ್ಷಮೆ, ಶಿವೆ, ಧಾತ್ರಿ, ಸ್ವಾಹಾ ಮತ್ತು ಸ್ವಧಾ–(ಎಂಬೀ ಹೆಸರುಗಳಿಂದ ಪ್ರಸಿದ್ಧಳಾದ) ನಿನಗೆ ನಮಸ್ಕಾರ.

೨. ಮಧುಕೈಟಭ-ಮಾರಕಳೆ, ಬ್ರಹ್ಮನಿಗೆ ವರದಾತೃವೆ, ನಿನಗೆ ನಮಸ್ಕಾರ. (ನನಗೆ) ರೂಪವನ್ನು ಕೊಡು, ಜಯವನ್ನು ಕೊಡು, ಯಶಸ್ಸನ್ನು ಕೊಡು; (ನನ್ನ) ಶತ್ರುಗಳನ್ನು ನಾಶಮಾಡು!

೩. ಮಹಿಷಾಸುರನ ನಾಶವನ್ನು ಮಾಡಿದವಳೆ, ವರದಾತೃವೆ, ನಿನಗೆ ನಮಸ್ಕಾರ!....

ವಂದಿತಾಂಘ್ರಿಯುಗೇ ದೇವಿ ಸರ್ವಸೌಭಾಗ್ಯದಾಯಿನಿ ।
ರೂಪಂ ದೇಹಿ ಜಯಂ ದೇಹಿ ಯಶೋ ದೇಹಿ ದ್ವಿಷೋ ಜಹಿ ॥ ೪ ॥

ರಕ್ತಬೀಜವಧೇ ದೇವಿ ಚಂಡಮುಂಡವಿನಾಶಿನಿ ।
ರೂಪಂ ದೇಹಿ ಜಯಂ ದೇಹಿ ಯಶೋ ದೇಹಿ ದ್ವಿಷೋ ಜಹಿ ॥ ೫ ॥

ಅಚಿಂತ್ಯರೂಪಚರಿತೇ ಸರ್ವಶತ್ರುವಿನಾಶಿನಿ ।
ರೂಪಂ ದೇಹಿ ಜಯಂ ದೇಹಿ ಯಶೋ ದೇಹಿ ದ್ವಿಷೋ ಜಹಿ ॥ ೬ ॥

ನತೇಭ್ಯಸ್ಸರ್ವದಾ ಭಕ್ತ್ಯಾ ಚಂಡಿಕೇ ದುರಿತಾಪಹೇ ।
ರೂಪಂ ದೇಹಿ ಜಯಂ ದೇಹಿ ಯಶೋ ದೇಹಿ ದ್ವಿಷೋ ಜಹಿ ॥ ೭ ॥

ಸ್ತುವದ್ಭ್ಯೋ ಭಕ್ತಿಪೂರ್ವಂ ತ್ವಾಂ ಚಂಡಿಕೇ ವ್ಯಾಧಿನಾಶಿನಿ ।
ರೂಪಂ ದೇಹಿ ಜಯಂ ದೇಹಿ ಯಶೋ ದೇಹಿ ದ್ವಿಷೋ ಜಹಿ ॥ ೮ ॥

ಚಂಡಿಕೇ ಸತತಂ ಯೇ ತ್ವಾಮರ್ಚಯಂತೀಹ ಭಕ್ತಿತಃ ।
ರೂಪಂ ದೇಹಿ ಜಯಂ ದೇಹಿ ಯಶೋ ದೇಹಿ ದ್ವಿಷೋ ಜಹಿ ॥ ೯ ॥

ದೇಹಿ ಸೌಭಾಗ್ಯಮಾರೋಗ್ಯಂ ದೇಹಿ ದೇವಿ ಪರಂ ಸುಖಮ್ ।
ರೂಪಂ ದೇಹಿ ಜಯಂ ದೇಹಿ ಯಶೋ ದೇಹಿ ದ್ವಿಷೋ ಜಹಿ ॥ ೧೦ ॥

ವಿಧೇಹಿ ದ್ವಿಷತಾಂ ನಾಶಂ ವಿಧೇಹಿ ಬಲಮುಚ್ಚಕೈಃ ।
ರೂಪಂ ದೇಹಿ ಜಯಂ ದೇಹಿ ಯಶೋ ದೇಹಿ ದ್ವಿಷೋ ಜಹಿ ॥ ೧೧ ॥

ವಿಧೇಹಿ ದೇವಿ ಕಲ್ಯಾಣಂ ವಿಧೇಹಿ ಪರಮಾಂ ಶ್ರಿಯಮ್ ।
ರೂಪಂ ದೇಹಿ ಜಯಂ ದೇಹಿ ಯಶೋ ದೇಹಿ ದ್ವಿಷೋ ಜಹಿ ॥ ೧೨ ॥

ವಿದ್ಯಾವಂತಂ ಯಶಸ್ವಂತಂ ಲಕ್ಷ್ಮೀವಂತಂ ಜನಂ ಕುರು ।
ರೂಪಂ ದೇಹಿ ಜಯಂ ದೇಹಿ ಯಶೋ ದೇಹಿ ದ್ವಿಷೋ ಜಹಿ ॥ ೧೩ ॥

ಪ್ರಚಂಡದೈತ್ಯದರ್ಪಘ್ನೇ ಚಂಡಿಕೇ ಪ್ರಣತಾಯ ಮೇ ।
ರೂಪಂ ದೇಹಿ ಜಯಂ ದೇಹಿ ಯಶೋ ದೇಹಿ ದ್ವಿಷೋ ಜಹಿ ॥ ೧೪ ॥

ಚತುರ್ಭುಜೇ ಚತುರ್ವಕ್ತ್ರಸಂಸ್ತುತೇ ಪರಮೇಶ್ವರಿ ।
ರೂಪಂ ದೇಹಿ ಜಯಂ ದೇಹಿ ಯಶೋ ದೇಹಿ ದ್ವಿಷೋ ಜಹಿ ॥ ೧೫ ॥

೪. ನಮಸ್ಕರಿಸಲ್ಪಟ್ಟ ಚರಣವುಳ್ಳ ದೇವಿಯೇ, ಸಕಲ ಸೌಭಾಗ್ಯ ದಾತೃವೆ !...

೫. ರಕ್ತಬೀಜವಧಕಾರಕಳಾದ ದೇವಿಯೇ, ಚಂಡಮುಂಡರನ್ನು ನಾಶಮಾಡಿದವಳೇ !...

೬. ಚಿಂತಿಸಲಾಗದಂಥ ರೂಪವನ್ನೂ, ಚರಿತ್ರವನ್ನೂ ಉಳ್ಳವಳೇ, ಸರ್ವಶತ್ರುನಾಶಕಳೇ !...

೭. ಹೇ ಚಂಡಿಕೇ, ಭಕ್ತಿಯಿಂದ ನಮಸ್ಕರಿಸುವವರಿಗೆ ಸದಾ ದುರಿತ ಗಳನ್ನು ಹೋಗಲಾಡಿಸುವವಳೇ !...

೮. ಹೇ ಚಂಡಿಕೇ, ಭಕ್ತಿಯಿಂದ ನಿನ್ನನ್ನು ಸ್ತುತಿಸುವವರ ಮಾನಸಿಕ ಸಂಕಟಗಳನ್ನು ಪರಿಹರಿಸುವವಳೇ !...

೯-೧೦. ಹೇ ಚಂಡಿಕೇ, ಇಲ್ಲಿ ಯಾರು ನಿನ್ನನ್ನು ಸತತವೂ ಭಕ್ತಿಯಿಂದ ಅರ್ಚಿಸುವರೋ ಅವರಿಗೆ ಸೌಭಾಗ್ಯವನ್ನೂ, ಆರೋಗ್ಯವನ್ನೂ, ಪರಮ ಸುಖವನ್ನೂ ಕೊಡು !...

೧೧. ನನ್ನ ಶತ್ರುಗಳ ನಾಶವನ್ನು ಮಾಡು, ಅತ್ಯಂತ ಬಲವನ್ನು ಕೊಡು !...

೧೨. ದೇವಿ, ಮಂಗಳವನ್ನುಂಟುಮಾಡು ! ಪರಮವಾದ ಐಶ್ವರ್ಯವನ್ನು ಕೊಡು !...

೧೩. ಜನರನ್ನು ವಿದ್ಯಾವಂತನ್ನಾಗಿಯೂ, ಕೀರ್ತಿವಂತರನ್ನಾಗಿಯೂ, ಐಶ್ವರ್ಯವಂತರನ್ನಾಗಿಯೂ ಮಾಡು !

೧೪. ಪ್ರಚಂಡಪರಾಕ್ರಮಿಗಳಾದ ರಾಕ್ಷಸರ ದರ್ಪವನ್ನು ನಾಶಮಾಡಿದ ಚಂಡಿಕೆಯೇ, ನಮಸ್ಕರಿಸುತ್ತಿರುವ ನನಗೆ ರೂಪವನ್ನು...

೧೫. ಹೇ ಚತುರ್ಬಾಹುಯುಕ್ತಳೇ, ಬ್ರಹ್ಮನಿಂದ ಸ್ತುತಿಸಲ್ಪಟ್ಟ ಪರಮೇಶ್ವರಿಯೇ !...

ಕೃಷ್ಣೇನ ಸಂಸ್ತುತೇ ದೇವಿ ಶಶ್ವದ್ಭಕ್ತ್ಯಾ ತ್ವಮಂಬಿಕೇ ।
ರೂಪಂ ದೇಹಿ ಜಯಂ ದೇಹಿ ಯಶೋ ದೇಹಿ ದ್ವಿಷೋ ಜಹಿ ॥ ೧೬ ॥

ಹಿಮಾಚಲಸುತಾನಾಥಸಂಸ್ತುತೇ ಪರಮೇಶ್ವರಿ ।
ರೂಪಂ ದೇಹಿ ಜಯಂ ದೇಹಿ ಯಶೋ ದೇಹಿ ದ್ವಿಷೋ ಜಹಿ ॥ ೧೭ ॥

ಸುರಾಸುರಶಿರೋರತ್ನ-ನಿಘೃಷ್ಟಚರಣೇಽಂಬಿಕೇ ।
ರೂಪಂ ದೇಹಿ ಜಯಂ ದೇಹಿ ಯಶೋ ದೇಹಿ ದ್ವಿಷೋ ಜಹಿ ॥ ೧೮ ॥

ಇಂದ್ರಾಣೀಪತಿಸದ್ಭಾವಪೂಜಿತೇ ಪರಮೇಶ್ವರಿ ।
ರೂಪಂ ದೇಹಿ ಜಯಂ ದೇಹಿ ಯಶೋ ದೇಹಿ ದ್ವಿಷೋ ಜಹಿ ॥ ೧೯ ॥

ದೇವಿ ಭಕ್ತಜನೋದ್ದಾಮದತ್ತಾನಂದೋದಯೇಽಂಬಿಕೇ ।
ರೂಪಂ ದೇಹಿ ಜಯಂ ದೇಹಿ ಯಶೋ ದೇಹಿ ದ್ವಿಷೋ ಜಹಿ ॥ ೨೦ ॥

ಪುತ್ರಾನ್ ದೇಹಿ ಧನಂ ದೇಹಿ ಸರ್ವಕಾಮಾಂಶ್ಚ ದೇಹಿ ಮೇ ।
ರೂಪಂ ದೇಹಿ ಜಯಂ ದೇಹಿ ಯಶೋ ದೇಹಿ ದ್ವಿಷೋ ಜಹಿ ॥ ೨೧ ॥

ಪತ್ನೀಂ ಮನೋರಮಾಂ ದೇಹಿ ಮನೋವೃತ್ತಾನುಸಾರಿಣೀಮ್ ।
ತಾರಿಣೀಂ ದುರ್ಗಸಂಸಾರಸಾಗರಸ್ಯ ಕುಲೋದ್ಭವಾಮ್ ॥ ೨೨ ॥

ಇದಂ ಸ್ತೋತ್ರಂ ಪಠಿತ್ವಾ ತು ಮಹಾಸ್ತೋತ್ರಂ ಪಠೇನ್ನರಃ ।
ಸ ತು ಸಪ್ತಶತೀಸಂಖ್ಯಾವರಮಾಪ್ನೋತಿ ಸಂಪದಾಮ್ ॥ ೨೩ ॥

॥ ಇತಿ ಮಾರ್ಕಂಡೇಯಪುರಾಣೇ ಅರ್ಗಲಾಸ್ತೋತ್ರಮ್ ॥

೧೬. ಹೇ ದೇವಿ ಅಂಬಿಕೆ, ನೀನು ಕೃಷ್ಣನಿಂದ ಸದಾಕಾಲವೂ ಭಕ್ತಿಯಿಂದ ಸ್ತುತಿಸಲ್ಪಟ್ಟಿರುವೆ...

೧೭. ಹಿಮವಂತನ ಮಗಳ ಪತಿಯಿಂದ (ಎಂದರೆ ಸಾಕ್ಷಾತ್ ಪರಮೇಶ್ವರನಿಂದ) ಸ್ತುತಿಸಲ್ಪಟ್ಟ ಪರಮೇಶ್ವರಿಯೆ...

೧೮. ಸುರಾಸುರರು (ನಿನಗೆ ನಮಸ್ಕರಿಸುತ್ತಿರುವಾಗ) ಅವರು ಶಿರಸ್ಸಿನಲ್ಲಿ ಧರಿಸಿದ ಕಿರೀಟವೇ ಮೊದಲಾದ ರತ್ನದಿಂದ ಉಜ್ಜಲ್ಪಟ್ಟ ಚರಣ ಕಮಲವುಳ್ಳ ಅಂಬಿಕೆಯೆ...

೧೯. ಶಚೀದೇವಿಯ ಪತಿಯಾದ (ಇಂದ್ರನಿಂದ) ಒಳ್ಳೆಯ ಭಾವನೆಯಿಂದ. ಸಾಕ್ಷಾತ್‌ದಿಂದ್ರನಿಂದ ಭಕ್ತಿಯಿಂದ ಪೂಜಿತಳಾದ ಪರಮೇಶ್ವರಿಯೆ...

೨೦. ಶ್ರೇಷ್ಠ ಭಕ್ತಜನರಿಗೆ ಆನಂದವು ಹುಟ್ಟುವಂತೆ ಮಾಡುತ್ತಿರುವ ದೇವಿ ಅಂಬಿಕೆಯೆ...

೨೧. (ಹೇ ದೇವಿ !) ನನಗೆ ಪುತ್ರರನ್ನು ದಯಪಾಲಿಸು ! ಧನವನ್ನು ದಯಪಾಲಿಸು ! ಸಕಲಾಭೀಷ್ಟಗಳನ್ನೂ ನೆರವೇರಿಸು !...

೨೨. ಹೇ ದೇವಿ ! ಮನಸ್ಸಿಗಾನಂದವನ್ನು ಉಂಟುಮಾಡುವವಳೂ, (ನನ್ನ) ಮನಸ್ಸಿಗನುಕೂಲವಾಗಿ ನಡೆದುಕೊಳ್ಳುವವಳೂ, ಸತ್ಕುಲ ಪ್ರಸೂತಳೂ, ದುರ್ಗಮವಾದ ಸಂಸಾರಸಾಗರವನ್ನು ದಾಟುವುದರಲ್ಲಿ ಸಹಾಯಕಳೂ ಆದಂತಹ ಪತ್ನಿಯನ್ನು ಅನುಗ್ರಹಿಸು !

೨೩. ಮಾನವನು ಈ ಸ್ತೋತ್ರವನ್ನು ಪಠಿಸಿದ ಮೇಲೆ ಮಹಾ ಸ್ತೋತ್ರವನ್ನು (ಎಂದರೆ ಸಪ್ತಶತಿಯನ್ನು) ಪಠಿಸಬೇಕು. (ಆಗ) ಅವನು ಸಂಪತ್ತುಗಳನ್ನು ಏಳುನೂರರಷ್ಟು (ಎಂದರೆ ಅತ್ಯಧಿಕ ಸಂಪತ್ತನ್ನು) ಪಡೆಯುತ್ತಾನೆ.

ಹೀಗೆ ಮಾರ್ಕಂಡೇಯಪುರಾಣದಲ್ಲಿ ಬರುವ ಅರ್ಗಲಾಸ್ತೋತ್ರವು ಮುಗಿಯಿತು.

# ಕೀಲಕಮ್

ಅಸ್ಯ ಶ್ರೀಕೀಲಕಮಂತ್ರಸ್ಯ ಶಿವ ಋಷಿಃ, ಅನುಷ್ಟುಪ್ ಛಂದಃ, ಶ್ರೀಮಹಾಸರಸ್ವತೀ ದೇವತಾ, ಶ್ರೀಜಗದಂಬಾಪ್ರೀತ್ಯರ್ಥಂ ಸಪ್ತಶತೀ-ಪಾಠಾಂಗ-ಕೀಲಕಸ್ತೋತ್ರಜಪೇ ವಿನಿಯೋಗಃ ॥

॥ ಓಂ ನಮಶ್ಚಂಡಿಕಾಯೈ ॥

॥ ಮಾರ್ಕಂಡೇಯ ಉವಾಚ ॥

ವಿಶುದ್ಧಜ್ಞಾನದೇಹಾಯ ತ್ರಿವೇದಿವ್ಯಚಕ್ಷುಷೇ ।
ಶ್ರೇಯಃಪ್ರಾಪ್ತಿನಿಮಿತ್ತಾಯ ನಮಃ ಸೋಮಾರ್ಧಧಾರಿಣೇ ॥ ೧ ॥

ಸರ್ವಮೇತದ್ವಿಜಾನೀಯಾನ್ಮಂತ್ರಾಣಾಮಭಿಕೀಲಕಮ್ ।
ಸೋಽಪಿ ಕ್ಷೇಮಮವಾಪ್ನೋತಿ ಸತತಂ ಜಾಪ್ಯತತ್ಪರಃ ॥ ೨ ॥

ಸಿದ್ಧ್ಯಂತ್ಯುಚ್ಚಾಟನಾದೀನಿ ವಸ್ತೂನಿ ಸಕಲಾನ್ಯಪಿ ।
ಏತೇನ ಸ್ತುವತಾಂ ದೇವೀಂ ಸ್ತೋತ್ರವೃಂದೇನ ಭಕ್ತಿತಃ ॥ ೩ ॥

ನ ಮಂತ್ರೋ ನೌಷಧಂ ತತ್ರ ನ ಕಿಂಚಿದಪಿ ವಿದ್ಯತೇ ।
ವಿನಾ ಜಾಪ್ಯೇನ ಸಿದ್ಧ್ಯೇತ ಸರ್ವಮುಚ್ಚಾಟನಾದಿಕಮ್ ॥ ೪ ॥

ಸಮಗ್ರಾಣ್ಯಪಿ ಸಿದ್ಧ್ಯಂತಿ ಲೋಕಶಂಕಾಮಿಮಾಂ ಹರಃ ।
ಕೃತ್ವಾ ನಿಮಂತ್ರಯಾಮಾಸ ಸರ್ವಮೇವಮಿದಂ ಶುಭಮ್ ॥ ೫ ॥

ಸ್ತೋತ್ರಂ ವೈ ಚಂಡಿಕಾಯಾಸ್ತು ತಚ್ಚ ಗುಪ್ತಂ ಚಕಾರ ಸಃ ।
ಸಮಾಪ್ನೋತಿ ಸುಪುಣ್ಯೇನ ತಾಂ ಯಥಾವನ್ನಿಯಂತ್ರಣಾಮ್ ॥ ೬ ॥

ಸೋಽಪಿ ಕ್ಷೇಮಮವಾಪ್ನೋತಿ ಸರ್ವಮೇವಂ ನ ಸಂಶಯಃ ।
ಕೃಷ್ಣಾಯಾಂ ವಾ ಚತುರ್ದಶ್ಯಾಮಷ್ಟಮ್ಯಾಂ ವಾ ಸಮಾಹಿತಃ ॥ ೭ ॥

# ಕೀಲಕ

೧. ಮಾರ್ಕಂಡೇಯನು ಹೇಳಿದನು: ವಿಶುದ್ಧಜ್ಞಾನವನ್ನೇ ದೇಹವಾಗಿ ಉಳ್ಳ, ಮೂರು ವೇದಗಳನ್ನೇ ಮೂರು ದಿವ್ಯವಾದ ಕಣ್ಣುಗಳನ್ನಾಗಿ ಹೊಂದಿರುವ, ಶ್ರೇಯಸ್ಸನ್ನು ಪಡೆಯಲು ಉಪಾಯರೂಪನಾದ, ಅರ್ಧ ಚಂದ್ರನನ್ನು ಧರಿಸಿದ (ಶಿವನಿಗೆ) ನಮಸ್ಕಾರ.

೨. ಮಂತ್ರಗಳಿಗೆ ಅಭಿಕೀಲಕವಾದ (ಎಂದರೆ ಮಂತ್ರಸಿದ್ಧಿಗಿರುವ ವಿಘ್ನಗಳನ್ನು ನಿವಾರಿಸುವ) ಇದೆಲ್ಲವನ್ನೂ ಅರಿತಿರಬೇಕು. (ಆದರೆ ಹೀಗರಿಯದೆ) ಕೇವಲ ಜಪದಲ್ಲಿಯೇ ತತ್ಪರನಾಗಿರುವವನೂ ಕೂಡ ಕ್ಷೇಮವನ್ನು ಹೊಂದುತ್ತಾನೆ.

೩. ಈ ಸ್ತೋತ್ರವೃಂದದಿಂದ ಯಾರು ಭಕ್ತಿಯಿಂದ ದೇವಿಯನ್ನು ಸ್ತುತಿಸುವರೊ, ಅವರಿಗೆ ಭೂತೋಚ್ಚಾಟನಾದಿಗಳಾಗಲಿ, (ಬಯಸಿದ) ವಸ್ತು ಗಳಾಗಲಿ, ಎಲ್ಲವೂ ಸಿದ್ಧಿಸುತ್ತವೆ.

೪. ಇದಕ್ಕೆ ಮಂತ್ರದ, ಔಷಧಿಯ ಅಥವಾ ಇತರ ಉಪಾಯಗಳ ಆವಶ್ಯಕತೆಯಿರುವುದಿಲ್ಲ. ಜಪವನ್ನು ಮಾಡದಿದ್ದರೂ (ಕೇವಲ ಈ ಸ್ತೋತ್ರ ಪಠನಾದಿಗಳಿಂದಲೇ) ಉಚ್ಚಾಟನಾದಿಗಳೆಲ್ಲವೂ ಸಿದ್ಧಿಸುತ್ತವೆ.

೫. ಅವನಿಗೆ ಸಮಸ್ತವೂ ಸಿದ್ಧಿಸುತ್ತದೆ. (ಕೇವಲ ಸಪ್ತಶತೀಪಠನ ದಿಂದಲೇ ಎಲ್ಲವೂ ಹೇಗೆ ಸಿದ್ಧಿಸುವುದು? ಎಂದು) ಜನಗಳಿಗುಂಟಾಗುವ ಈ ಶಂಕೆಯನ್ನರಿತು ಶಿವನು ಇವೆಲ್ಲವೂ ಶುಭವೆಂದು ಸಾರಿದನು.

೬. ಅವನು ಚಂಡಿಕೆಯ ಈ ಸ್ತೋತ್ರವನ್ನು ಗೋಪ್ಯವಾಗಿಟ್ಟನು. ವಿಧಿಪೂರ್ವಕವಾಗಿ ನಿಯಂತ್ರಿತವಾಗಿರುವ ಆ ಸಪ್ತಶತಿಯನ್ನು ಮಾನವನು ಪುಣ್ಯವಶದಿಂದಲೇ ಪಡೆಯುತ್ತಾನೆ.

೭-೮. (ಯಾವ ಸಾಧಕನು) ಕೃಷ್ಣ ಪಕ್ಷದ ಚತುರ್ದಶಿಯಲ್ಲಾಗಲಿ ಅಷ್ಟಮಿಯಲ್ಲಾಗಲಿ, ಏಕಾಗ್ರಚಿತ್ತದಿಂದ (ಈ ಸಪ್ತಶತಿಯನ್ನು) ಪಾಠ

ದದಾತಿ ಪ್ರತಿಗೃಹ್ಣಾತಿ ನಾನ್ಯಥೈಷಾ ಪ್ರಸೀದತಿ ।
ಇತ್ಥಂ ರೂಪೇಣ ಕೀಲೇನ ಮಹಾದೇವೇನ ಕೀಲಿತಮ್ ॥ ೮ ॥

ಯೋ ನಿಷ್ಕೀಲಾಂ ವಿಧಾಯೈನಾಂ ನಿತ್ಯಂ ಜಪತಿ ಸುಸ್ಫುಟಮ್ ।
ಸ ಸಿದ್ಧಃ ಸ ಗಣಃ ಸೋಽಪಿ ಗಂಧರ್ವೋ ಜಾಯತೇ ನರಃ ॥ ೯ ॥

ನ ಚೈವಾಪ್ಯಟತಸ್ತಸ್ಯ ಭಯಂ ಕ್ವಾಪಿ ಹಿ ಜಾಯತೇ ।
ನಾಪಮೃತ್ಯುವಶಂ ಯಾತಿ ಮೃತೋ ಮೋಕ್ಷಮವಾಪ್ನುಯಾತ್
॥ ೧೦ ॥

ಜ್ಞಾತ್ವಾ ಪ್ರಾರಭ್ಯ ಕುರ್ವೀತ ಹ್ಯಕುರ್ವಾಣೋ ವಿನಶ್ಯತಿ ।
ತತೋ ಜ್ಞಾತ್ವೈವ ಸಂಪನ್ನಮಿದಂ ಪ್ರಾರಭ್ಯತೇ ಬುಧೈಃ ॥ ೧೧ ॥

ಸೌಭಾಗ್ಯಾದಿ ಚ ಯತ್ಕಿಂಚಿದ್ದೃಶ್ಯತೇ ಲಲನಾಜನೇ ।
ತತ್ಸರ್ವಂ ತತ್ಪ್ರಸಾದೇನ ತೇನ ಜಾಪ್ಯಮಿದಂ ಶುಭಮ್ ॥ ೧೨ ॥

ಶನೈಸ್ತು ಜಪ್ಯಮಾನೇಽಸ್ಮಿನ್ ಸ್ತೋತ್ರೇ ಸಂಪತ್ತಿರುಚ್ಚಕೈಃ ।
ಭವತ್ಯೇವ ಸಮಗ್ರಾಽಪಿ ತತಃ ಪ್ರಾರಭ್ಯಮೇವ ತತ್ ॥ ೧೩ ॥

ಐಶ್ವರ್ಯಂ ಯತ್ಪ್ರಸಾದೇನ ಸೌಭಾಗ್ಯಾರೋಗ್ಯಸಂಪದಃ ।
ಶತ್ರುಹಾನಿಃ ಪರೋ ಮೋಕ್ಷಃ ಸ್ತೂಯತೇ ಸಾ ನ ಕಿಂ ಜನೈಃ
॥ ೧೪ ॥

॥ ಇತಿ ಶ್ರೀ ಭಗವತ್ಯಾಃ ಕೀಲಕಸ್ತೋತ್ರಮ್ ಸಮಾಪ್ತಮ್ ॥

ಮಾಡುವನೋ ಅಥವಾ ಕೇಳುವನೋ (ಅವನಿಗೇ ದೇವಿಯು ಪ್ರಸನ್ನಳಾಗುವಳೇ ಹೊರತು) ಇತರ ರೀತಿಯಲ್ಲಿ ಆಚರಿಸುವವನಿಗೆ ಈ ದೇವಿಯು ಪ್ರಸನ್ನಳಾಗಳು. ಮಹಾದೇವನು ಇದನ್ನು ಇಂಥ ಪ್ರತಿಬಂಧದಿಂದ ಬಂಧಿಸಿರುತ್ತಾನೆ.

೯. ಯಾವ ಮಾನವನು ಈ ಸಪ್ತಶತಿಯನ್ನು ಪ್ರತಿಬಂಧರಹಿತವನ್ನಾಗಿ ಮಾಡಿ ಪ್ರತಿದಿನವೂ ಸ್ಪಷ್ಟವಾಗಿ ಜಪಿಸುವನೊ ಅವನು ಸಿದ್ಧನಾಗಿಯೋ, ಗಣದೇವತೆಯಾಗಿಯೋ, ಗಂಧರ್ವನಾಗಿಯೋ ಹುಟ್ಟುವನು.

೧೦. ಅವನು ಎಲ್ಲೆಂದರಲ್ಲಿ ಅಲೆಯುತ್ತಿದ್ದರೂ ಅವನಿಗೆ ಯಾವ ಭಯವೂ ಉಂಟಾಗುವುದಿಲ್ಲ. ಅವನು ಅಪಮೃತ್ಯುವಿಗೆ ಈಡಾಗನು. ಮೃತನಾದಮೇಲೆ ಮೋಕ್ಷವನ್ನು ಹೊಂದುತ್ತಾನೆ.

೧೧. (ಆದುದರಿಂದ ಕೀಲನದ ಮತ್ತು ನಿಷ್ಕೀಲನದ ವಿಷಯವನ್ನು) ಅರಿತುಕೊಂಡೇ (ಸಪ್ತಶತೀಪಾರಾಯಣವನ್ನು) ಪ್ರಾರಂಭಿಸಬೇಕು. ಹೀಗೆ ಮಾಡದವನು ವಿನಾಶವನ್ನು ಹೊಂದುವನು. ಆದುದರಿಂದಲೇ ಸರ್ವಸಂಪನ್ನವಾದ ಇದನ್ನು ವಿದ್ವಾಂಸರು (ಕೀಲನಾದಿ) ವಿಷಯವನ್ನರಿತುಕೊಂಡೇ ಪ್ರಾರಂಭಿಸುತ್ತಾರೆ.

೧೨. ಸ್ತ್ರೀಯರಲ್ಲಿ ಸೌಭಾಗ್ಯಾದಿ ಯಾವ ಯಾವ ಗುಣಗಳು ಕಾಣುವುವೋ ಅವೆಲ್ಲವೂ ಆ ದೇವಿಯ ಅನುಗ್ರಹದಿಂದಲೇ (ಲಭಿಸುವುವು). ಆದ್ದರಿಂದ ಶುಭಮಯವಾದ ಈ ಸಪ್ತಶತಿಯನ್ನು ಜಪಿಸಬೇಕು.

೧೩. ಈ ಸಪ್ತಶತೀ ಸ್ತೋತ್ರವನ್ನು ಮೆಲ್ಲಗೆ ಜಪಿಸಿದರೆ ಸ್ವಲ್ಪ ಫಲವುಂಟಾಗುತ್ತದೆ. ಉಚ್ಚಸ್ವರದಿಂದ ಪಠಿಸಿದರೆ ಸಂಪೂರ್ಣ ಫಲವು ಆಗಿಯೇ ತೀರುತ್ತದೆ. ಆದ್ದರಿಂದ ಅದನ್ನು ಪ್ರಾರಂಭಿಸಲೇಬೇಕು.

೧೪. ಯಾವ ದೇವಿಯ ಅನುಗ್ರಹದಿಂದ ಸೌಭಾಗ್ಯ, ಆರೋಗ್ಯ, ಸಂಪತ್ತು, ಶತ್ರುನಾಶ ಮತ್ತು ಉತ್ತಮಮೋಕ್ಷ – ಇವು (ಸಿದ್ಧಿಸುವುವೊ) ಅಂತಹ ದೇವಿಯನ್ನು ಜನರೇಕೆ ಸ್ತುತಿಸುವುದಿಲ್ಲ ?

ಹೀಗೆ ಭಗವತಿಯ ಕೀಲಕಸ್ತೋತ್ರವು ಸಮಾಪ್ತವಾಯಿತು.

# ನವಾರ್ಣವಿಧಿಃ

(ನವಾರ್ಣಮಂತ್ರಃ – ಓಂ ಐಂ ಹ್ರೀಂ ಕ್ರೀಂ ಚಾಮುಂಡಾಯೈ ವಿಚ್ಚೇ)

ಓಮ್। ಅಸ್ಯ ಶ್ರೀನವಾರ್ಣಮಂತ್ರಸ್ಯ ಬ್ರಹ್ಮವಿಷ್ಣುರುದ್ರಾ ಋಷಯಃ । ಗಾಯತ್ರ್ಯುಷ್ಣಿಗನುಷ್ಟುಪ್ ಛಂದಾಂಸಿ । ಶ್ರೀಮಹಾ ಕಾಲೀ ಮಹಾಲಕ್ಷ್ಮೀ - ಮಹಾಸರಸ್ವತ್ಯೋ ದೇವತಾಃ । ಐಂ ಬೀಜಮ್ ಹ್ರೀಂ ಶಕ್ತಿಃ । ಕ್ಲೀಂ ಕೀಲಕಮ್। ಶ್ರೀಮಾಹಾಕಾಲೀ - ಮಹಾಲಕ್ಷ್ಮೀ - ಮಹಾಸರಸ್ವತೀ - ಪ್ರೀತ್ಯರ್ಥಂ ಜಪೇ ವಿನಿಯೋಗಃ ॥

ಋಷ್ಯಾದಿನ್ಯಾಸಃ – ಬ್ರಹ್ಮವಿಷ್ಣುರುದ್ರಋಷಿಭ್ಯೋ ನಮಃ (ಶಿರಸಿ)। ಗಾಯತ್ರ್ಯುಷ್ಣಿಗನುಷ್ಟುಪ್ ಛಂದೋಭ್ಯೋ ನಮಃ (ಮುಖೇ) । ಮಹಾ ಕಾಲೀ-ಮಹಾಲಕ್ಷ್ಮೀ-ಮಹಾಸರಸ್ವತೀ-ದೇವತಾಭ್ಯೋ ನಮಃ (ಹೃದಿ) । ಐಂ ಬೀಜಾಯ ನಮಃ (ಗುಹ್ಯೇ) । ಹ್ರೀಂ ಶಕ್ತಯೇ ನಮಃ (ಪಾದಯೋಃ) । ಕ್ಲೀಂ ಕೀಲಕಾಯ ನಮಃ (ನಾಭೌ) ॥

ಕರನ್ಯಾಸಃ – (ಪೂರ್ವೋಕ್ತ ನವಾರ್ಣಮಂತ್ರದಿಂದ ಕರಗಳನ್ನು ಸಂಶೋಧಿಸಬೇಕು. ಅನಂತರ –)

ಓಮ್ ಐಮ್ ಅಂಗುಷ್ಠಾಭ್ಯಾಂ ನಮಃ । ಓಂ ಹ್ರೀಂ ತರ್ಜನೀಭ್ಯಾಂ ನಮಃ । ಓಂ ಕ್ಲೀಂ ಮಧ್ಯಮಾಭ್ಯಾಂ ನಮಃ । ಓಂ ಚಾಮುಂಡಾಯೈ ಅನಾಮಿಕಾಭ್ಯಾಂ ನಮಃ । ಓಂ ವಿಚ್ಚೇ ಕನಿಷ್ಠಿಕಾಭ್ಯಾಂ ನಮಃ । ಓಮ್ ಐಂ ಹ್ರೀಂ ಕ್ಲೀಂ ಚಾಮುಂಡಾಯೈ ವಿಚ್ಚೇ ಕರತಲ-ಕರಪೃಷ್ಠಾಭ್ಯಾಂ ನಮಃ ॥

ಹೃದಯಾದಿನ್ಯಾಸಃ – ಓಮ್ ಐಂ ಹೃದಯಾಯ ನಮಃ । ಓಂ ಹ್ರೀಂ ಶಿರಸೇ ಸ್ವಾಹಾ । ಓಂ ಕ್ಲೀಂ ಶಿಖಾಯೈ ವಷಟ್। ಓಂ ಚಾಮುಂಡಾಯೈ ಕವಚಾಯ ಹುಮ್ । ಓಂ ವಿಚ್ಚೇ ನೇತ್ರತ್ರಯಾಯ ವೌಷಟ್ । ಓಂ ಐಂ ಹ್ರೀಂ ಕ್ಲೀಂ ಚಾಮುಂಡಾಯೈ ವಿಚ್ಚೇ ಅಸ್ತ್ರಾಯ ಫಟ್ ॥

ಅಕ್ಷರನ್ಯಾಸಃ – ಓಮ್ ಐಂ ನಮಃ (ಶಿಖಾಯಾಮ್) । ಓಂ ಹ್ರೀಂ

ನಮಃ (ದಕ್ಷಿಣನೇತ್ರೇ) । ಓಂ ಕ್ಲೀಂ ನಮಃ (ವಾಮನೇತ್ರೇ) । ಓಂ ಚಾಂ ನಮಃ (ದಕ್ಷಿಣಕರ್ಣೇ) । ಓಂ ಮುಂ ನಮಃ (ವಾಮಕರ್ಣೇ) । ಓಂ ಡಾಂ ನಮಃ (ದಕ್ಷಿಣನಾಸಾಪುಟೇ) । ಓಂ ಯೈಂ ನಮಃ (ವಾಮನಾಸಾಪುಟೇ) । ಓಂ ವಿಂ ನಮಃ (ಮುಖೇ) । ಓಂ ಚ್ಚೇಂ ನಮಃ (ಗುಹ್ಯೇ) ॥ (ಈಗ ಮೂಲ ನವಾರ್ಣಮಂತ್ರದಿಂದ ಎಂಟುಬಾರಿ ವ್ಯಾಪಕನ್ಯಾಸವನ್ನು ಮಾಡಬೇಕು.)

**ದಿಙ್ನ್ಯಾಸಃ** – ಓಂ ಐಂ ಪ್ರಾಚ್ಯೈ ನಮಃ । ಓಮ್ ಐಮ್ ಆಗ್ನೇಯ್ಯೈ ನಮಃ । ಓಂ ಹ್ರೀಂ ದಕ್ಷಿಣಾಯೈ ನಮಃ । ಓಂ ಹ್ರೀಂ ನೈರ್ಋತ್ಯೈ ನಮಃ । ಓಂ ಕ್ಲೀಂ ಪ್ರತೀಚ್ಯೈ ನಮಃ । ಓಂ ಕ್ಲೀಂ ವಾಯವ್ಯೈ ನಮಃ । ಓಂ ಚಾಮುಂಡಾಯೈ ಉದೀಚ್ಯೈ ನಮಃ । ಓಂ ಚಾಮುಂಡಾಯೈ ಈಶಾನ್ಯೈ ನಮಃ। ಓಂ ಐಂ ಹ್ರೀಂ ಕ್ಲೀಂ ಚಾಮುಂಡಾಯೈ ವಿಚ್ಚೇ ಊರ್ಧ್ವಾಯೈ ನಮಃ । ಓಂ ಐಂ ಹ್ರೀಂ ಕ್ಲೀಂ ಚಾಮುಂಡಾಯೈ ವಿಚ್ಚೇ ಭೂಮ್ಯೈ ನಮಃ॥

## ಧ್ಯಾನಮ್

ಮಾತರ್ಮೇ ಮಧುಕೈಟಭಘ್ನಿ ಮಹಿಷಪ್ರಾಣಾಪಹಾರೋದ್ಯಮೇ
ಹೇಲಾನಿರ್ಜಿತಧೂಮ್ರಲೋಚನವಧೇ ಹೇ ಚಂಡಮುಂಡಾರ್ದಿನಿ ।
ನಿಶ್ಶೇಷೀಕೃತರಕ್ತಬೀಜದನುಜೇ ನಿತ್ಯೇ ನಿಶುಂಭಾಪಹೇ
ಶುಂಭಧ್ವಂಸಿನಿ ಸಂಹರಾಶು ದುರಿತಂ ದುರ್ಗೇ ನಮಸ್ತೇಽಂಬಿಕೇ ॥ ೧ ॥

ಯಾ ದೇವೀ ಮಧುಕೈಟಭಪ್ರಮಥಿನೀ ಯಾ ಮಾಹಿಷೋನ್ಮೂಲಿನೀ
ಯಾ ಧೂಮ್ರೇಕ್ಷಣಚಂಡಮುಂಡಶಮನೀ ಯಾ ರಕ್ತಬೀಜಾಶನೀ ।
ಯಾ ಶುಂಭಾದಿನಿಶುಂಭದೈತ್ಯದಮನೀ ಯಾ ಸಿದ್ಧಲಕ್ಷ್ಮೀಃ ಪರಾ
ಸಾ ಚಂಡೀ ನವಕೋಟಿಶಕ್ತಿಸಹಿತಾ ಮಾಂ ಪಾತು ವಿಶ್ವೇಶ್ವರೀ ॥ ೨ ॥

**ಜಪಃ** – (ಈಗ ನವಾರ್ಣಮಂತ್ರವನ್ನು ೧೦೮ ಬಾರಿ ಜಪಿಸಬೇಕು.)

## ಜಪಸಮರ್ಪಣಮ್

ಗುಹ್ಯಾತಿಗುಹ್ಯಗೋಪ್ತ್ರೀ ತ್ವಂ ಗೃಹಾಣಾಸ್ಮತ್ ಕೃತಂ ಜಪಮ್ ।
ಸಿದ್ಧಿರ್ಭವತು ಮೇ ದೇವಿ ತ್ವತ್ಪ್ರಸಾದಾನ್ಮಹೇಶ್ವರಿ ॥

# ಋಗ್ವೇದೋಕ್ತಂ ರಾತ್ರೀಸೂಕ್ತಮ್

ಓಂ ರಾತ್ರೀ ವ್ಯಖ್ಯದಾಯತೀ ಪುರುತ್ರಾ ದೇವ್ಯಕ್ಷಭಿಃ ।
ವಿಶ್ವಾ ಅಧಿ ಶ್ರಿಯೋಽಧಿತ ॥ ೧ ॥

೧. ಓಮ್. ಆಗಮಿಸುತ್ತಿರುವ ಈ ರಾತ್ರೀದೇವತೆಯು ಪ್ರಕಾಶಮಾನವಾದ ನಕ್ಷತ್ರಗಳ ಮೂಲಕ ವಿಶೇಷವಾಗಿ ಎಲ್ಲ ಕಡೆಯಲ್ಲಿಯೂ ನೋಡುತ್ತಾಳೆ. ಸಕಲ ಶೋಭನವಸ್ತುಗಳನ್ನೂ ಧರಿಸಿರುತ್ತಾಳೆ.

ಓರ್ವಪ್ರಾ ಅಮರ್ತ್ಯಾ ನಿವತೋ ದೇವ್ಯುದ್ವತಃ ।
ಜ್ಯೋತಿಷಾ ಬಾಧತೇ ತಮಃ ॥ ೨ ॥

೨. ಅಮೃತಳಾದ ಆ ರಾತ್ರೀದೇವಿಯು ಮೊದಲು ವಿಸ್ತಾರವಾದ ಅಂತರಿಕ್ಷವನ್ನು ಕತ್ತಲೆಯಿಂದ ತುಂಬಿಬಿಡುತ್ತಾಳೆ. ಬಳ್ಳಿ-ಮರಗಳ ಗುಂಪನ್ನು ತನ್ನ ತೇಜಸ್ಸಿನಿಂದ ಮುಚ್ಚಿಬಿಡುತ್ತಾಳೆ. ಅನಂತರ ಆ ಕತ್ತಲೆಯನ್ನು ಗ್ರಹ ನಕ್ಷತ್ರಾದಿ ರೂಪದ ಬೆಳಕಿನಿಂದ ಹಿಂಸಿಸುತ್ತಾಳೆ.

ನಿರು ಸ್ವಸಾರಮಸ್ಕೃತೋಷಸಂ ದೇವ್ಯಾಯತೀ ।
ಅಪೇದು ಹಾಸತೇ ತಮಃ ॥ ೩ ॥

೩. ಸರ್ವತ್ರ ವ್ಯಾಪಿಸಿ ಬರುತ್ತಿರುವ ರಾತ್ರೀದೇವತೆಯು ತನ್ನ ಸಹೋದರಿಯಾದ ಉಷೋದೇವಿಗೆ (ಉಷಃಕಾಲಕ್ಕೆ) ಅವಕಾಶವನ್ನುಂಟು ಮಾಡಿಕೊಡುತ್ತಾಳೆ. (ಆಗ) ಕತ್ತಲೆಯು ಹೊರಟೇಹೋಗುತ್ತದೆ.

ಸಾ ನೋ ಅದ್ಯ ಯಸ್ಯಾ ವಯಂ ನಿ ತೇ ಯಾಮನ್ನವಿಕ್ಷ್ಮಹಿ ।
ವೃಕ್ಷೇ ನ ವಸತಿಂ ವಯಃ ॥ ೪ ॥

೪. ಆ ರಾತ್ರೀದೇವತೆಯು ಇಂದು ನಮಗೆ ಪ್ರಸನ್ನಳಾಗಿರಲಿ. ಈ ರಾತ್ರಿಯ ಯಾಮದಲ್ಲಿ ನಾವು, ಹಕ್ಕಿಗಳು ಮರದಲ್ಲಿ ಆಶ್ರಯ ಪಡೆಯುವಂತೆ, ಸುಖವಾಗಿ ಮನೆಯಲ್ಲಿರುತ್ತೇವೆ.

ನಿ ಗ್ರಾಮಾಸೋ ಅವಿಕ್ಷತ ನಿ ಪದ್ವಂತೋ ನಿ ಪಕ್ಷಿಣಃ ।
ನಿ ಶ್ಯೇನಾಸಶ್ಚಿದರ್ಥಿನಃ ॥ ೫ ॥

೫. (ಆ ರಾತ್ರಿಯು ಬಂದಾಗ) ಗ್ರಾಮದ ಜನರು ಮಲಗುತ್ತಾರೆ. ಹಾಗೆಯೇ ಪಸುಕುದುರೆಗಳೂ, ಹಕ್ಕಿಗಳೂ, ಶೀಘ್ರವಾಗಿ ಹಾರಬಲ್ಲ ಗಿಡುಗಗಳೂ ಸಹ ಮಲಗುತ್ತವೆ.

ಯಾವಯಾ ವೃಕ್ಯಂ ವೃಕಂ ಯವಯಸ್ತೇನಮೂರ್ಮ್ಯೇ ।
ಅಥಾ ನಃ ಸುತರಾ ಭವ ॥ ೬ ॥

೬. ಹೇ ರಾತ್ರೀದೇವತೇ! ನಮ್ಮನ್ನು ಹಿಂಸಿಸುತ್ತಿರುವ ತೋಳಗಳಿಂದ ನಮ್ಮನ್ನು ಬಿಡಿಸು! ಹಾಗೆಯೇ ಕಳ್ಳನಿಂದ ಬಿಡಿಸು! ಅನಂತರ ನಮಗೆ ಕ್ಷೇಮವನ್ನುಂಟುಮಾಡು!

ಉಪ ಮಾ ಪೇಪಿಶತ್ತಮಃ ಕೃಷ್ಣಂ ವ್ಯಕ್ತಮಸ್ಥಿತ ।
ಉಷ ಋಣೇವ ಯಾತಯ ॥ ೭ ॥

೭. ಎಲ್ಲ ವಸ್ತುಗಳಲ್ಲೂ ಸೇರಿಹೋಗಿರುವ ಕಪ್ಪು ಬಣ್ಣದ ಸ್ಪಷ್ಟವಾದ ಅಂಧಕಾರವು ನನ್ನನ್ನು ಮುತ್ತಿದೆ. ಹೇ ಉಷಾದೇವಿ! ಬೇಡುವವರ ಸಾಲಗಳನ್ನು ಧನಪ್ರದಾನದಿಂದ ಹೋಗಲಾಡಿಸುವಂತೆ ಈ ಅಂಧಕಾರವನ್ನೂ ಹೋಗಲಾಡಿಸು!

ಉಪ ತೇ ಗಾ ಇವಾಕರಂ ವೃಣೀಷ್ವ ದುಹಿತರ್ದಿವಃ ।
ರಾತ್ರಿ ಸ್ತೋಮಂ ನ ಜಿಗ್ಯುಷೇ ॥ ೮ ॥

೮. ಹೇ ಸೂರ್ಯಪುತ್ರಿ! ಹಾಲು ಕರೆಯುವ ಹಸುಗಳನ್ನು ಬಳಿ ಸಾರುವಂತೆ ನಿನ್ನನ್ನು ಬಳಿಸಾರಿ ಸ್ತೋತ್ರಗಳ ಮೂಲಕ ನೀನು ನನ್ನ ಕಡೆ ತಿರುಗುವಂತೆ ಮಾಡುತ್ತೇನೆ. ಹೇ ರಾತ್ರೀದೇವತೆ ! ನಿನ್ನ ಅನುಗ್ರಹದಿಂದ ಶತ್ರುಗಳನ್ನು ಗೆಲ್ಲುವ ನನ್ನ ಸ್ತೋತ್ರವನ್ನು ಕೂಡ – ಹವಿಸ್ಸನ್ನು ಸ್ವೀಕರಿಸುವಂತೆಯೇ – ಸ್ವೀಕರಿಸು!

ಇತಿ ಋಗ್ವೇದೋಕ್ತಂ ರಾತ್ರಿಸೂಕ್ತಮ್

# ತಂತ್ರೋಕ್ತರಾತ್ರೀಸೂಕ್ತಮ್

(ಸಪ್ತಶತಿಯ ಮೊದಲನೆಯ ಅಧ್ಯಾಯದ ೭೧-೫೭ ಶ್ಲೋಕಗಳು ತಂತ್ರೋಕ್ತ ರಾತ್ರೀಸೂಕ್ತವೆನ್ನಿಸಿವೆ. ಅವನ್ನಿಲ್ಲಿ ಪಠಿಸಬೇಕು.)

ಚರಿತ್ರತ್ರಯನ್ಯಾಸಾಃ

ಪ್ರಥಮಮಧ್ಯಮೋತ್ತಮಚರಿತ್ರಾಣಾಂ ಬ್ರಹ್ಮವಿಷ್ಣುರುದ್ರಾ ಋಷಯಃ । ಶ್ರೀಮಹಾಕಾಲೀ-ಮಹಾಲಕ್ಷ್ಮೀ-ಮಹಾಸರಸ್ವತ್ಯೋ ದೇವತಾಃ । ಗಾಯುತ್ರ್ಯುಷ್ಣಿಗನುಷ್ಟುಪ್ ಛಂದಾಂಸಿ । ನಂದಾ-ಶಾಕಂಭರೀ-ಭೀಮಾಃ ಶಕ್ತಯಃ । ರಕ್ತದಂತಿಕಾ-ದುರ್ಗಾ-ಭ್ರಾಮರ್ಯೋ ಬೀಜಾನಿ । ಅಗ್ನಿವಾಯುಸೂರ್ಯಾಸ್ತತ್ತ್ವಾನಿ । ಋಗ್ಯಜುಸ್ಸಾಮವೇದಾ ಧ್ಯಾನಾನಿ । ಸಕಲಕಾಮನಾಸಿದ್ಧಯೇ ಶ್ರೀಮಹಾಕಾಲೀ - ಮಹಾಲಕ್ಷ್ಮೀ - ಮಹಾಸರಸ್ವತೀ - ದೇವತಾ - ಪ್ರೀತ್ಯರ್ಥಂ ಜಪೇ ವಿನಿಯೋಗಃ ॥

ಕರನ್ಯಾಸಃ –

ಖಡ್ಗಿನೀ ಶೂಲಿನೀ ಘೋರಾ ಗದಿನೀ ಚಕ್ರಿಣೀ ತಥಾ ।
ಶಂಖಿನೀ ಚಾಪಿನೀ ಬಾಣಭುಶುಂಡೀಪರಿಘಾಯುಧಾ ॥
ಅಂಗುಷ್ಠಾಭ್ಯಾಂ ನಮಃ ॥

ಶೂಲೇನ ಪಾಹಿ ನೋ ದೇವಿ ಪಾಹಿ ಖಡ್ಗೇನ ಚಾಂಬಿಕೇ ।
ಘಂಟಾಸ್ವನೇನ ನಃ ಪಾಹಿ ಚಾಪಜ್ಯಾನಿಸ್ಸ್ವನೇನ ಚ ॥
ತರ್ಜನೀಭ್ಯಾಂ ನಮಃ ॥

ಪ್ರಾಚ್ಯಾಂ ರಕ್ಷ ಪ್ರತೀಚ್ಯಾಂ ಚ ಚಂಡಿಕೇ ರಕ್ಷ ದಕ್ಷಿಣೇ ।
ಭ್ರಾಮಣೇನಾತ್ಮಶೂಲಸ್ಯ ಉತ್ತರಸ್ಯಾಂ ತಥೇಶ್ವರೀ ॥
ಮಧ್ಯಮಾಭ್ಯಾಂ ನಮಃ ॥

ಸೌಮ್ಯಾನಿ ಯಾನಿ ರೂಪಾಣಿ ತ್ರೈಲೋಕ್ಯೇ ವಿಚರಂತಿ ತೇ ।
ಯಾನಿ ಚಾತ್ಯಂತಘೋರಾಣಿ ತೈ ರಕ್ಷಾಸ್ಮಾಂಸ್ತಥಾ ಭುವಮ್ ॥
ಅನಾಮಿಕಾಭ್ಯಾಂ ನಮಃ ॥

ಖಡ್ಗಶೂಲಗದಾದೀನಿ ಯಾನಿ ಚಾಸ್ತ್ರಾಣಿ ತೇಽಂಬಿಕೇ ।
ಕರಪಲ್ಲವಸಂಗೀನಿ ತೈರಸ್ಮಾನ್ ರಕ್ಷ ಸರ್ವತಃ ॥
ಕನಿಷ್ಠಿಕಾಭ್ಯಾಂ ನಮಃ ॥

ಸರ್ವಸ್ವರೂಪೇ ಸರ್ವೇಶೇ ಸರ್ವಶಕ್ತಿಸಮನ್ವಿತೇ ।
ಭಯೇಭ್ಯಸ್ತ್ರಾಹಿ ನೋ ದೇವಿ ದುರ್ಗೇ ದೇವಿ ನಮೋಽಸ್ತು ತೇ ॥
ಕರತಲಕರಪೃಷ್ಠಾಭ್ಯಾಂ ನಮಃ ॥

ಹೃದಯಾದಿನ್ಯಾಸಃ – (ಕರನ್ಯಾಸದ ಮಂತ್ರಗಳನ್ನೇ ಉಪಯೋಗಿಸಬೇಕು.) ಖಡ್ಗಿನೀ... ಹೃದಯಾಯ ನಮಃ । ಶೂಲೇನ ... ಶಿರಸೇ ಸ್ವಾಹಾ । ಪ್ರಾಚ್ಯಾಂ... ಶಿಖಾಯೈ ವಷಟ್ । ಸೌಮ್ಯಾನಿ ಕವಚಾಯ ಹುಮ್ । ಖಡ್ಗಶೂಲ... ನೇತ್ರತ್ರಯಾಯ ವೌಷಟ್ । ಸರ್ವಸ್ವರೂಪೇ... ಅಸ್ತ್ರಾಯ ಫಟ್ ॥

ಧ್ಯಾನಮ್ –

ವಿದ್ಯುದ್ದಾಮಸಮಪ್ರಭಾಂ ಮೃಗಪತಿಸ್ಕಂಧಸ್ಥಿತಾಂ ಭೀಷಣಾಂ
ಕನ್ಯಾಭಿಃ ಕರವಾಲಖೇಟವಿಲಸದ್-ಹಸ್ತಾಭಿರಾಸೇವಿತಾಮ್ ।
ಹಸ್ತೈಶ್ಚಕ್ರಗದಾಸಿಖೇಟವಿಶಿಖಾಂಶ್ಚಾಪಂ ಗುಣಂ ತರ್ಜನೀಂ
ಬಿಭ್ರಾಣಾಮನಲಾತ್ಮಿಕಾಂ ಶಶಿಧರಾಂ ದುರ್ಗಾಂ ತ್ರಿನೇತ್ರಾಂ ಭಜೇ ॥

# ಶ್ರೀದುರ್ಗಾಸಪ್ತಶತೀ

## ಅಥ ಪ್ರಥಮಚರಿತ್ರಮ್

ಪ್ರಥಮಚರಿತ್ರಸ್ಯ ಬ್ರಹ್ಮಾ ಋಷಿಃ । ಮಹಾಕಾಲೀ ದೇವತಾ । ಗಾಯತ್ರೀ ಛಂದಃ । ನಂದಾ ಶಕ್ತಿಃ । ರಕ್ತದಂತಿಕಾ ಬೀಜಮ್ । ಅಗ್ನಿ - ಸ್ತತ್ತ್ವಮ್ । ಋಗ್ವೇದಃ ಸ್ವರೂಪಮ್ । ಶ್ರೀಮಹಾಕಾಲೀಪ್ರೀತ್ಯರ್ಥಂ ಪ್ರಥಮಚರಿತ್ರಜಪೇ ವಿನಿಯೋಗಃ ॥

ಮಹಾಕಾಲೀಧ್ಯಾನಮ್

ಓಂ ಖಡ್ಗಂ ಚಕ್ರಗದೇಷುಚಾಪಪರಿಘಾನ್ ಶೂಲಂ ಭುಶುಂಡೀಂ ಶಿರಃ
ಶಂಖಂ ಸಂದಧತೀಂ ಕರೈಸ್ತ್ರಿನಯನಾಂ ಸರ್ವಾಂಗಭೂಷಾಽಽವೃತಾಮ್।
ಯಾಂ ಹಂತುಂ ಮಧುಕೈಟಭೌ ಜಲಜಭೂಸ್ತುಷ್ಟಾವ ಸುಪ್ತೇ ಹರೌ
ನೀಲಾಶ್ಮದ್ಯುತಿಮಾಸ್ಯಪಾದದಶಕಾಂ ಸೇವೇ ಮಹಾಕಾಲಿಕಾಮ್ ॥

## ಪ್ರಥಮ ಚರಿತ್ರೆ

ಮಹಾಕಾಳೀಧ್ಯಾಸ

ನೀಲಮಣಿಯಂತೆ ದೇಹಕಾಂತಿಯುಳ್ಳ, ಹತ್ತು ತಲೆಗಳನ್ನೂ ಹತ್ತು ಪಾದಗಳನ್ನೂ ಹೊಂದಿರುವ, ಸರ್ವಾಂಗಗಳಲ್ಲೂ ಒಡವೆಗಳನ್ನು ಧರಿಸಿರುವ, ಖಡ್ಗ, ಚಕ್ರ, ಗದೆ, ಬಾಣ, ಬಿಲ್ಲು, ಪರಿಘ, ಶೂಲ, ಭುಶುಂಡಿ, ನರಶಿರಸ್ಸು, ಶಂಖ-ಇವುಗಳನ್ನು ಕೈಗಳಲ್ಲಿ ಹಿಡಿದಿರುವ, ತ್ರಿಲೋಚನೆಯಾದ, ಹರಿಯು ನಿದ್ರಿಸುತ್ತಿದ್ದಾಗ ಮಧುಕೈಟಭರನ್ನು ಕೊಲ್ಲುವುದಕ್ಕಾಗಿ ಯಾವಳನ್ನು ಚತುರ್ಮುಖ ಬ್ರಹ್ಮನು ಸ್ತುತಿಸಿದನೋ ಅಂತಹ, ಮಹಾಕಾಳಿಯನ್ನು ಸೇವಿಸುತ್ತೇನೆ.

# ಪ್ರಥಮೋಽಧ್ಯಾಯಃ

## ಮಧು-ಕೈಟಭ-ವಧಃ

ಓಮ್ ಐಂ ಮಾರ್ಕಂಡೇಯ ಉವಾಚ ॥ ೧ ॥

ಸಾವರ್ಣಿಸ್ಸೂರ್ಯತನಯೋ ಯೋ ಮನುಃ ಕಥ್ಯತೇಽಷ್ಟಮಃ ।
ನಿಶಾಮಯ ತದುತ್ಪತ್ತಿಂ ವಿಸ್ತರಾದ್ಗದತೋ ಮಮ ॥ ೨ ॥

ಮಹಾಮಾಯಾಽನುಭಾವೇನ ಯಥಾ ಮನ್ವಂತರಾಧಿಪಃ ।
ಸ ಬಭೂವ ಮಹಾಭಾಗಃ ಸಾವರ್ಣಿಸ್ತನಯೋ ರವೇಃ ॥ ೩ ॥

ಸ್ವಾರೋಚಿಷೇಽಂತರೇ ಪೂರ್ವಂ ಚೈತ್ರವಂಶಸಮುದ್ಭವಃ ।
ಸುರಥೋ ನಾಮ ರಾಜಾಽಭೂತ್ ಸಮಸ್ತೇ ಕ್ಷಿತಿಮಂಡಲೇ ॥ ೪ ॥

ತಸ್ಯ ಪಾಲಯತಃ ಸಮ್ಯಕ್ ಪ್ರಜಾಃ ಪುತ್ರಾನಿವೌರಸಾನ್ ।
ಬಭೂವುಃ ಶತ್ರವೋ ಭೂಪಾಃ ಕೋಲಾವಿಧ್ವಂಸಿನಸ್ತದಾ ॥ ೫ ॥

ತಸ್ಯ ತೈರಭವದ್ಯುದ್ಧಮತಿಪ್ರಬಲದಂಡಿನಃ ।
ನ್ಯೂನೈರಪಿ ಸ ತೈರ್ಯುದ್ಧೇ ಕೋಲಾವಿಧ್ವಂಸಿಭಿರ್ಜಿತಃ ॥ ೬ ॥

ತತಃ ಸ್ವಪುರಮಾಯಾತೋ ನಿಜದೇಶಾಧಿಪೋಽಭವತ್ ।
ಆಕ್ರಾಂತಃ ಸ ಮಹಾಭಾಗಸ್ತೈಸ್ತದಾ ಪ್ರಬಲಾರಿಭಿಃ ॥ ೭ ॥

ಅಮಾತ್ಯೈರ್ಬಲಿಭಿರ್ದುಷ್ಟೈರ್ದುರ್ಬಲಸ್ಯ ದುರಾತ್ಮಭಿಃ ।
ಕೋಶೋ ಬಲಂ ಚಾಪಹೃತಂ ತತ್ರಾಪಿ ಸ್ವಪುರೇ ತತಃ ॥ ೮ ॥

ತತೋ ಮೃಗಯಾವ್ಯಾಜೇನ ಹೃತಸ್ವಾಮ್ಯಃ ಸ ಭೂಪತಿಃ ।
ಏಕಾಕೀ ಹಯಮಾರುಹ್ಯ ಜಗಾಮ ಗಹನಂ ವನಮ್ ॥ ೯ ॥

# ಮೊದಲನೆಯ ಅಧ್ಯಾಯ

## ಮಧು-ಕೈಟಭ-ವಧೆ

೧-೨. ಓಮ್ ಐಮ್, ಮಾರ್ಕಂಡೇಯನು ಹೇಳಿದನು: ಎಂಟನೆಯ ಮನುವೆಂದು ಹೇಳಲ್ಪಡುವ ಸೂರ್ಯತನಯ-ಸಾವರ್ಣಿಯ ಉತ್ಪತ್ತಿ ಚರಿತ್ರೆಯನ್ನು ವಿಸ್ತಾರವಾಗಿ ಹೇಳುವ ನನ್ನ (ವಚನವನ್ನು) ಆಲಿಸು.

೩. ಮಹಾಭಾಗ್ಯವಂತನೂ ರವಿಸುತನೂ ಆದ ಆ ಸಾವರ್ಣಿಯು ಹೇಗೆ ಮಹಾಮಾಯೆಯ ಮಹಿಮೆಯಿಂದ ಮನ್ವಂತರಕ್ಕೆ ಒಡೆಯನಾದನೋ (ಅದನ್ನು ವಿವರಿಸುವೆನು).

೪. ಹಿಂದೆ ಸ್ವಾರೋಚಿಷವೆಂಬ ಮನ್ವಂತರದಲ್ಲಿ ಚೈತ್ರವಂಶದಲ್ಲಿ ಹುಟ್ಟಿದ ಸುರಥನೆಂಬುವನು ಸಮಸ್ತ ಭೂಮಂಡಲಕ್ಕೆ ರಾಜನಾಗಿದ್ದನು.

೫. ಅವನು ತನ್ನ ಪ್ರಜೆಗಳನ್ನು ಔರಸಪುತ್ರರಂತೆ ಪಾಲಿಸುತ್ತಿರುವಾಗ ಕೋಲಾವಿಧ್ವಂಸಿಗಳಾದ ಕೆಲವರು ರಾಜರು ಅವನಿಗೆ ಶತ್ರುಗಳಾದರು.

೬. ಅತಿ ಪ್ರಬಲವಾದ ಸೈನ್ಯವನ್ನು ಹೊಂದಿದ್ದ ಸುರಥನಿಗೆ ಅವರೊಡನೆ ಯುದ್ಧವುಂಟಾಯಿತು. (ತನಗಿಂತ) ಕಡಮೆಯಾದ ಸೈನ್ಯವನ್ನು ಹೊಂದಿದ್ದರೂ ಯುದ್ಧದಲ್ಲಿ ಅವನು ಕೋಲಾವಿಧ್ವಂಸಿಗಳಿಂದ ಸೋಲಿಸಲ್ಪಟ್ಟನು.

೭. ಅನಂತರ (ಸುರಥನು) ತನ್ನ ನಗರಕ್ಕೆ ಹಿಂತಿರುಗಿ ಬಂದು ತನ್ನ ದೇಶಕ್ಕೆ ಮಾತ್ರ ಅಧಿಪತಿಯಾಗಿದ್ದನು. ಆಗ ಮಹಾಭಾಗನಾದ ಅವನು ಪ್ರಬಲರಾದ ಶತ್ರುಗಳಿಂದ ಆಕ್ರಮಿಸಲ್ಪಟ್ಟನು.

೮. ತನ್ನ ನಗರದಲ್ಲಿಯೂ ದುರಾತ್ಮರೂ ಬಲಿಷ್ಠರೂ ಆದ ಮಂತ್ರಿಗಳಿಂದ (ಈಗಾಗಲೇ ಶತ್ರುಗಳಿಂದ ಸೋತು) ದುರ್ಬಲನಾಗಿದ್ದ (ಅವನ) ಭಂಡಾರ-ಸೈನ್ಯ-ಸಂಪತ್ತುಗಳು ಅಪಹರಿಸಲ್ಪಟ್ಟವು.

೯. ಅನಂತರ, ತನ್ನ ಸ್ವಾಮಿತ್ವವನ್ನು ಕಳೆದುಕೊಂಡಿದ್ದ ಆ ರಾಜನು ಬೇಟೆಯಾಡುವ ನೆಪದಿಂದ ಏಕಾಕಿಯಾಗಿ ಕುದುರೆಯನ್ನು ಹತ್ತಿ ದಟ್ಟವಾದ ಕಾಡೊಂದನ್ನು ಪ್ರವೇಶಿಸಿದನು.

ಸ ತತ್ರಾಶ್ರಮಮದ್ರಾಕ್ಷೀದ್ದ್ವಿಜವರ್ಯಸ್ಯ ಮೇಧಸಃ ।
ಪ್ರಶಾಂತಶ್ವಾಪದಾಕೀರ್ಣಂ ಮುನಿಶಿಷ್ಯೋಪಶೋಭಿತಮ್ ॥ ೧೦ ॥

ತಸ್ಥೌ ಕಂಚಿತ್ ಸ ಕಾಲಂ ಚ ಮುನಿನಾ ತೇನ ಸತ್ಕೃತಃ ।
ಇತಶ್ಚೇತಶ್ಚ ವಿಚರಂಸ್ತಸ್ಮಿನ್ ಮುನಿವರಾಶ್ರಮೇ ॥ ೧೧ ॥

ಸೋಽಚಿಂತಯತ್ ತದಾ ತತ್ರ ಮಮತ್ವಾಕೃಷ್ಟಮಾನಸಃ ।
ಮತ್ಪೂರ್ವೈಃ ಪಾಲಿತಂ ಪೂರ್ವಂ ಮಯಾ ಹೀನಂ ಪುರಂ ಹಿ ತತ್
॥ ೧೨ ॥

ಮದ್ಭೃತ್ಯೈಸ್ತೈರಸದ್ವೃತ್ತೈರ್ಧರ್ಮತಃ ಪಾಲ್ಯತೇ ನ ವಾ ॥ ೧೩ ॥

ನ ಜಾನೇ ಸ ಪ್ರಧಾನೋ ಮೇ ಶೂರೋ ಹಸ್ತೀ ಸದಾಮದಃ ।
ಮಮ ವೈರಿವಶಂ ಯಾತಃ ಕಾನ್ ಭೋಗಾನುಪಲಪ್ಸ್ಯತೇ ॥ ೧೪ ॥

ಯೇ ಮಮಾನುಗತಾ ನಿತ್ಯಂ ಪ್ರಸಾದಧನಭೋಜನೈಃ ।
ಅನುವೃತ್ತಿಂ ಧ್ರುವಂ ತೇಽದ್ಯ ಕುರ್ವಂತ್ಯನ್ಯಮಹೀಭೃತಾಮ್ ॥ ೧೫ ॥

ಅಸಮ್ಯಗ್ವ್ಯಯಶೀಲೈಸ್ತೈಃ ಕುರ್ವದ್ಭಿಃ ಸತತಂ ವ್ಯಯಮ್ ।
ಸಂಚಿತಃ ಸೋಽತಿದುಃಖೇನ ಕ್ಷಯಂ ಕೋಶೋ ಗಮಿಷ್ಯತಿ ॥ ೧೬ ॥

ಏತಚ್ಚಾನ್ಯಚ್ಚ ಸತತಂ ಚಿಂತಯಾಮಾಸ ಪಾರ್ಥಿವಃ ।
ತತ್ರ ವಿಪ್ರಾಶ್ರಮಾಭ್ಯಾಶೇ ವೈಶ್ಯಮೇಕಂ ದದರ್ಶ ಸಃ ॥ ೧೭ ॥

ಸ ಪೃಷ್ಟಸ್ತೇನ ಕಸ್ತ್ವಂ ಭೋ ಹೇತುಶ್ಚಾಗಮನೇಽತ್ರ ಕಃ ।
ಸಶೋಕ ಇವ ಕಸ್ಮಾತ್ತ್ವಂ ದುರ್ಮನಾ ಇವ ಲಕ್ಷ್ಯಸೇ ॥ ೧೮ ॥

೧೦. ಸುಮೇಧನೆಂಬ ದ್ವಿಜೋತ್ತಮನಿಗೆ ಸೇರಿದ್ದ, ಶಾಂತವಾದ ವನ್ಯಮೃಗಗಳಿಂದ ಕೂಡಿದ್ದ. ಮತ್ತು ಮುನಿಶಿಷ್ಯರಿಂದ ಶೋಭಿಸುತ್ತಿದ್ದ ಆಶ್ರಮವೊಂದನ್ನು ಅಲ್ಲಿ ಕಂಡನು.

೧೧. ಆ ಮುನಿಯಿಂದ ಸತ್ಕೃತನಾದ ಅವನು ಆ ಮುನಿಶ್ರೇಷ್ಠನ ಆಶ್ರಮದಲ್ಲಿ ಇಲ್ಲಿಂದಲ್ಲಿಗೆ ಸಂಚರಿಸುತ್ತ ಸ್ವಲ್ಪಕಾಲವನ್ನು ಕಳೆದನು.

೧೨. ಆಗ ಅಲ್ಲಿ ಮಮಕಾರದ ಸಂಸ್ಕಾರದಿಂದ ಸೆಳೆಯಲ್ಪಟ್ಟ ಮನಸ್ಸುಳ್ಳವನಾಗಿ ಅವನು (ಹೀಗೆ) ಚಿಂತಿಸಿದನು :

೧೩. ಹಿಂದೆ ನನ್ನ ಪೂರ್ವಜರಿಂದ ಪಾಲಿಸಲ್ಪಟ್ಟು (ಈಗ) ನನ್ನಿಂದ ಕಳೆದುಕೊಳ್ಳಲ್ಪಟ್ಟಿರುವ ಆ (ನನ್ನ) ನಗರವು ದುಷ್ಟವರ್ತನೆಯುಳ್ಳ ನನ್ನ ಸೇವಕರಿಂದ ಧರ್ಮಕ್ಕನುಸಾರವಾಗಿ ಪಾಲಿಸಲ್ಪಡುತ್ತಿದೆಯೋ ಅಥವಾ ಇಲ್ಲವೋ?

೧೪. ನನಗೆ ಮುಖ್ಯವಾಗಿದ್ದ, ಸದಾ ಮದಿಸಿದ್ದ ಮತ್ತು ಪರಾಕ್ರಮ ಶಾಲಿಯಾಗಿದ್ದ (ಆದರೆ ಈಗ) ನನ್ನ ಶತ್ರುಗಳ ವಶದಲ್ಲಿರುವ, ನನ್ನ ಪಟ್ಟದಾನೆಯು ಯಾವ ಭೋಗಗಳನ್ನು ಹೊಂದುತ್ತಿರುವುದೋ ನಾನರಿಯೆನಲ್ಲ ?

೧೫. ಯಾರು ಯಾವಾಗಲೂ ನನ್ನ ಅನುಗ್ರಹ-ಧನ-ಭೋಜನಗಳನ್ನು ಹೊಂದಿ ನನ್ನ ಅನುಯಾಯಿಗಳಾಗಿದ್ದರೋ ಅವರು ಇಂದು ನಿಶ್ಚಯವಾಗಿ ಇತರ ರಾಜರನ್ನು ಅನುಸರಿಸಿಕೊಂಡಿರುವರಲ್ಲವೆ?

೧೬. (ನಾನು) ಬಹು ಕಷ್ಟದಿಂದ ಸಂಪಾದಿಸಿದ ಭಂಡಾರವು ನೀತಿಯಿಲ್ಲದೆ ಸದಾ ದುಂದುವೆಚ್ಚಮಾಡುವ ಸ್ವಭಾವವುಳ್ಳ ಅವರಿಂದ ನಾಶ ಹೊಂದುವುದಲ್ಲ !

೧೭. ಆ ರಾಜನು ಇದನ್ನು ಮತ್ತು ಇತರ ವಿಷಯಗಳನ್ನು ಕುರಿತು ಸತತವಾಗಿ ಚಿಂತಿಸಿದನು. (ಆ ಸಮಯದಲ್ಲಿ) ಮುನಿಯ ಆಶ್ರಮದ ಸಮೀಪದಲ್ಲಿ ವೈಶ್ಯನೊಬ್ಬನನ್ನು ನೋಡಿದನು.

೧೮. ಆ ವೈಶ್ಯನು (ರಾಜನಿಂದ ಹೀಗೆ) ಪ್ರಶ್ನಿಸಲ್ಪಟ್ಟನು: ಅಯ್ಯಾ! ನೀನ್ಯಾರು? ನೀನಿಲ್ಲಿಗೆ ಬರಲು ಕಾರಣವೇನು? ಶೋಕವುಳ್ಳವನಂತೆಯೂ ಚಿಂತಾಕ್ರಾಂತನಂತೆಯೂ ಕಾಣುತ್ತಿರುವೆಯಲ್ಲ, ಏಕೆ?

ಇತ್ಯಾಕರ್ಣ್ಯ ವಚಸ್ತಸ್ಯ ಭೂಪತೇಃ ಪ್ರಣಯೋದಿತಮ್ ।
ಪ್ರತ್ಯುವಾಚ ಸ ತಂ ವೈಶ್ಯಃ ಪ್ರಶ್ರಯಾವನತೋ ನೃಪಮ್ ॥ ೧೯ ॥

ವೈಶ್ಯ ಉವಾಚ ॥ ೨೦ ॥

ಸಮಾಧಿರ್ನಾಮ ವೈಶ್ಯೋಽಹಮುತ್ಪನ್ನೋ ಧನಿನಾಂ ಕುಲೇ ।
ಪುತ್ರದಾರೈರ್ನಿರಸ್ತಶ್ಚ ಧನಲೋಭಾದಸಾಧುಭಿಃ ॥ ೨೧ ॥

ವಿಹೀನಶ್ಚ ಧನೈರ್ದಾರೈಃ ಪುತ್ರೈರಾದಾಯ ಮೇ ಧನಮ್ ।
ವನಮಭ್ಯಾಗತೋ ದುಃಖೀ ನಿರಸ್ತಶ್ಚಾಪ್ತಬಂಧುಭಿಃ ॥ ೨೨ ॥

ಸೋಽಹಂ ನ ವೇದ್ಮಿ ಪುತ್ರಾಣಾಂ ಕುಶಲಾಕುಶಲಾತ್ಮಿಕಾಮ್ ।
ಪ್ರವೃತ್ತಿಂ ಸ್ವಜನಾನಾಂ ಚ ದಾರಾಣಾಂ ಚಾತ್ರ ಸಂಸ್ಥಿತಃ ॥ ೨೩ ॥

ಕಿಂ ನು ತೇಷಾಂ ಗೃಹೇ ಕ್ಷೇಮಮಕ್ಷೇಮಂ ಕಿಂ ನು ಸಾಂಪ್ರತಮ್
॥ ೨೪ ॥

ಕಥಂ ತೇ ಕಿಂ ನು ಸದ್ವೃತ್ತಾ ದುರ್ವೃತ್ತಾಃ ಕಿಂ ನು ಮೇ ಸುತಾಃ ॥ ೨೫ ॥

ರಾಜೋವಾಚ ॥ ೨೬ ॥

ಯೈರ್ನಿರಸ್ತೋ ಭವಾಂಲ್ಲುಬ್ಧೈಃ ಪುತ್ರದಾರಾದಿಭಿರ್ಧನೈಃ ॥ ೨೭ ॥

ತೇಷು ಕಿಂ ಭವತಃ ಸ್ನೇಹಮನುಬಧ್ನಾತಿ ಮಾನಸಮ್ ॥ ೨೮ ॥

ವೈಶ್ಯ ಉವಾಚ ॥ ೨೯ ॥

ಏವಮೇತದ್ಯಥಾ ಪ್ರಾಹ ಭವಾನಸ್ಮದ್ಗತಂ ವಚಃ ।
ಕಿಂ ಕರೋಮಿ ನ ಬಧ್ನಾತಿ ಮಮ ನಿಷ್ಠುರತಾಂ ಮನಃ ॥ ೩೦ ॥

ಯೈಃ ಸಂತ್ಯಜ್ಯ ಪಿತೃಸ್ನೇಹಂ ಧನಲುಬ್ಧೈರ್ನಿರಾಕೃತಃ ।
ಪತಿಸ್ವಜನಹಾರ್ದಂ ಚ ಹಾರ್ದಿ ತೇಷ್ವೇವ ಮೇ ಮನಃ ॥ ೩೧ ॥

೧೯. ಆ ಭೂಪತಿಯು ಪ್ರೀತಿಯಿಂದಾಡಿದ ಮಾತನ್ನು ಕೇಳಿ ವೈಶ್ಯನು ವಿನಯದಿಂದ ಬಗ್ಗಿದವನಾಗಿ ಅವನನ್ನು ಕುರಿತು (ಹೀಗೆ) ಪ್ರತ್ಯುತ್ತರ ಕೊಟ್ಟನು.

೨೦-೨೧. ವೈಶ್ಯನು ಹೇಳಿದನು: ನಾನು ಸಮಾಧಿಯೆಂಬ ಹೆಸರಿನ ವೈಶ್ಯನು, ಧನಾಢ್ಯರ ಮನೆತನದಲ್ಲಿ ಜನಿಸಿದವನು; (ಆದರೆ ಈಗ) ಧನಲೋಭದ ದೆಸೆಯಿಂದ ದುಷ್ಟರಾದ ಹೆಂಡತಿ-ಮಕ್ಕಳಿಂದ ಹೊರಗೆ ಹಾಕಲ್ಪಟ್ಟಿರುವೆನು.

೨೨. ಹೆಂಡತಿಯರನ್ನೂ ಐಶ್ವರ್ಯವನ್ನೂ ಕಳೆದುಕೊಂಡಿರುವೆನು! ನನ್ನ ಧನವು ಪುತ್ರರಿಂದ ಅಪಹರಿಸಲ್ಪಟ್ಟಿತು! ಆಪ್ತರಾದ ಬಂಧುಗಳಿಂದ ಹೊರದೂಡಲ್ಪಟ್ಟು ದುಃಖಿತನಾಗಿ ವನವನ್ನು ಸೇರಿರುವೆನು !

೨೩. ಅಂಥ ನಾನು ಇಲ್ಲಿ ನೆಲಸಿ ಪತ್ನೀಪುತ್ರರ ಮತ್ತು ಸ್ವಜನರ ಶುಭಾಶುಭರೂಪವಾದ ವಾರ್ತೆಯನ್ನು ತಿಳಿಯದೆ ಇರುವೆನು.

೨೪-೨೫. ಈಗ ಅವರ ಮನೆಯಲ್ಲಿ ಕ್ಷೇಮವು ನೆಲಸಿರುವುದೋ ಅಥವಾ ಅಕ್ಷೇಮವ್ರೋ? ನನ್ನ ಮಕ್ಕಳು ಹೇಗಿರುವರೋ? ಒಳ್ಳೆಯ ನಡತೆಯುಳ್ಳವರಾಗಿರುವರೊ ಅಥವಾ ಕೆಟ್ಟ ನಡತೆಯುಳ್ಳವರಾಗಿರುವರೋ?

೨೬-೨೭. ರಾಜನು ಹೇಳಿದನು: ಧನಲುಬ್ಧರಾದ ಯಾವ ಪತ್ನೀ ಪುತ್ರರಿಂದ ನೀನು ಹೊರತಳ್ಳಲ್ಪಟ್ಟಿರುವೆಯೋ ಅವರಲ್ಲಿಯೇ ನಿನ್ನ ಮನಸ್ಸು ಸ್ನೇಹದಿಂದ ಬಂಧಿಸಲ್ಪಟ್ಟಿದೆಯಲ್ಲ, ಅದೇಕೆ?

೨೮-೨೯. ವೈಶ್ಯನು ಹೇಳಿದನು: ನೀನು ನನ್ನ ವಿಷಯದಲ್ಲಿ ಆಡಿದ ಈ ಮಾತು ಸರಿಯಾಗಿದೆ. ನಾನೇನು ಮಾಡಲಿ! ನನ್ನ ಮನಸ್ಸು (ಅವರ ವಿಷಯದಲ್ಲಿ) ನಿಷ್ಠುರತೆಯನ್ನು ಹೊಂದುವುದಿಲ್ಲವಲ್ಲ ?

೩೦. ಧನಲೋಭದಿಂದ ಪಿತೃ-ಪತಿ-ಸ್ವಜನರಲ್ಲಿರಬೇಕಾದ ಸ್ನೇಹವನ್ನು ತ್ಯಜಿಸಿ ಯಾರು ನನ್ನನ್ನು ಹೊರದೂಡಿದರೋ ಅವರಲ್ಲಿಯೇ ಮನಸ್ಸು ಅನುರಾಗವುಳ್ಳದ್ದಾಗಿದೆ.

ಕಿಮೇತನ್ನಾಭಿಜಾನಾಮಿ ಜಾನನ್ನಪಿ ಮಹಾಮತೇ ।
ಯತ್ಪ್ರೇಮಪ್ರವಣಂ ಚಿತ್ತಂ ವಿಗುಣೇಷ್ವಪಿ ಬಂಧುಷು ॥ ೩೨ ॥

ತೇಷಾಂ ಕೃತೇ ಮೇ ನಿಶ್ವಾಸೋ ದೌರ್ಮನಸ್ಯಂ ಚ ಜಾಯತೇ ॥ ೩೩ ॥

ಕರೋಮಿ ಕಿಂ ಯನ್ನ ಮನಸ್ತೇಷ್ವಪ್ರೀತಿಷು ನಿಷ್ಠುರಮ್ ॥ ೩೪ ॥

ಮಾರ್ಕಂಡೇಯ ಉವಾಚ ॥ ೩೫ ॥

ತತಸ್ತೌ ಸಹಿತೌ ವಿಪ್ರ ತಂ ಮುನಿಂ ಸಮುಪಸ್ಥಿತೌ ॥ ೩೬ ॥

ಸಮಾಧಿರ್ನಾಮ ವೈಶ್ಯೋಽಸೌ ಸ ಚ ಪಾರ್ಥಿವಸತ್ತಮಃ ॥ ೩೭ ॥

ಕೃತ್ವಾ ತು ತೌ ಯಥಾನ್ಯಾಯಂ ಯಥಾರ್ಹಂ ತೇನ ಸಂವಿದಮ್ ।
ಉಪವಿಷ್ಟೌ ಕಥಾಃ ಕಾಶ್ಚಿಚ್ಚಕ್ರತುರ್ವೈಶ್ಯಪಾರ್ಥಿವೌ ॥ ೩೮ ॥

ರಾಜೋವಾಚ ॥ ೩೯ ॥

ಭಗವಂಸ್ತ್ವಾಮಹಂ ಪ್ರಷ್ಟುಮಿಚ್ಛಾಮ್ಯೇಕಂ ವದಸ್ವ ತತ್ ॥ ೪೦ ॥

ದುಃಖಾಯ ಯನ್ಮೇ ಮನಸಃ ಸ್ವಚಿತ್ತಾಯತ್ತತಾಂ ವಿನಾ ॥ ೪೧ ॥

ಮಮತ್ವಂ ಗತರಾಜ್ಯಸ್ಯ ರಾಜ್ಯಾಂಗೇಷ್ವಖಿಲೇಷ್ವಪಿ ।
ಜಾನತೋಽಪಿ ಯಥಾಽಜ್ಞಸ್ಯ ಕಿಮೇತನ್ಮುನಿಸತ್ತಮ ॥ ೪೨ ॥

ಅಯಂ ಚ ನಿಕೃತಃ ಪುತ್ರೈರ್ದಾರೈರ್ಭೃತ್ಯೈಸ್ತಥೋಜ್ಝಿತಃ ।
ಸ್ವಜನೇನ ಚ ಸಂತ್ಯಕ್ತಸ್ತೇಷು ಹಾರ್ದೀ ತಥಾಽಪ್ಯತಿ ॥ ೪೩ ॥

ಏವಮೇಷ ಯಥಾಽಹಂ ಚ ದ್ವಾವಪ್ಯತ್ಯಂತದುಃಖಿತೌ ।
ದೃಷ್ಟದೋಷೋಽಪಿ ವಿಷಯೇ ಮಮತ್ವಾಕೃಷ್ಟಮಾನಸೌ ॥ ೪೪ ॥

೩೨. ಎಲೈ ಮಹಾಮತಿಯೇ, ಗುಣಹೀನರಾಗಿದ್ದರೂ ಕೂಡ ಬಂಧುಗಳಲ್ಲಿ–(ಅವರು ಗುಣಹೀನರೆಂಬುದನ್ನು) ಅರಿತಿದ್ದರೂ–ನನ್ನ ಮನಸ್ಸು ಏಕೆ ಪ್ರೇಮಪೂರ್ಣವಾಗಿರುವುದೂ ಎಂಬ ಇದನ್ನು ನಾನು ತಿಳಿಯುತ್ತಿಲ್ಲ.

೩೩-೩೪. ಅವರಿಗೋಸ್ಕರ ನನಗೆ ನಿಟ್ಟುಸಿರು - ಆತಂಕಗಳು ಉಂಟಾಗುತ್ತಿವೆ. ಏನು ಮಾಡಲಿ? ಪ್ರೀತಿಯಿಲ್ಲದ ಅವರಲ್ಲಿ ನನ್ನ ಮನಸ್ಸು ಏಕೋ ನಿಷ್ಠುರತೆಯನ್ನು ಹೊಂದುತ್ತಿಲ್ಲವಲ್ಲ?

೩೫-೩೭. ಮಾರ್ಕಂಡೇಯನು ಹೇಳಿದನು : ಎಲೈ (ಕ್ರೌಷ್ಟುಕಿ) ಮುನಿಯೇ, ಅನಂತರ ಸಮಾಧಿಯೆಂಬ ಈ ವೈಶ್ಯನೂ ಮತ್ತು ಆ ರಾಜೋತ್ತಮನೂ ಒಟ್ಟಾಗಿ ಆ ಮುನಿಯನ್ನು ಬಳಿಸಾರಿದರು.

೩೮. ಆ ವೈಶ್ಯಪಾರ್ಥಿವರು ಆ ಮುನಿಯೊಡನೆ ತಮ್ಮ ಯೋಗ್ಯತೆಗೆ ಮತ್ತು ಸಂಪ್ರದಾಯಕ್ಕೆ ತಕ್ಕಂತೆ ಸಂಭಾಷಣೆಯನ್ನು ನಡೆಸಿ ಅಲ್ಲಿಯೇ ಕುಳಿತು (ಪ್ರಾಸಂಗಿಕವಾಗಿ) ಕೆಲವು ಮಾತುಗಳನ್ನಾಡಿದರು.

೩೯-೪೧. ರಾಜನು ಹೇಳಿದನು: ಎಲೈ ಭಗವಂತನೆ, ಯಾವುದೊಂದು (ವಿಷಯವು) ನನ್ನ ಮನಸ್ಸಿನಲ್ಲಿ ಸ್ಥೈರ್ಯವನ್ನುಂಟುಮಾಡದೆ ದುಃಖವನ್ನು ಕೊಡುತ್ತಿರುವುದೋ ಅಂತಹ ವಿಷಯವನ್ನು ನಿನ್ನಲ್ಲಿ ಕೇಳಲು ಬಯಸುತ್ತೇನೆ. ಅದನ್ನು (ನೀನು ದಯೆಯಿಂದ) ಹೇಳಬೇಕು.

೪೨. ಎಲೈ ಮುನಿಶ್ರೇಷ್ಠನೆ, (ಪ್ರಪಂಚದ) ಜ್ಞಾನವುಳ್ಳವನಾಗಿದ್ದರೂ ರಾಜ್ಯವನ್ನು ಕಳೆದುಕೊಂಡಿರುವ ನನಗೆ ಎಲ್ಲಾ ರಾಜ್ಯಾಂಗಗಳಲ್ಲಿಯೂ – ಅಜ್ಞಾನಿ ಗಿರುವಂತೆ – ಮಮತ್ವವಿನ್ನೂ ಇದೆಯಲ್ಲ, ಇದೇಕೆ?

೪೩. ಮತ್ತು, ಈತನೂ ಕೂಡ ಪುತ್ರರಿಂದ ಅವಮಾನಗೊಳಿಸಲ್ಪಟ್ಟಿರುವನು. ಹಾಗೆಯೇ ಪತ್ನಿಯಿಂದಲೂ ಸೇವಕರಿಂದಲೂ ನಿರಾಕರಿಸಲ್ಪಟ್ಟಿರುವನು. ಹಾಗಿದ್ದರೂ (ಈಗಲೂ) ಅವರಲ್ಲಿ ವಿಶೇಷ ಪ್ರೀತಿಯುಳ್ಳವನಾಗಿರುವನು.

೪೪. ಹೀಗೆ ಇವನು ಮತ್ತು ಇವನಂತೆಯೇ ನಾನು – ನಾವಿಬ್ಬರೂ ಅತ್ಯಂತ ದುಃಖಿಗಳಾಗಿದ್ದೇವೆ. ವಿಷಯವಸ್ತುಗಳಲ್ಲಿರುವ ದೋಷಗಳನ್ನು ಅರಿತಿದ್ದರೂ 'ನನ್ನದು' ಎಂಬ ಭಾವನೆಯಿಂದ ಆಕರ್ಷಿಸಲ್ಪಟ್ಟ ಮನಸ್ಸುಳ್ಳವರಾಗಿದ್ದೇವೆ!

ತತ್ಕೇನೈತನ್ಮಹಾಭಾಗ ಯನ್ಮೋಹೋ ಜ್ಞಾನಿನೋರಪಿ ।
ಮಮಾಸ್ಯ ಚ ಭವತ್ಯೇಷಾ ವಿವೇಕಾಂಧಸ್ಯ ಮೂಢತಾ ॥ ೪೫ ॥

ಋಷಿರುವಾಚ ॥ ೪೬ ॥

ಜ್ಞಾನಮಸ್ತಿ ಸಮಸ್ತಸ್ಯ ಜಂತೋರ್ವಿಷಯಗೋಚರೇ ।
ವಿಷಯಾಶ್ಚ ಮಹಾಭಾಗ ಯಾಂತಿ ಚೈವಂ ಪೃಥಕ್ ಪೃಥಕ್ ॥ ೪೭ ॥

ದಿವಾಂಧಾಃ ಪ್ರಾಣಿನಃ ಕೇಚಿದ್ರಾತ್ರಾವಂಧಾಸ್ತಥಾಽಪರೇ ।
ಕೇಚಿದ್ದಿವಾ ತಥಾ ರಾತ್ರೌ ಪ್ರಾಣಿನಸ್ತುಲ್ಯದೃಷ್ಟಯಃ ॥ ೪೮ ॥

ಜ್ಞಾನಿನೋ ಮನುಜಾಃ ಸತ್ಯಂ ಕಿಂತು ತೇ ನ ಹಿ ಕೇವಲಮ್ ।
ಯತೋ ಹಿ ಜ್ಞಾನಿನಃ ಸರ್ವೇ ಪಶುಪಕ್ಷಿಮೃಗಾದಯಃ ॥ ೪೯ ॥

ಜ್ಞಾನಂ ಚ ತನ್ಮನುಷ್ಯಾಣಾಂ ಯತ್ತೇಷಾಂ ಮೃಗಪಕ್ಷಿಣಾಮ್ ।
ಮನುಷ್ಯಾಣಾಂ ಚ ಯತ್ತೇಷಾಂ ತುಲ್ಯಮನ್ಯತ್ತಥೋಭಯೋಃ ॥ ೫೦ ॥

ಜ್ಞಾನೇಽಪಿ ಸತಿ ಪಶ್ಯೈತಾನ್ ಪತಗಾಂಛಾವಚಂಚುಷು ।
ಕಣಮೋಕ್ಷಾದೃತಾನ್ ಮೋಹಾತ್ ಪೀಡ್ಯಮಾನಾನಪಿ ಕ್ಷುಧಾ ॥ ೫೧ ॥

ಮಾನುಷಾ ಮನುಜವ್ಯಾಘ್ರ ಸಾಭಿಲಾಷಾಃ ಸುತಾನ್ ಪ್ರತಿ ।
ಲೋಭಾತ್ ಪ್ರತ್ಯುಪಕಾರಾಯ ನನ್ವೇತಾನ್ ಕಿಂ ನ ಪಶ್ಯಸಿ ॥ ೫೨ ॥

ತಥಾಽಪಿ ಮಮತಾಽಽವರ್ತೇ ಮೋಹಗರ್ತೇ ನಿಪಾತಿತಾಃ ।
ಮಹಾಮಾಯಾಪ್ರಭಾವೇಣ ಸಂಸಾರಸ್ಥಿತಿಕಾರಿಣಾ ॥ ೫೩ ॥

೪೫. ಎಲೈ ಮಹಾಭಾಗನೆ, ಜ್ಞಾನಿಗಳಾದ (ನಮ್ಮಿಬ್ಬರಿಗೂ) ಯಾವ ಮೋಹವುಂಟಾಗಿದೆಯೋ ಆ ಇದು ಯಾವುದರಿಂದಾಗಿದೆ? ವಿವೇಕಶೂನ್ಯನಾದ ನನಗೂ ಮತ್ತು ಇವನಿಗೂ ಮೂಢತೆಯುಂಟಾಗಿದೆಯಲ್ಲ, (ಇದೇಕೆ)?

೪೬-೪೭. ಋಷಿಯು ಹೇಳಿದನು: ಎಲೈ ಮಹಾಭಾಗನೆ, ಎಲ್ಲ ಜಂತುಗಳಿಗೂ ಇಂದ್ರಿಯಗೋಚರವಾದ ವಿಷಯಗಳ ಬಗ್ಗೆ ಜ್ಞಾನವಿರುತ್ತದೆ. ಹೀಗೆಯೇ ವಿಷಯಗಳಾದರೋ ನಾನಾಬಗೆಯಾಗಿ ಗೋಚರಿಸುತ್ತವೆ.

೪೮. ಕೆಲವು ಪ್ರಾಣಗಳು ಹಗಲಿನಲ್ಲಿ ಕುರುಡಾಗಿರುತ್ತವೆ; ಮತ್ತೆ ಕೆಲವು ರಾತ್ರಿಯಲ್ಲಿ ಕುರುಡಾಗಿರುತ್ತವೆ. ಇನ್ನು ಕೆಲವು ಹಗಲಿನಲ್ಲಿಯೂ ರಾತ್ರಿಯಲ್ಲಿಯೂ ಸಮಾನವಾದ ದೃಷ್ಟಿಯನ್ನು ಹೊಂದಿರುತ್ತವೆ.

೪೯. ಮನುಷ್ಯರು ಜ್ಞಾನಸಂಪನ್ನರೆಂಬುದೇನೋ ನಿಜವೇ. ಆದರೆ ಅವರು ಮಾತ್ರ (ಜ್ಞಾನಸಂಪನ್ನರು, ಇತರ ಜೀವಜಾತವಲ್ಲ) ಎನ್ನಲಾಗುವುದಿಲ್ಲ; ಏಕೆಂದರೆ ಪಶು, ಪಕ್ಷಿ, ಮೃಗ-ಮೊದಲಾದುವೆಲ್ಲ ಜ್ಞಾನಸಂಪನ್ನವಾಗಿವೆ.

೫೦. ಮೃಗಪಕ್ಷಿಗಳಿಗೆ ಯಾವ ಜ್ಞಾನವಿರುವುದೋ ಅದೇ ಜ್ಞಾನವು ಮನುಷ್ಯರಲ್ಲೂ ಇರುತ್ತದೆ; ಮತ್ತು ಮನುಷ್ಯರಿಗೆ ಯಾವ ಜ್ಞಾನವಿರುತ್ತದೆಯೋ ಅದು ಆ ಮೃಗಪಕ್ಷಿಗಳಿಗೂ ಇರುತ್ತದೆ. ಹಾಗೆಯೇ (ಹಸಿವು, ನಿದ್ರೆ ಮೊದಲಾದ) ಇತರ (ಗುಣಗಳೂ) ಇವರಿಗೆ ಸಮಾನ.

೫೧. ತಾವು ಹಸಿವಿನಿಂದ ಬಾಧಿಸಲ್ಪಡುತ್ತಿದ್ದರೂ (ತಮ್ಮ ಹಸಿವನ್ನು ಇಂಗಿಸಿಕೊಳ್ಳಲು ಬೇಕಾದ) ಜ್ಞಾನವಿದ್ದರೂ (ತಾವು ತಂದಿರುವ) ಕಾಳುಗಳನ್ನು ಆದರದಿಂದ (ತಮ್ಮ) ಮರಿಗಳ ಕೊಕ್ಕುಗಳಲ್ಲಿ ಹಾಕುತ್ತಿರುವ ಈ ಹಕ್ಕಿಗಳನ್ನು ನೋಡು!

೫೨. ಎಲೈ ಮನುಜಶ್ರೇಷ್ಠ, ಪ್ರತ್ಯುಪಕಾರವನ್ನು ಮಾಡುವರೆಂಬ ಲೋಭದಿಂದ ಮಕ್ಕಳಲ್ಲಿ ಮಾನವರು ಅಭಿಲಾಷೆಯುಳ್ಳವರಾಗುತ್ತಾರೆ. (ಮರಿಗಳಲ್ಲಿ ಪ್ರೀತಿಯಿಡುತ್ತಿರುವ) ಈ ಹಕ್ಕಿಗಳನ್ನು ನೀನು ನೋಡುತ್ತಿಲ್ಲವೆ?

೫೩. ಹಾಗಿದ್ದರೂ ಕೂಡ ಸಂಸಾರದ ಸ್ಥಿತಿಯನ್ನುಂಟುಮಾಡುತ್ತಿರುವ ಮಹಾಮಾಯೆಯ ಪ್ರಭಾವದಿಂದ ಮಮತೆಯೆಂಬ ಸುಳಿಯಲ್ಲಿ ಮೋಹವೆಂಬ ಹಳ್ಳದಲ್ಲಿ ಬೀಳಿಸಲ್ಪಟ್ಟಿರುವರು.

ತನ್ಮಾತ್ರ ವಿಸ್ಮಯಃ ಕಾರ್ಯೋ ಯೋಗನಿದ್ರಾ ಜಗತ್ಪತೇಃ ।
ಮಹಾಮಾಯಾ ಹರೇಶ್ಚೈಷಾ ತಯಾ ಸಮ್ಮೋಹ್ಯತೇ ಜಗತ್ ।। ೫೪ ।।

ಜ್ಞಾನಿನಾಮಪಿ ಚೇತಾಂಸಿ ದೇವೀ ಭಗವತೀ ಹಿ ಸಾ ।
ಬಲಾದಾಕೃಷ್ಯ ಮೋಹಾಯ ಮಹಾಮಾಯಾ ಪ್ರಯಚ್ಛತಿ ।। ೫೫ ।।

ತಯಾ ವಿಸೃಜ್ಯತೇ ವಿಶ್ವಂ ಜಗದೇತಚ್ಚರಾಚರಮ್ ।
ಸೈಷಾ ಪ್ರಸನ್ನಾ ವರದಾ ನೃಣಾಂ ಭವತಿ ಮುಕ್ತಯೇ ।। ೫೬ ।।

ಸಾ ವಿದ್ಯಾ ಪರಮಾ ಮುಕ್ತೇರ್ಹೇತುಭೂತಾ ಸನಾತನೀ ।। ೫೭ ।।

ಸಂಸಾರಬಂಧಹೇತುಶ್ಚ ಸೈವ ಸರ್ವೇಶ್ವರೇಶ್ವರೀ ।। ೫೮ ।।

ರಾಜೋವಾಚ ।। ೫೯ ।।

ಭಗವನ್ ಕಾ ಹಿ ಸಾ ದೇವೀ ಮಹಾಮಾಯೇತಿ ಯಾಂ ಭವಾನ್ ।
ಬ್ರವೀತಿ ಕಥಮುತ್ಪನ್ನಾ ಸಾ ಕರ್ಮಾಸ್ಯಾಶ್ಚ ಕಿಂ ದ್ವಿಜ ।। ೬೦ ।।

ಯತ್ಪ್ರಭಾವಾ ಚ ಸಾ ದೇವೀ ಯತ್ಸ್ವರೂಪಾ ಯದುದ್ಭವಾ ।। ೬೧ ।।

ತತ್ಸರ್ವಂ ಶ್ರೋತುಮಿಚ್ಛಾಮಿ ತ್ವತ್ತೋ ಬ್ರಹ್ಮವಿದಾಂ ವರ ।। ೬೨ ।।

ಋಷಿರುವಾಚ ।। ೬೩ ।।

ನಿತ್ಯೈವ ಸಾ ಜಗನ್ಮೂರ್ತಿಸ್ತಯಾ ಸರ್ವಮಿದಂ ತತಮ್ ।। ೬೪ ।।

ತಥಾಽಪಿ ತತ್ಸಮುತ್ಪತ್ತಿರ್ಬಹುಧಾ ಶ್ರೂಯತಾಂ ಮಮ ।। ೬೫ ।।

ದೇವಾನಾಂ ಕಾರ್ಯಸಿದ್ಧ್ಯರ್ಥಮಾವಿರ್ಭವತಿ ಸಾ ಯದಾ ।
ಉತ್ಪನ್ನೇತಿ ತದಾ ಲೋಕೇ ಸಾ ನಿತ್ಯಾಽಪ್ಯಭಿಧೀಯತೇ ।। ೬೬ ।।

೫೪. ಆದುದರಿಂದ ಈ ವಿಷಯದಲ್ಲಿ ವಿಸ್ಮಯಪಡಬೇಕಾದುದಿಲ್ಲ. ಜಗತ್ಪತಿಯ ಯೋಗನಿದ್ರೆಯಿದು, ಶ್ರೀಹರಿಯ ಮಹಾಮಾಯೆಯಿದು; ಇವಳಿಂದ ಜಗತ್ತು ಚೆನ್ನಾಗಿ ಮೋಹಗೊಳಿಸಲ್ಪಟ್ಟಿದೆ.

೫೫. ದೇವಿಯೂ, ಭಗವತಿಯೂ ಆದ ಆ ಮಹಾಮಾಯೆಯು ಜ್ಞಾನಿಗಳ ಮನಸ್ಸನ್ನು ಕೂಡ ಬಲಾತ್ಕಾರದಿಂದ ಸೆಳೆದು ಮೋಹಕ್ಕೆ ಸಿಲುಕುವಂತೆ ಮಾಡುತ್ತಾಳೆ.

೫೬. ಚರಾಚರ ಪ್ರಾಣಿವರ್ಗದಿಂದ ಕೂಡಿದ ಈ ಎಲ್ಲ ಜಗತ್ತು ಅವಳಿಂದ ಸೃಷ್ಟಿಸಲ್ಪಡುತ್ತದೆ. ಇವಳು ಪ್ರಸನ್ನಳಾದರೆ ನರರಿಗೆ ವರಗಳನ್ನೂ, ಮುಕ್ತಿಯನ್ನೂ ಕೊಡುತ್ತಾಳೆ.

೫೭-೫೮. ಮುಕ್ತಿಗೆ ಕಾರಣವಾದ ಮತ್ತು ಸನಾತನವಾದ ಪರಮ ಜ್ಞಾನವೂ ಅವಳೇ; ಆ ಸರ್ವೇಶ್ವರಿಯೇ ಸಂಸಾರಬಂಧನಕ್ಕೂ ಕಾರಣಳು.

೫೯-೬೦. ರಾಜನು ಕೇಳಿದನು: ಭಗವಂತನೆ, ಯಾವಳನ್ನು ನೀನು ಮಹಾಮಾಯೆ ಎಂದು ಕರೆಯುತ್ತಿರುವೆಯೊ ಆ ದೇವಿಯು ಯಾರು? ಅವಳು ಹೇಗೆ ಜನ್ಮವೆತ್ತಿದಳು? ಅವಳು ಮಾಡಿದ ಕಾರ್ಯಗಳೇನು?

೬೧-೬೨. ಬ್ರಹ್ಮವಿದರಲ್ಲಿ ಶ್ರೇಷ್ಠನಾದ ಮುನಿಯೇ, ಆ ದೇವಿಯು ಎಂತಹ ಪ್ರಭಾವವುಳ್ಳವಳು, ಎಂತಹ ಸ್ವರೂಪವುಳ್ಳವಳು ಆದೆಲ್ಲವನ್ನೂ ನಿನ್ನಿಂದ ಕೇಳಲು ಬಯಸುತ್ತೇನೆ.

೬೩-೬೪. ಋಷಿಯು ಹೇಳಿದನು: ವಿಶ್ವರೂಪಿಣಿಯಾದ ಅವಳು ನಿತ್ಯಳೇ. ಈ ಜಗತ್ತೆಲ್ಲವೂ ಅವಳಿಂದ ವ್ಯಾಪ್ತವಾಗಿದೆ. ಹಾಗೆ ನಿತ್ಯಳಾಗಿದ್ದರೂ ಅವಳ ಬಹುವಿಧವಾದ ಉತ್ಪತ್ತಿಯನ್ನು ಹೇಳುವ ನನ್ನ (ವಚನವನ್ನು) ಆಲಿಸು.

೬೫. ಅವಳು ಯಾವಾಗ ದೇವತೆಗಳ ಕಾರ್ಯಸಿದ್ಧಿಗಾಗಿ ಆವಿರ್ಭಾವವನ್ನು ಹೊಂದುತ್ತಾಳೆಯೋ ಆಗ – ಅವಳು (ನಿಜವಾಗಿ ನಿತ್ಯಳಾಗಿದ್ದರೂ) – 'ಹುಟ್ಟಿದಳು' ಎಂದು ಲೋಕದಲ್ಲಿ ವ್ಯವಹರಿಸಲ್ಪಡುತ್ತಾಳೆ.

ಯೋಗನಿದ್ರಾಂ ಯದಾ ವಿಷ್ಣುರ್ಜಗತ್ಯೇಕಾರ್ಣವೀಕೃತೇ ।
ಆಸ್ತೀರ್ಯ ಶೇಷಮಭಜತ್ ಕಲ್ಪಾಂತೇ ಭಗವಾನ್ ಪ್ರಭುಃ ॥ ೬೭ ॥

ತದಾ ದ್ವಾವಸುರೌ ಘೋರೌ ವಿಖ್ಯಾತೌ ಮಧುಕೈಟಭೌ ।
ವಿಷ್ಣುಕರ್ಣಮಲೋದ್ಭೂತೌ ಹಂತುಂ ಬ್ರಹ್ಮಾಣಮುದ್ಯತೌ ॥ ೬೮ ॥

ಸ ನಾಭಿಕಮಲೇ ವಿಷ್ಣೋಃ ಸ್ಥಿತೋ ಬ್ರಹ್ಮಾ ಪ್ರಜಾಪತಿಃ ।
ದೃಷ್ಟ್ವಾ ತಾವಸುರೌ ಚೋಗ್ರೌ ಪ್ರಸುಪ್ತಂ ಚ ಜನಾರ್ದನಮ್ ॥ ೬೯ ॥

ತುಷ್ಟಾವ ಯೋಗನಿದ್ರಾಂ ತಾಮೇಕಾಗ್ರಹೃದಯಃ ಸ್ಥಿತಃ ।
ವಿಬೋಧನಾರ್ಥಾಯ ಹರೇರ್ಹರಿನೇತ್ರಕೃತಾಲಯಾಮ್ ॥ ೭೦ ॥

ವಿಶ್ವೇಶ್ವರೀಂ ಜಗದ್ಧಾತ್ರೀಂ ಸ್ಥಿತಿಸಂಹಾರಕಾರಿಣೀಮ್ ।
ನಿದ್ರಾಂ ಭಗವತೀಂ ವಿಷ್ಣೋರತುಲಾಂ ತೇಜಸಃ ಪ್ರಭುಃ ॥ ೭೧ ॥

ಬ್ರಹ್ಮೋವಾಚ ॥ ೭೨ ॥

ತ್ವಂ ಸ್ವಾಹಾ ತ್ವಂ ಸ್ವಧಾ ತ್ವಂ ಹಿ ವಷಟ್ಕಾರಃ ಸ್ವರಾತ್ಮಿಕಾ ।
ಸುಧಾ ತ್ವಮಕ್ಷರೇ ನಿತ್ಯೇ ತ್ರಿಧಾಮಾತ್ರಾತ್ಮಿಕಾ ಸ್ಥಿತಾ ॥ ೭೩ ॥

ಅರ್ಧಮಾತ್ರಾ ಸ್ಥಿತಾ ನಿತ್ಯಾ ಯಾಽನುಚ್ಚಾರ್ಯಾ ವಿಶೇಷತಃ ।
ತ್ವಮೇವ ಸಂಧ್ಯಾ ಸಾವಿತ್ರೀ ತ್ವಂ ದೇವಿ ಜನನೀ ಪರಾ ॥ ೭೪ ॥

ತ್ವಯೈತದ್ಧಾರ್ಯತೇ ವಿಶ್ವಂ ತ್ವಯೈತತ್ ಸೃಜ್ಯತೇ ಜಗತ್ ।
ತ್ವಯೈತತ್ ಪಾಲ್ಯತೇ ದೇವಿ ತ್ವಮತ್ಸ್ಯಂತೇ ಚ ಸರ್ವದಾ ॥ ೭೫ ॥

ವಿಸೃಷ್ಟೌ ಸೃಷ್ಟಿರೂಪಾ ತ್ವಂ ಸ್ಥಿತಿರೂಪಾ ಚ ಪಾಲನೇ ।
ತಥಾ ಸಂಹೃತಿರೂಪಾಽಂತೇ ಜಗತೋಽಸ್ಯ ಜಗನ್ಮಯೇ ॥ ೭೬ ॥

೬೭. ಕಲ್ಪದ ಕೊನೆಯಲ್ಲಿ ಜಗತ್ತೆಲ್ಲವೂ ಜಲಮಯವಾದಾಗ ಭಗವಂತನೂ ವಿಶ್ವದೊಡೆಯನೂ ಆದ ಮಹಾವಿಷ್ಣುವು (ತನ್ನ ಹಾಸಿಗೆಯಾದ) ಆದಿಶೇಷನನ್ನು ಹಾಸಿಕೊಂಡೇ ಯೋಗನಿದ್ರೆಯನ್ನು ಹೊಂದಿದನು.

೬೮. ಆಗ ವಿಷ್ಣುವಿನ ಕಿವಿಗಳ ಮಲದಿಂದ ಜನಿಸಿ ಮಧು, ಕೈಟಭ ಎಂದು ಪ್ರಸಿದ್ಧರಾದ ಇಬ್ಬರು ಘೋರ ರಾಕ್ಷಸರು ಬ್ರಹ್ಮನನ್ನು ಕೊಲ್ಲಲು ಉದ್ಯುಕ್ತರಾದರು.

೬೯-೭೦. ವಿಷ್ಣುವಿನ ನಾಭಿಕಮಲದಲ್ಲಿದ್ದ ಬ್ರಹ್ಮ-ಪ್ರಜಾಪತಿಯು ಉಗ್ರರಾದ ಆ ಅಸುರರಿಬ್ಬರನ್ನೂ ಮತ್ತು ನಿದ್ರಿಸುತ್ತಿದ್ದ ಜನಾರ್ದನನನ್ನೂ ನೋಡಿ, ಶ್ರೀಹರಿಯನ್ನು ಎಚ್ಚರಗೊಳಿಸುವುದಕ್ಕಾಗಿ ಆತನ ಕಣ್ಣುಗಳಲ್ಲಿ ಮನೆಮಾಡಿಕೊಂಡಿದ್ದ ಯೋಗನಿದ್ರೆಯನ್ನು ಏಕಾಗ್ರಮನಸ್ಸಿನಿಂದ ಸ್ತುತಿಸಿದನು.

೭೧. ಪ್ರಜಾಪತಿಯು ವಿಶ್ವೇಶ್ವರಿಯೂ, ಜಗದ್ಧಾರಕಳೂ (ಜಗತ್ತಿನ), ಸ್ಥಿತಿಸಂಹಾರಗಳಿಗೆ ಕಾರಣಳೂ, ಅನುಪಮಳೂ, ತೇಜೋರೂಪನಾದ ವಿಷ್ಣುವಿನ ಭಗವತಿಯೂ ಆದ (ಯೋಗ) ನಿದ್ರೆಯನ್ನು (ಸ್ತುತಿಸಿದನು).

೭೨-೭೩. ಬ್ರಹ್ಮನು ಹೇಳಿದನು: ನೀನು ಸ್ವಾಹಾ, ನೀನು ಸ್ವಧಾ, ನೀನೇ ವಷಟ್ಕಾರ, ಸ್ವರ್ಗಲೋಕರೂಪಳೂ ನೀನೇ. ನೀನೇ ಅಮೃತ. ನಾಶರಹಿತಳೇ, ನಿತ್ಯಸ್ವರೂಪಳೇ, ನೀನು ಮೂರು ಬಗೆಯ ಮಾತ್ರೆಗಳ ಸ್ವರೂಪಳಾಗಿದ್ದೀಯೆ.

೭೪. ನೀನು ಅರ್ಧಮಾತ್ರಾರೂಪದಲ್ಲಿರುವವಳು. (ನೀನು) ನಿತ್ಯಳು. ವಿಶೇಷವಾಗಿ ಉಚ್ಚರಿಸಲು ಆಗದವಳು. ಹೇ ದೇವಿ, ನೀನೇ ಸಂಧ್ಯಾಕಾಲವು, ಸಾವಿತ್ರೀಮಂತ್ರವು ಮತ್ತು ಸರ್ವೋತ್ತಮಳಾದ ಮಾತೆಯು.

೭೫. ಹೇ ದೇವಿಯೆ, ಈ ಜಗತ್ತೇ ನಿನ್ನಿಂದ ಸೃಷ್ಟಿಸಲ್ಪಟ್ಟಿದೆ, ನಿನ್ನಿಂದ ಧರಿಸಲ್ಪಟ್ಟಿದೆ, ನಿನ್ನಿಂದಲೇ ಪಾಲಿಸಲ್ಪಟ್ಟಿದೆ; ಮತ್ತು ಯಾವಾಗಲೂ ಪ್ರಲಯಕಾಲದಲ್ಲಿ ನೀನೇ ಇದನ್ನು ಸಂಹರಿಸುತ್ತೀಯೆ.

೭೬. ಹೇ ವಿಶ್ವರೂಪಿಣಿಯೇ, ಸೃಷ್ಟಿಸಮಯದಲ್ಲಿ ನೀನು ಈ ಜಗತ್ತಿನ ಸೃಷ್ಟಿಶಕ್ತಿರೂಪಳೂ, ಪಾಲನಾಸಮಯದಲ್ಲಿ ಸ್ಥಿತಿಶಕ್ತಿರೂಪಳೂ, ಹಾಗೆಯೇ ಅಂತಕಾಲದಲ್ಲಿ ಸಂಹಾರಶಕ್ತಿಸ್ವರೂಪಳೂ (ಆಗಿರುತ್ತೀಯೆ).

ಮಹಾವಿದ್ಯಾ ಮಹಾಮಾಯಾ ಮಹಾಮೇಧಾ ಮಹಾಸ್ಮೃತಿಃ ।
ಮಹಾಮೋಹಾ ಚ ಭವತೀ ಮಹಾದೇವೀಮಹೇಶ್ವರೀ ॥ ೭೭ ॥

ಪ್ರಕೃತಿಸ್ತ್ವಂ ಚ ಸರ್ವಸ್ಯ ಗುಣತ್ರಯವಿಭಾವಿನೀ ।
ಕಾಲರಾತ್ರಿರ್ಮಹಾರಾತ್ರಿರ್ಮೋಹರಾತ್ರಿಶ್ಚ ದಾರುಣಾ ॥ ೭೮ ॥

ತ್ವಂ ಶ್ರೀಸ್ತ್ವಮೀಶ್ವರೀ ತ್ವಂ ಹ್ರೀಸ್ತ್ವಂ ಬುದ್ಧಿರ್ಬೋಧಲಕ್ಷಣಾ ।
ಲಜ್ಜಾ ಪುಷ್ಟಿಸ್ತಥಾ ತುಷ್ಟಿಸ್ತ್ವಂ ಶಾಂತಿಃ ಕ್ಷಾಂತಿರೇವ ಚ ॥ ೭೯ ॥

ಖಡ್ಗಿನೀ ಶೂಲಿನೀ ಘೋರಾ ಗದಿನೀ ಚಕ್ರಿಣೀ ತಥಾ ।
ಶಂಖಿನೀ ಚಾಪಿನೀ ಬಾಣಭುಶುಂಡೀಪರಿಘಾಯುಧಾ ॥ ೮೦ ॥

ಸೌಮ್ಯಾ ಸೌಮ್ಯತರಾಽಶೇಷಸೌಮ್ಯೇಭ್ಯಸ್ತ್ವತಿಸುಂದರೀ ।
ಪರಾಪರಾಣಾಂ ಪರಮಾ ತ್ವಮೇವ ಪರಮೇಶ್ವರೀ ॥ ೮೧ ॥

ಯಚ್ಚ ಕಿಂಚಿತ್ ಕ್ವಚಿದ್ವಸ್ತು ಸದಸದ್ವಾಽಖಿಲಾತ್ಮಿಕೇ ।
ತಸ್ಯ ಸರ್ವಸ್ಯ ಯಾ ಶಕ್ತಿಃ ಸಾ ತ್ವಂ ಕಿಂ ಸ್ತೂಯಸೇ ಮಯಾ ॥ ೮೨ ॥

ಯಯಾ ತ್ವಯಾ ಜಗತ್ಸ್ರಷ್ಟಾ ಜಗತ್ಪಾತ್ಯತ್ತಿ ಯೋ ಜಗತ್ ।
ಸೋಽಪಿ ನಿದ್ರಾವಶಂ ನೀತಃ ಕಸ್ತ್ವಾಂ ಸ್ತೋತುಮಿಹೇಶ್ವರಃ ॥ ೮೩ ॥

ವಿಷ್ಣುಃ ಶರೀರಗ್ರಹಣಮಹಮೀಶಾನ ಏವ ಚ ।
ಕಾರಿತಾಸ್ತೇ ಯತೋಽತಸ್ತ್ವಾಂ ಕಃ ಸ್ತೋತುಂ ಶಕ್ತಿಮಾನ್
ಭವೇತ್ ॥ ೮೪ ॥

ಸಾ ತ್ವಮಿತ್ಥಂ ಪ್ರಭಾವೈಃ ಸ್ವೈರುದಾರೈರ್ದೇವಿ ಸಂಸ್ತುತಾ ।
ಮೋಹಯೈತೌ ದುರಾಧರ್ಷಾವಸುರೌ ಮಧುಕೈಟಭೌ ॥ ೮೫ ॥

೭೭. ನೀನು ಮಹಾವಿದ್ಯೆ, ಮಹಾಮಾಯೆ, ಮಹಾಮೇಧಾಶಕ್ತಿ, ಮಹಾಸ್ಮೃತಿ, ಮಹಾಮೋಹ, ಮಹಾದೇವಿ ಮತ್ತು ಮಹೇಶ್ವರಿ.

೭೮. ನೀನು ಸಮಸ್ತವಸ್ತುಗಳ ಮೂಲಕಾರಣಳು, ತ್ರಿಗುಣಗಳನ್ನು ಪ್ರಕಟಗೊಳಿಸುವವಳು; ಕಾಲರಾತ್ರಿಯೂ, ಮಹಾರಾತ್ರಿಯೂ ಮತ್ತು ದಾರುಣವಾದ ಮೋಹರಾತ್ರಿಯೂ ನೀನೇ.

೭೯. ನೀನೇ ಶ್ರೀ, ನೀನೇ ಈಶ್ವರೀ, ನೀನೇ ಹ್ರೀ, ನೀನೇ ನಿಶ್ಚಯಾತ್ಮಿಕವಾದ ಬುದ್ಧಿ, ನೀನೇ ಲಜ್ಜೆ, ಪುಷ್ಟಿ ಮತ್ತು ತುಷ್ಟಿ ; ನೀನೇ ಶಾಂತಿ ಮತ್ತು ಕ್ಷಾಂತಿ.

೮೦. (ದುಷ್ಟರ ನಿಗ್ರಹಕ್ಕಾಗಿ) ಖಡ್ಗ, ಶೂಲ, ಗದೆ, ಚಕ್ರ, ಶಂಖ, ಧನುಸ್ಸು, ಬಾಣಗಳು, ಭುಶುಂಡಿ, ಪರಿಘ ಮುಂತಾದ ಆಯುಧಗಳನ್ನು ಧರಿಸಿ ನೀನು ಘೋರಸ್ವರೂಪಳಾಗಿದ್ದೀಯೆ.

೮೧. ನೀನು ಸೌಮ್ಯಳಾಗಿರುವೆ, ಪ್ರಪಂಚದಲ್ಲಿರುವ ಸಮಸ್ತವಸ್ತುಗಳಿಗಿಂತ ಸೌಮ್ಯತರಳೂ ಅತಿಸುಂದರಿಯೂ ಆಗಿರುವೆ; ಪರಾಪರಗಳಲ್ಲೆಲ್ಲ ಪರಮಶ್ರೇಷ್ಠಳಾಗಿರುವ ಪರಮೇಶ್ವರಿಯೂ ನೀನೇ.

೮೨. ಹೇ ಅಖಿಲಾತ್ಮಳೆ, ಯಾವುದಾದರೂ ಒಂದು ಚೇತನವಾದ ಅಥವಾ ಜಡವಾದ ವಸ್ತುವು ಎಲ್ಲಿಯಾದರೂ ಇರಲಿ, ಅದೆಲ್ಲದರ ಶಕ್ತಿಯೂ ನೀನೇ ಆಗಿರುವೆ; ನಾನು ನಿನ್ನನ್ನು ಹೇಗೆ ಸ್ತುತಿಸಲಿ?

೮೩. ಯಾವನು ಈ ಪ್ರಪಂಚವನ್ನು ಸೃಷ್ಟಿಸುವನೊ, ಕಾಪಾಡುವನೊ, ಕೊನೆಗೆ ತನ್ನಲ್ಲಿಯೇ ಅಡಗಿಸಿಕೊಳ್ಳುವನೊ, ಅಂತಹವನು ಕೂಡ ನಿನ್ನಿಂದ ನಿದ್ರಾವಶನಾಗಿರುವನು; ಇಲ್ಲಿ ನಿನ್ನನ್ನು ಸ್ತುತಿಸಲು ಯಾವನು ಸಮರ್ಥನಾದಾನು?

೮೪. ಬ್ರಹ್ಮನಾದ ನನಗೂ, ವಿಷ್ಣುವಿಗೂ ಮತ್ತು ರುದ್ರನಿಗೂ ಶರೀರವನ್ನು ಧರಿಸುವ ಹಾಗೆ ನೀನೇ ಮಾಡಿಸಿರುವೆ; ಆದುದರಿಂದ ನಿನ್ನನ್ನು ಸ್ತುತಿಸಲು ಯಾವನು ಶಕ್ತನಾದಾನು?

೮೫. ಹೇ ದೇವಿ, ಈ ರೀತಿ ನಿನ್ನ ಉದಾರವಾದ ಪ್ರಭಾವದ (ಅಲೌಕಿಕವಾದ ಮಹಿಮೆಯ) ದ್ವಾರಾ ಸ್ತುತಿಸಲ್ಪಟ್ಟ ನೀನು ದುರ್ಜಯರಾದ ಮಧು ಕೈಟಭರೆಂಬ ಅಸುರರನ್ನು ಮೋಹಗೊಳಿಸು.

ಪ್ರಬೋಧಂ ಚ ಜಗತ್ಸ್ವಾಮೀ ನೀಯತಾಮಚ್ಯುತೋ ಲಘು ॥ ೮೬ ॥

ಬೋಧಶ್ಚ ಕ್ರಿಯತಾಮಸ್ಯ ಹಂತುಮೇತೌ ಮಹಾಸುರೌ ॥ ೮೭ ॥

ಋಷಿರುವಾಚ ॥ ೮೮ ॥

ಏವಂ ಸ್ತುತಾ ತದಾ ದೇವೀ ತಾಮಸೀ ತತ್ರ ವೇಧಸಾ ।
ವಿಷ್ಣೋಃ ಪ್ರಬೋಧನಾರ್ಥಾಯ ನಿಹಂತುಂ ಮಧುಕೈಟಭೌ ॥ ೮೯ ॥

ನೇತ್ರಾಸ್ಯನಾಸಿಕಾಬಾಹುಹೃದಯೇಭ್ಯಸ್ತಥೋರಸಃ ।
ನಿರ್ಗಮ್ಯ ದರ್ಶನೇ ತಸ್ಥೌ ಬ್ರಹ್ಮಣೋಽವ್ಯಕ್ತಜನ್ಮನಃ ॥ ೯೦ ॥

ಉತ್ತಸ್ಥೌ ಚ ಜಗನ್ನಾಥಸ್ತಯಾ ಮುಕ್ತೋ ಜನಾರ್ದನಃ ।
ಏಕಾರ್ಣವೇಽಹಿಶಯನಾತ್ ತತಃ ಸ ದದೃಶೇ ಚ ತೌ ॥ ೯೧ ॥

ಮಧುಕೈಟಭೌ ದುರಾತ್ಮಾನಾವತಿವೀರ್ಯಪರಾಕ್ರಮೌ ।
ಕ್ರೋಧರಕ್ತೇಕ್ಷಣಾವತ್ತುಂ ಬ್ರಹ್ಮಾಣಂ ಜನಿತೋದ್ಯಮೌ ॥ ೯೨ ॥

ಸಮುತ್ಥಾಯ ತತಸ್ತಾಭ್ಯಾಂ ಯುಯುಧೇ ಭಗವಾನ್ ಹರಿಃ ।
ಪಂಚವರ್ಷಸಹಸ್ರಾಣಿ ಬಾಹುಪ್ರಹರಣೋ ವಿಭುಃ ॥ ೯೩ ॥

ತಾವಪ್ಯತಿಬಲೋನ್ಮತ್ತೌ ಮಹಾಮಾಯಾವಿಮೋಹಿತೌ ॥ ೯೪ ॥

ಉಕ್ತವಂತೌ ವರೋಽಸ್ಮತ್ತೋ ವ್ರಿಯತಾಮಿತಿ ಕೇಶವಮ್ ॥ ೯೫ ॥

ಶ್ರೀಭಗವಾನುವಾಚ ॥ ೯೬ ॥

ಭವೇತಾಮದ್ಯ ಮೇ ತುಷ್ಟೌ ಮಮ ವಧ್ಯಾವುಭಾವಪಿ ॥ ೯೭ ॥

ಕಿಮನ್ಯೇನ ವರೇಣಾತ್ರ ಏತಾವದ್ಧಿ ವೃತಂ ಮಯಾ ॥ ೯೮ ॥

೮೬-೮೭. ಜಗತ್‌ಸ್ವಾಮಿಯಾದ ವಿಷ್ಣುವು ತನ್ನ ಯೋಗನಿದ್ರೆಯಿಂದ ಏಳುವಂತೆ ಮಾಡಿ, ಈ ಮಹಾಸುರರನ್ನು ನಾಶಮಾಡಲು ಅವನಲ್ಲಿ ಪ್ರವೃತ್ತಿಯನ್ನುಂಟುಮಾಡು.

೮೮-೯೦. ಋಷಿಯು ಹೇಳಿದನು: ಹೀಗೆ ಮಧುಕೈಟಭರನ್ನು ಕೊಲ್ಲುವುದಕ್ಕಾಗಿ ವಿಷ್ಣುವು ಎಚ್ಚರಗೊಳಿಸಲ್ಪಡಬೇಕೆಂದು ಬ್ರಹ್ಮನಿಂದ ಪ್ರಾರ್ಥಿತಳಾದ ತಾಮಸೀದೇವಿಯು ಆ (ವಿಷ್ಣುವಿನ) ಕಣ್ಣು, ಬಾಯಿ, ಮೂಗು, ಬಾಹುಗಳು, ಹೃದಯ, ಎದೆ ಎಂಬೀ ಭಾಗಗಳಿಂದ ಹೊರಬಂದು ಅವ್ಯಕ್ತತತ್ತ್ವದಿಂದ ಜನಿಸಿರುವ ಬ್ರಹ್ಮನ ಕಣ್ಣುಗಳಿಗೆ ಕಾಣಿಸಿಕೊಂಡಳು.

೯೧. ಜಗನ್ನಾಥನೂ, ದುಷ್ಟಸಂಹಾರಕನೂ ಆದ (ಆ ಮಹಾವಿಷ್ಣುವು) ನಿದ್ರೆಯಿಂದ ಬಿಡಲ್ಪಟ್ಟವನಾಗಿ ಏಕಸಮುದ್ರದಲ್ಲಿರುವ ಶೇಷಶಯನದಿಂದ ಎದ್ದು (ಮಧುಕೈಟಭರೆಂಬ) ಆ ಇಬ್ಬರು (ರಾಕ್ಷಸರನ್ನು) ನೋಡಿದನು.

೯೨. ದುರಾತ್ಮರೂ, ಅತ್ಯಂತ ವೀರ್ಯ - ಪರಾಕ್ರಮಗಳಿಂದ ಕೂಡಿದವರೂ, ಕೋಪದಿಂದ ಕೆಂಪಾದ ಕಣ್ಣುಳ್ಳವರೂ, ಬ್ರಹ್ಮನನ್ನು ತಿನ್ನಲು ಉದ್ಯುಕ್ತರೂ ಆದ ಮಧುಕೈಟಭರನ್ನು ಮಹಾವಿಷ್ಣುವು (ನೋಡಿದನು).

೯೩. ಭಗವಂತನಾದ ಮತ್ತು ವಿಭುವಾದ ಶ್ರೀಹರಿಯು ಅನಂತರ ಎದ್ದು ಬಂದು ತನ್ನ ಬಾಹುಗಳನ್ನೇ ಆಯುಧದಂತೆ ಉಪಯೋಗಿಸುತ್ತ ಅವರೊಡನೆ ಐದುಸಾವಿರ ವರ್ಷಗಳವರೆಗೆ ಯುದ್ಧಮಾಡಿದನು.

೯೪-೯೫. ಅತಿ ಬಲದಿಂದ ಕೊಬ್ಬಿದ್ದ ಅವರು ಕೂಡ ಮಹಾಮಾಯೆಯಿಂದ ಮೋಹಗೊಳಿಸಲ್ಪಟ್ಟು 'ನಮ್ಮಿಂದ ವರವನ್ನು ಪಡೆದುಕೊ' ಎಂದು ಕೇಶವನಿಗೆ ಹೇಳಿದರು.

೯೬-೯೮. ಭಗವಂತನು ಹೇಳಿದನು: ನನ್ನಲ್ಲಿ ಈಗ ಸಂತುಷ್ಟರಾಗಿರುವ ನೀವಿಬ್ಬರೂ ನನ್ನಿಂದ ವಧಿಸಲ್ಪಡಿರಿ! ನಿಮ್ಮ ವಿಷಯದಲ್ಲಿ ಬೇರೆ ವರದಿಂದಾಗಬೇಕಾದುದೇನು? ಇದಿಷ್ಟೇ ನನಗೆ ಬೇಕಾದ ವರ.

ಋಷಿರುವಾಚ ॥ ೯೯ ॥

ಪಂಚಿತಾಭ್ಯಾಮಿತಿ ತದಾ ಸರ್ವಮಾಪೋಮಯಂ ಜಗತ್ ।
ವಿಲೋಕ್ಯ ತಾಭ್ಯಾಂ ಗದಿತೋ ಭಗವಾನ್ ಕಮಲೇಕ್ಷಣಃ ॥ ೧೦೦ ॥

ಪ್ರೀತೌ ಸ್ವಸ್ತವ ಯುದ್ಧೇನ ಶ್ಲಾಘ್ಯಸ್ತ್ವಂ ಮೃತ್ಯುರಾವಯೋಃ ।
ಆವಾಂ ಜಹಿ ನ ಯತ್ರೋರ್ವೀ ಸಲಿಲೇನ ಪರಿಪ್ಲುತಾ ॥ ೧೦೧ ॥

ಋಷಿರುವಾಚ ॥ ೧೦೨ ॥

ತಥೇತ್ಯುಕ್ತ್ವಾ ಭಗವತಾ ಶಂಖಚಕ್ರಗದಾಭೃತಾ ।
ಕೃತ್ವಾ ಚಕ್ರೇಣ ವೈ ಛಿನ್ನೇ ಜಘನೇ ಶಿರಸೀ ತಯೋಃ ॥ ೧೦೩ ॥

ಏವಮೇಷಾ ಸಮುತ್ಪನ್ನಾ ಬ್ರಹ್ಮಣಾ ಸಂಸ್ತುತಾ ಸ್ವಯಮ್ ।
ಪ್ರಭಾವಮಸ್ಯಾ ದೇವ್ಯಾಸ್ತು ಭೂಯಃ ಶೃಣು ವದಾಮಿ ತೇ ॥ ೧೦೪ ॥

ಇತಿ ಶ್ರೀಮಾರ್ಕಂಡೇಯಪುರಾಣೇ ಸಾವರ್ಣಿಕೇ ಮನ್ವಂತರೇ ಶ್ರೀದೇವೀಮಾಹಾತ್ಮ್ಯೇ
ಮಧುಕೈಟಭವಧೋ ನಾಮ ಪ್ರಥಮೋಽಧ್ಯಾಯಃ

೯೯-೧೦೧. ಋಷಿಯು ಹೇಳಿದನು: (ಮಹಾಮಾಯೆಯಿಂದ) ವಂಚಿಸಲ್ಪಟ್ಟ ಅವರಿಬ್ಬರೂ, ಜಗತ್ತೆಲ್ಲವೂ ನೀರಿನಿಂದ ಆವೃತವಾಗಿರುವುದನ್ನು ನೋಡಿ ಭಗವಂತನಾದ ಪುಂಡರೀಕಾಕ್ಷನಿಗೆ (ಹೀಗೆ ಹೇಳಿದರು): ''ನಿನ್ನ ಯುದ್ಧನಿಪುಣತೆಯಿಂದ ನಾವಿಬ್ಬರೂ ಪ್ರೀತರಾಗಿದ್ದೇವೆ. ನೀನು ನಮ್ಮಿಬ್ಬರಿಗೂ ಶ್ಲಾಘನಾರ್ಹವಾದ ಮೃತ್ಯುವಾಗು. ಎಲ್ಲಿ ಪೃಥಿವಿಯು ನೀರಿನಿಂದ ಆವೃತವಾಗಿಲ್ಲವೋ ಅಲ್ಲಿ ನಮ್ಮಿಬ್ಬರನ್ನೂ ಕೊಲ್ಲು.''

೧೦೨-೧೦೩. ಸುಮೇಧ-ಋಷಿಯು ಹೇಳಿದನು : ಶಂಖಚಕ್ರಗದಾಧಾರಿಯಾದ ಭಗವಂತನು 'ಹಾಗೆಯೇ ಆಗಲಿ' ಎಂದುತ್ತರಕೊಟ್ಟು ಅವರ ಶಿರಸ್ಸುಗಳನ್ನು ತೊಡೆಯಮೇಲಿಟ್ಟುಕೊಂಡು ಚಕ್ರದಿಂದ ಕತ್ತರಿಸಿದನು.

೧೦೪. ಸ್ವಯಂ ಬ್ರಹ್ಮನಿಂದ ಸ್ತುತಿಸಲ್ಪಟ್ಟ ಈ ಮಹಾಮಾಯೆಯು ಹೀಗೆ ಉತ್ಪನ್ನಳಾದಳು. ಈ ದೇವಿಯ ಮಹಿಮೆಯನ್ನು ಪುನಃ ನಿನಗಾಗಿ ವರ್ಣಿಸುತ್ತೇನೆ, ಕೇಳು.

ಹೀಗೆ ಸಾವರ್ಣಿಕಮನ್ವಂತರಕ್ಕೆ ಸೇರಿದ ಮಾರ್ಕಂಡೇಯಪುರಾಣದಲ್ಲಿ ದೇವೀಮಾಹಾತ್ಮ್ಯದಲ್ಲಿ
'ಮಧುಕೈಟಭವಧೆ' ಎಂಬ ಮೊದಲನೆಯ ಅಧ್ಯಾಯವು ಮುಗಿಯಿತು.

# ಅಥ ಮಧ್ಯಮಚರಿತ್ರಮ್

ಮಧ್ಯಮಚರಿತ್ರಸ್ಯ ವಿಷ್ಣುರ್ಋಷಿಃ । ಮಹಾಲಕ್ಷ್ಮೀರ್ದೇವತಾ । ಉಷ್ಣಿಕ್ಛಂದಃ । ಶಾಕಂಭರೀ ಶಕ್ತಿಃ । ದುರ್ಗಾ ಬೀಜಮ್ । ವಾಯುಸ್ತತ್ತ್ವಮ್ । ಯಜುರ್ವೇದಃ ಸ್ವರೂಪಮ್ । ಮಹಾಲಕ್ಷ್ಮೀಪ್ರೀತ್ಯರ್ಥಂ ಮಧ್ಯಮಚರಿತ್ರಜಪೇ ವಿನಿಯೋಗಃ ॥

### ಮಹಾಲಕ್ಷ್ಮೀಧ್ಯಾನಮ್

ಓಮ್ । ಅಕ್ಷಸ್ರಕ್ಪರಶುಂ ಗದೇಷುಕುಲಿಶಂ ಪದ್ಮಂ ಧನುಃ ಕುಂಡಿಕಾಂ, ದಂಡಂ ಶಕ್ತಿಮಸಿಂ ಚ ಚರ್ಮ ಜಲಜಂ ಘಂಟಾಂ ಸುರಾಭಾಜನಮ್ । ಶೂಲಂ ಪಾಶಸುದರ್ಶನೇ ಚ ದಧತೀಂ ಹಸ್ತೈಃ ಪ್ರವಾಲಪ್ರಭಾಂ, ಸೇವೇ ಸೈರಿಭಮರ್ದಿನೀಮಿಹ ಮಹಾಲಕ್ಷ್ಮೀಂ ಸರೋಜಸ್ಥಿತಾಮ್ ॥

## ಮಧ್ಯಮಚರಿತ್ರೆ

### ಮಹಾಲಕ್ಷ್ಮೀಧ್ಯಾನ

ತನ್ನ (ಹದಿನೆಂಟು) ಕೈಗಳಿಂದ ಜಪಮಾಲೆ, ಪರಶು, ಗದೆ, ಬಾಣ, ಸಿಡಿಲು, ಪದ್ಮ, ಧನುಸ್ಸು, ಮಡಕೆ, ದಂಡ, ಶಕ್ತಿ, ಕತ್ತಿ, ಗುರಾಣಿ, ಶಂಖ, ಗಂಟೆ, ಸುರಾಪಾತ್ರೆ, ಶೂಲ, ಪಾಶ, ಸುದರ್ಶನ ಚಕ್ರ – ಇವುಗಳನ್ನು ಧರಿಸಿರುವ, ಹವಳದಂತೆ ದೇಹಕಾಂತಿಯುಳ್ಳ, ಸರೋಜದಲ್ಲಿ ಆಸೀನಳಾಗಿರುವ ಮತ್ತು ಮಹಿಷಾಸುರಮರ್ದಿನಿಯಾದ ಮಹಾಲಕ್ಷ್ಮಿಯನ್ನು ಸೇವಿಸುತ್ತೇನೆ.

# ದ್ವಿತೀಯೋऽಧ್ಯಾಯಃ

## ಮಹಿಷಾಸುರಸೈನ್ಯವಧಃ

ಓಂ ಹ್ರೀಂ ಋಷಿರುವಾಚ ॥ ೧ ॥

ದೇವಾಸುರಮಭೂದ್ಯುದ್ಧಂ ಪೂರ್ಣಮಬ್ದಶತಂ ಪುರಾ ।
ಮಹಿಷೇऽಸುರಾಣಾಮಧಿಪೇ ದೇವಾನಾಂ ಚ ಪುರಂದರೇ ॥ ೨ ॥

ತತ್ರಾಸುರೈರ್ಮಹಾವೀರ್ಯೈರ್ದೇವಸೈನ್ಯಂ ಪರಾಜಿತಮ್ ।
ಜಿತ್ವಾ ಚ ಸಕಲಾನ್ ದೇವಾನಿಂದ್ರೋऽಭೂನ್ಮಹಿಷಾಸುರಃ ॥ ೩ ॥

ತತಃ ಪರಾಜಿತಾ ದೇವಾಃ ಪದ್ಮಯೋನಿಂ ಪ್ರಜಾಪತಿಮ್ ।
ಪುರಸ್ಕೃತ್ಯ ಗತಾಸ್ತತ್ರ ಯತ್ರೇಶಗರುಡಧ್ವಜೌ ॥ ೪ ॥

ಯಥಾವೃತ್ತಂ ತಯೋಸ್ತದ್ವನ್ಮಹಿಷಾಸುರಚೇಷ್ಟಿತಮ್ ।
ತ್ರಿದಶಾಃ ಕಥಯಾಮಾಸುರ್ದೇವಾಭಿಭವವಿಸ್ತರಮ್ ॥ ೫ ॥

ಸೂರ್ಯೇಂದ್ರಾಗ್ನ್ಯನಿಲೇಂದೂನಾಂ ಯಮಸ್ಯ ವರುಣಸ್ಯ ಚ ।
ಅನ್ಯೇಷಾಂ ಚಾಧಿಕಾರಾನ್ ಸ ಸ್ವಯಮೇವಾಧಿತಿಷ್ಠತಿ ॥ ೬ ॥

ಸ್ವರ್ಗಾನ್ನಿರಾಕೃತಾಃ ಸರ್ವೇ ತೇನ ದೇವಗಣಾ ಭುವಿ ।
ವಿಚರಂತಿ ಯಥಾ ಮರ್ತ್ಯಾ ಮಹಿಷೇಣ ದುರಾತ್ಮನಾ ॥ ೭ ॥

ಏತದ್ವಃ ಕಥಿತಂ ಸರ್ವಮಮರಾರಿವಿಚೇಷ್ಟಿತಮ್ ।
ಶರಣಂ ಚ ಪ್ರಪನ್ನಾಃ ಸ್ಮೋ ವಧಸ್ತಸ್ಯ ವಿಚಿಂತ್ಯತಾಮ್ ॥ ೮ ॥

ಇತ್ಥಂ ನಿಶಮ್ಯ ದೇವಾನಾಂ ವಚಾಂಸಿ ಮಧುಸೂದನಃ ।
ಚಕಾರ ಕೋಪಂ ಶಂಭುಶ್ಚ ಭ್ರುಕುಟೀಕುಟಿಲಾನನೌ ॥ ೯ ॥

# ಎರಡನೆಯ ಅಧ್ಯಾಯ

## ಮಹಿಷಾಸುರಸೈನ್ಯವಧೆ

೧-೨. ಋಷಿಯು ಹೇಳಿದನು: ಹಿಂದೆ ದೇವತೆಗಳಿಗೆ ಇಂದ್ರನೂ ಮತ್ತು ಅಸುರರಿಗೆ ಮಹಿಷಾಸುರನೂ ಪ್ರಭುವಾಗಿದ್ದಾಗ ದೇವದಾನವರಲ್ಲಿ ಸಂಪೂರ್ಣ ನೂರು ವರ್ಷಗಳ ಕಾಲ ಯುದ್ಧವು ನಡೆಯಿತು.

೩. ಆ ಯುದ್ಧದಲ್ಲಿ ಮಹಾವೀರ್ಯಸಂಪನ್ನರಾದ ಅಸುರರಿಂದ ದೇವಸೈನ್ಯವು ಸೋಲಿಸಲ್ಪಟ್ಟಿತು. ಎಲ್ಲ ದೇವತೆಗಳನ್ನೂ ಗೆದ್ದು ಮಹಿಷಾಸುರನು ಇಂದ್ರಪಟ್ಟವನ್ನೇರಿದನು.

೪. ಅನಂತರ (ಅಸುರರಿಂದ) ಪರಾಜಿತರಾಗಿದ್ದ ದೇವತೆಗಳು (ವಿಷ್ಣುವಿನ) ನಾಭಿಕಮಲದಲ್ಲಿ ಜನಿಸಿದ್ದ ಪ್ರಜಾಪತಿಯನ್ನು ನಾಯಕನನ್ನಾಗಿ ಮಾಡಿಕೊಂಡು ಈಶ್ವರ ಮತ್ತು ಮಹಾವಿಷ್ಣು – ಇವರಿದ್ದ ಜಾಗಕ್ಕೆ ಹೋದರು.

೫. ದೇವತೆಗಳು ಅವರಿಬ್ಬರ ಮುಂದೆ ಮಹಿಷಾಸುರನ ಕೃತ್ಯವನ್ನೂ, ತಾವು ಸೋತ ಬಗೆಯನ್ನೂ ಹಿಂದೆ ನಡೆದಂತೆಯೇ ವಿಸ್ತಾರವಾಗಿ ತಿಳಿಸಿದರು.

೬. 'ಆ (ಮಹಿಷಾಸುರನು) ಸೂರ್ಯ, ಇಂದ್ರ, ಅಗ್ನಿ, ವಾಯು, ಚಂದ್ರ,. ಯಮ, ವರುಣ – ಇವರ ಮತ್ತು ಇತರರ ಅಧಿಕಾರಗಳನ್ನು (ಕಸಿದುಕೊಂಡು) ತಾನೇ ಅಧಿಪತಿಯಾಗಿರುವನು.'

೭. 'ದುರಾತ್ಮನಾದ ಆ ಮಹಿಷಾಸುರನಿಂದಾಗಿ ಸ್ವರ್ಗಭೋಗಗಳಿಂದ ನಿರಾಕೃತರಾದ ದೇವತೆಗಳ ಗಣಗಳೆಲ್ಲವೂ ಭೂಲೋಕದಲ್ಲಿ ಸಾಮಾನ್ಯ ಮಾನವರಂತೆ ಸಂಚರಿಸುತ್ತಿರುವರು.'

೮.'ದೇವತಾರಿಯಾದ ಮಹಿಷಾಸುರನಿಂದ ಮಾಡಲ್ಪಟ್ಟಿರುವ ಈ ಕೃತ್ಯವೆಲ್ಲವೂ ನಿಮಗೆ ಹೇಳಲ್ಪಟ್ಟಿತು. ನಾವು ನಿಮ್ಮನ್ನು ಶರಣುಹೊಕ್ಕಿದ್ದೇವೆ. ಅವನ ವಧೆಯು (ಉಪಾಯವು) ಚಿಂತಿಸಲ್ಪಡಲಿ.'

೯. ಹೀಗೆ ದೇವತೆಗಳು ಹೇಳಿದ ಮಾತುಗಳನ್ನು ಕೇಳಿ ಮಧುಸೂದನನೂ, ಶಂಭುವೂ ಹುಬ್ಬುಗಂಟಿಕ್ಕಿ ಕೋಪವನ್ನು ತಾಳಿದರು.

ತತೋಽತಿಕೋಪಪೂರ್ಣಸ್ಯ ಚಕ್ರಿಣೋ ವದನಾತ್ತತಃ ।
ನಿಶ್ಚಕ್ರಾಮ ಮಹತ್ತೇಜೋ ಬ್ರಹ್ಮಣಃ ಶಂಕರಸ್ಯ ಚ ॥ ೧೦ ॥

ಅನ್ಯೇಷಾಂ ಚೈವ ದೇವಾನಾಂ ಶಕ್ರಾದೀನಾಂ ಶರೀರತಃ ।
ನಿರ್ಗತಂ ಸುಮಹತ್ತೇಜಸ್ತಚ್ಚೈಕ್ಯಂ ಸಮಗಚ್ಛತ ॥ ೧೧ ॥

ಅತೀವ ತೇಜಸಃ ಕೂಟಂ ಜ್ವಲಂತಮಿವ ಪರ್ವತಮ್ ।
ದದೃಶುಸ್ತೇ ಸುರಾಸ್ತತ್ರ ಜ್ವಾಲಾವ್ಯಾಪ್ತದಿಗಂತರಮ್ ॥ ೧೨ ॥

ಅತುಲಂ ತತ್ರ ತತ್ತೇಜಃ ಸರ್ವದೇವಶರೀರಜಮ್ ।
ಏಕಸ್ಥಂ ತದಭೂನ್ನಾರೀ ವ್ಯಾಪ್ತಲೋಕತ್ರಯಂ ತ್ವಿಷಾ ॥ ೧೩ ॥

ಯದಭೂಚ್ಛಾಂಭವಂ ತೇಜಸ್ತೇನಾಜಾಯತ ತನ್ಮುಖಮ್ ।
ಯಾಮ್ಯೇನ ಚಾಭವನ್ ಕೇಶಾ ಬಾಹವೋ ವಿಷ್ಣುತೇಜಸಾ ॥ ೧೪ ॥

ಸೌಮ್ಯೇನ ಸ್ತನಯೋರ್ಯುಗ್ಮಂ ಮಧ್ಯಂ ಚೈಂದ್ರೇಣ ಚಾಭವತ್ ।
ವಾರುಣೇನ ಚ ಜಂಘೋರೂ ನಿತಂಬಸ್ತೇಜಸಾ ಭುವಃ ॥ ೧೫ ॥

ಬ್ರಹ್ಮಣಸ್ತೇಜಸಾ ಪಾದೌ ತದಂಗುಲ್ಯೋಽರ್ಕತೇಜಸಾ ।
ವಸೂನಾಂ ಚ ಕರಾಂಗುಲ್ಯಃ ಕೌಬೇರೇಣ ಚ ನಾಸಿಕಾ ॥ ೧೬ ॥

ತಸ್ಯಾಸ್ತು ದಂತಾಃ ಸಂಭೂತಾಃ ಪ್ರಾಜಾಪತ್ಯೇನ ತೇಜಸಾ ।
ನಯನತ್ರಿತಯಂ ಜಜ್ಞೇ ತಥಾ ಪಾವಕತೇಜಸಾ ॥ ೧೭ ॥

೧೦. ಅನಂತರ ಅತಿಯಾದ ಕೋಪದಿಂದ ತುಂಬಿರುವ ವಿಷ್ಣುವಿನ ಮುಖದಿಂದ ಮಹತ್ತಾದ ತೇಜಸ್ಸೊಂದು ಹೊರಬಂದಿತು. ಹಾಗೆಯೇ ಬ್ರಹ್ಮನ ಮತ್ತು ಶಂಕರನ (ಮುಖಗಳಿಂದಲೂ ತೇಜಸ್ಸುಗಳು ಹೊರ ಬಂದವು).

೧೧. ಮತ್ತು ಇಂದ್ರನೇ ಮೊದಲಾದ ಇತರ ದೇವತೆಗಳ ಶರೀರ ಗಳಿಂದಲೂ ಮಹತ್ತಾದ ತೇಜಸ್ಸುಗಳು ನಿರ್ಗಮಿಸಿ ಅವೆಲ್ಲವೂ ಐಕ್ಯವನ್ನು ಹೊಂದಿದ್ದುವು.

೧೨. ಆಗ ಜ್ವಾಲೆಗಳ ಶ್ರೇಣಿಯಿಂದ ದಿಗಂತರಗಳನ್ನು ವ್ಯಾಪಿಸಿ, ಜ್ವಲಿಸುತ್ತಿದ್ದ ಪರ್ವತದಂತಿದ್ದ ಅತಿಯಾದ ತೇಜಸ್ಸಿನ ರಾಶಿಯನ್ನು ಅಲ್ಲಿ ಆ ದೇವತೆಗಳು ನೋಡಿದರು.

೧೩. ಎಲ್ಲ ದೇವತೆಗಳ ಶರೀರದಿಂದ ಹುಟ್ಟಿ ಏಕರಾಶಿಯಾಗಿದ್ದ, ಮೂರು ಲೋಕಗಳನ್ನೂ ತನ್ನ ಕಾಂತಿಯಿಂದ ವ್ಯಾಪಿಸಿದ್ದ, ಆ ಅತುಲವಾದ ತೇಜಸ್ಸು ನಾರಿಯ ಆಕಾರವನ್ನು ಹೊಂದಿತು.

೧೪. (ಆ ತೇಜಸ್ಸಿನಲ್ಲಿ) ಯಾವುದು ಶಂಭುವಿನ ತೇಜಸ್ಸಾಗಿತ್ತೋ ಅದು ಆಕೆಯ ಮುಖವಾಯಿತು; ಯಮನ (ತೇಜಸ್ಸಿನಿಂದ) ಕೇಶಗಳೂ ವಿಷ್ಣುವಿನ ತೇಜಸ್ಸಿನಿಂದ ಬಾಹುಗಳೂ ಉಂಟಾದುವು.

೧೫. ಸೋಮದೇವತೆಯ ತೇಜಸ್ಸಿನಿಂದ ಆಕೆಯ ಸ್ತನಗಳೂ, ಇಂದ್ರನ ತೇಜಸ್ಸಿನಿಂದ ನಡುವೂ, ವರುಣನ ತೇಜಸ್ಸಿನಿಂದ ಮೊಣಕಾಲು ತೊಡೆಗಳೂ, ಭೂದೇವಿಯ ತೇಜಸ್ಸಿನಿಂದ ನಿತಂಬಗಳೂ ಉಂಟಾದುವು.

೧೬. ಬ್ರಹ್ಮನ ತೇಜಸ್ಸಿನಿಂದ (ಆಕೆಯ) ಪಾದಗಳೂ, ಸೂರ್ಯನ ತೇಜಸ್ಸಿನಿಂದ ಪಾದದ ಬೆರಳುಗಳೂ, ವಸುಗಳ ತೇಜಸ್ಸಿನಿಂದ ಕೈಬೆರಳುಗಳೂ, ಕುಬೇರನ ತೇಜಸ್ಸಿನಿಂದ ಮೂಗೂ ಉಂಟಾದುವು.

೧೭. ಪ್ರಜಾಪತಿಯ ತೇಜಸ್ಸಿನಿಂದ (ಆಕೆಯ) ದಂತಗಳುಂಟಾದುವು. ಹಾಗೆಯೇ ಅಗ್ನಿಯ ತೇಜಸ್ಸಿನಿಂದ ಮೂರು ಕಣ್ಣುಗಳು ಜನಿಸಿದುವು.

ಭ್ರುವೌಚ ಸಂಧ್ಯಯೋಸ್ತೇಜಃ ಶ್ರವಣಾವನಿಲಸ್ಯ ಚ ।
ಅನ್ಯೇಷಾಂ ಚೈವ ದೇವಾನಾಂ ಸಂಭವಸ್ತೇಜಸಾಂ ಶಿವಾ ॥ ೧೮ ॥

ತತಃ ಸಮಸ್ತದೇವಾನಾಂ ತೇಜೋರಾಶಿಸಮುದ್ಭವಾಮ್ ।
ತಾಂ ವಿಲೋಕ್ಯ ಮುದಂ ಪ್ರಾಪುರಮರಾ ಮಹಿಷಾರ್ದಿತಾಃ ॥ ೧೯ ॥

ತತೋ ದೇವಾ ದದುಸ್ತಸ್ಯೈ ಸ್ವಾನಿ ಸ್ವಾನ್ಯಾಯುಧಾನಿ ಚ ।
ಶೂಲಂ ಶೂಲಾದ್ವಿನಿಷ್ಕೃಷ್ಯ ದದೌ ತಸ್ಯೈ ಪಿನಾಕಧೃಕ್ ।
ಚಕ್ರಂ ಚ ದತ್ತವಾನ್ ಕೃಷ್ಣಃ ಸಮುತ್ಪಾಟ್ಯ ಸ್ವಚಕ್ರತಃ ॥ ೨೦ ॥

ಶಂಖಂ ಚ ವರುಣಃ ಶಕ್ತಿಂ ದದೌ ತಸ್ಯೈ ಹುತಾಶನಃ ।
ಮಾರುತೋ ದತ್ತವಾಂಶ್ಚಾಪಂ ಬಾಣಪೂರ್ಣೇ ತಥೇಷುಧೀ ॥ ೨೧ ॥

ವಜ್ರಮಿಂದ್ರಃ ಸಮುತ್ಪಾಟ್ಯ ಕುಲಿಶಾದಮರಾಧಿಪಃ ।
ದದೌ ತಸ್ಯೈ ಸಹಸ್ರಾಕ್ಷೋ ಘಂಟಾಮೈರಾವತಾದ್ಗಜಾತ್ ॥ ೨೨ ॥

ಕಾಲದಂಡಾದ್ಯಮೋ ದಂಡಂ ಪಾಶಂ ಚಾಂಬುಪತಿರ್ದದೌ ।
ಪ್ರಜಾಪತಿಶ್ಚಾಕ್ಷಮಾಲಾಂ ದದೌ ಬ್ರಹ್ಮಾ ಕಮಂಡಲುಮ್ ॥ ೨೩ ॥

ಸಮಸ್ತರೋಮಕೂಪೇಷು ನಿಜರಶ್ಮೀನ್ ದಿವಾಕರಃ ।
ಕಾಲಶ್ಚ ದತ್ತವಾನ್ ಖಡ್ಗಂ ತಸ್ಯೈ ಚರ್ಮ ಚ ನಿರ್ಮಲಮ್ ॥ ೨೪ ॥

ಕ್ಷೀರೋದಶ್ಚಾಮಲಂ ಹಾರಮಜರೇ ಚ ತಥಾಽಂಬರೇ ।
ಚೂಡಾಮಣಿಂ ತಥಾ ದಿವ್ಯಂ ಕುಂಡಲೇ ಕಟಕಾನಿ ಚ ॥ ೨೫ ॥

೧೮. ಎರಡು ಸಂಧ್ಯಾಕಾಲಗಳ ಅಭಿಮಾನಿದೇವತೆಗಳ ತೇಜಸ್ಸಿನಿಂದ ಎರಡೂ ಹುಬ್ಬುಗಳೂ ವಾಯುವಿನ (ತೇಜಸ್ಸಿನಿಂದ) ಕಿವಿಗಳೂ ಉಂಟಾದುವು. ಮತ್ತು ಇತರ ದೇವತೆಗಳ ತೇಜಸ್ಸಿನಿಂದಲೂ ಸರ್ವ ಮಂಗಳೆಯು ಉಂಟಾದಳು.

೧೯. ಅನಂತರ ಮಹಿಷಾಸುರನಿಂದ ಹಿಂಸಿಲ್ಪಟ್ಟಿದ್ದ ದೇವತೆಗಳು ತಮ್ಮೆಲ್ಲರ ತೇಜೋರಾಶಿಯಿಂದ ಹುಟ್ಟಿದ್ದ ಆ (ದೇವಿಯನ್ನು) ನೋಡಿ ಸಂತೋಷವನ್ನು ಹೊಂದಿದರು.

೨೦. ಅನಂತರ ದೇವತೆಗಳು ಆಕೆಗೆ ತಮ್ಮ ತಮ್ಮ ಆಯುಧಗಳನ್ನು ಕೊಟ್ಟರು; ಈಶ್ವರನು ತನ್ನ ತ್ರಿಶೂಲದಿಂದ ಮತ್ತೊಂದು ತ್ರಿಶೂಲವನ್ನು ಹೊರಸೆಳೆದು ಆಕೆಗೆ ಇತ್ತನು. ಶ್ರೀಕೃಷ್ಣನು ತನ್ನ ಚಕ್ರದಿಂದ ಮತ್ತೊಂದು ಚಕ್ರವನ್ನು ಹೊರಸೆಳೆದು (ಆಕೆಗೆ) ಕೊಟ್ಟನು.

೨೧. ಮತ್ತು ವರುಣನು ಶಂಖವನ್ನೂ ಅಗ್ನಿಯು ಶಕ್ತ್ಯಾಯುಧವನ್ನೂ ಆಕೆಗೆ ಇತ್ತರು. ವಾಯುವು ಬಿಲ್ಲನ್ನೂ ಮತ್ತು ಬಾಣಗಳಿಂದ ತುಂಬಿರುವ ಎರಡು ಬತ್ತಳಿಕೆಗಳನ್ನೂ ಕೊಟ್ಟವನಾದನು.

೨೨. ದೇವಾಧಿಪನೂ ಸಹಸ್ರನಯನನೂ ಆದ ಇಂದ್ರನು ತನ್ನ ವಜ್ರಾಯುಧದಿಂದ ಮತ್ತೊಂದು ವಜ್ರಾಯುಧವನ್ನೂ ಐರಾವತ ಆನೆಯಿಂದ ಗಂಟೆಯನ್ನೂ ಸೆಳೆದು ಆಕೆಗೆ ಕೊಟ್ಟನು.

೨೩. ಯಮನು (ತನ್ನ) ಕಾಲದಂಡದಿಂದ ದಂಡವನ್ನೂ ಜಲಾಧಿಪತಿಯು ತನ್ನ ಪಾಶವನ್ನೂ ಪ್ರಜಾಪತಿ ತನ್ನ ಅಕ್ಷಮಾಲೆಯನ್ನೂ ಬ್ರಹ್ಮನು ಕಮಂಡಲುವನ್ನೂ ಕೊಟ್ಟರು.

೨೪. ಸೂರ್ಯನು ಆಕೆಯ ಪ್ರತಿರೋಮಕೂಪದಲ್ಲಿಯೂ ತನ್ನ ರಶ್ಮಿಗಳನ್ನು ತುಂಬಿದನು. ಕಾಲನು ಖಡ್ಗವನ್ನೂ ಮತ್ತು ನಿರ್ಮಲವಾದ ಚರ್ಮ(ಗುರಾಣಿ)ವನ್ನೂ ಕೊಟ್ಟರು.

೨೫-೨೬. ಕ್ಷೀರಸಾಗರಾಭಿಮಾನಿಯಾದ ದೇವತೆಯು ಆಕೆಗೆ ಶುದ್ಧವಾದ ಹಾರ, ಹೊಸದಾದ ಎರಡು ಬಟ್ಟೆಗಳು, ದಿವ್ಯವಾದ ಚೂಡಾಮಣಿ, ಎರಡು ಕರ್ಣಕುಂಡಲಗಳು, ಕಡಗಗಳು, ಶುಭ್ರವಾದ ಅರ್ಧಚಂದ್ರ, ಎಲ್ಲ ಬಾಹುಗಳಿಗೂ ಕೇಯೂರಗಳು, ನಿರ್ಮಲವಾದ ಕಾಲುಗೆಜ್ಜೆಗಳೆರಡು,

ಅರ್ಧಚಂದ್ರಂ ತಥಾ ಶುಭ್ರಂ ಕೇಯೂರಾನ್ ಸರ್ವಬಾಹುಷು ।
ನೂಪುರೌ ವಿಮಲೌ ತದ್ವದ್ ಗ್ರೈವೇಯಕಮನುತ್ತಮಮ್ ॥ ೨೬ ॥

ಅಂಗುಲೀಯಕರತ್ನಾನಿ ಸಮಸ್ತಾಸ್ವಂಗುಲೀಷು ಚ ।
ವಿಶ್ವಕರ್ಮಾ ದದೌ ತಸ್ಯೈ ಪರಶುಂ ಚಾತಿನಿರ್ಮಲಮ್ ॥ ೨೭ ॥

ಅಸ್ತ್ರಾಣ್ಯನೇಕರೂಪಾಣಿ ತಥಾಽಭೇದ್ಯಂ ಚ ದಂಶನಮ್ ।
ಅಮ್ಲಾನಪಂಕಜಾಂ ಮಾಲಾಂ ಶಿರಸ್ಯುರಸಿ ಚಾಪರಾಮ್ ॥ ೨೮ ॥

ಅದದಜ್ಜಲಧಿಸ್ತಸ್ಯೈ ಪಂಕಜಂ ಚಾತಿಶೋಭನಮ್ ।
ಹಿಮವಾನ್ ವಾಹನಂ ಸಿಹಂ ರತ್ನಾನಿ ವಿವಿಧಾನಿ ಚ ॥ ೨೯ ॥

ದದಾವಶೂನ್ಯಂ ಸುರಯಾ ಪಾನಪಾತ್ರಂ ಧನಾಧಿಪಃ ।
ಶೇಷಶ್ಚ ಸರ್ವನಾಗೇಶೋ ಮಹಾಮಣಿವಿಭೂಷಿತಮ್ ॥ ೩೦ ॥

ನಾಗಹಾರಂ ದದೌ ತಸ್ಯೈ ಧತ್ತೇ ಯಃ ಪೃಥಿವೀಮಿಮಾಮ್ ।
ಅನ್ಯೈರಪಿ ಸುರೈರ್ದೇವೀ ಭೂಷಣೈರಾಯುಧೈಸ್ತಥಾ ॥ ೩೧ ॥

ಸಮ್ಮಾನಿತಾ ನನಾದೋಚ್ಚೈಃ ಸಾಟ್ಟಹಾಸಂ ಮುಹುರ್ಮುಹುಃ ।
ತಸ್ಯಾ ನಾದೇನ ಘೋರೇಣ ಕೃತ್ಸ್ನಮಾಪೂರಿತಂ ನಭಃ ॥ ೩೨ ॥

ಅಮಾಯತಾತಿಮಹತಾ ಪ್ರತಿಶಬ್ದೋ ಮಹಾನಭೂತ್ ।
ಚುಕ್ಷುಭುಃ ಸಕಲಾ ಲೋಕಾಸ್ಸಮುದ್ರಾಶ್ಚ ಚಕಂಪಿರೇ ॥ ೩೩ ॥

ಚಚಾಲ ವಸುಧಾ ಚೇಲುಃ ಸಕಲಾಶ್ಚ ಮಹೀಧರಾಃ ।
ಜಯೇತಿ ದೇವಾಶ್ಚ ಮುದಾ ತಾಮೂಚುಃ
ಸಿಂಹವಾಹಿನೀಮ್ ॥ ೩೪ ॥

ಹಾಗೆಯೇ ಅತ್ಯುತ್ತಮವಾದ ಕಂಠಾಭರಣ, ಎಲ್ಲ ಬೆರಳುಗಳಿಗೂ ರತ್ನದುಂಗುರಗಳು – ಇವುಗಳನ್ನು (ಕೊಟ್ಟನು).

೨೭-೨೮. ವಿಶ್ವಕರ್ಮನು ಆಕೆಗೆ ಅತಿ ನಿರ್ಮಲವಾದ ಕೊಡಲಿಯನ್ನೂ, ಅನೇಕ ವಿಧವಾದ ಅಸ್ತ್ರಗಳನ್ನೂ, ಹಾಗೆಯೇ, ಅಭೇದ್ಯವಾದ ದಂಶನವನ್ನೂ ಕೊಟ್ಟನು. ಸಮುದ್ರದೇವತೆಯು ಆಕೆಗೆ ಶಿರಸ್ಸಿನಲ್ಲಿ ಮತ್ತು ಎದೆಯಲ್ಲಿ ಧರಿಸಲಾಗುವಂತಹ, ಬಾಡದ ಪದ್ಮಮಾಲೆಯನ್ನು ಕೊಟ್ಟನು; ಮತ್ತು ಅತಿ ಸುಂದರವಾದ ಮತ್ತೊಂದು ಕಮಲವನ್ನೂ ಅರ್ಪಿಸಿದನು.

೨೯-೩೦. ಹಿಮವಂತನು ವಾಹನಯೋಗ್ಯವಾದ ಸಿಂಹವನ್ನೂ, ವಿವಿಧ ರತ್ನಗಳನ್ನೂ ಕೊಟ್ಟನು. ಕುಬೇರನು ಎಂದಿಗೂ ಬರಿದಾಗದ ಸುರಾಪಾತ್ರೆಯನ್ನಿತ್ತನು. ಈ ಪೃಥಿವಿಯನ್ನು ಧರಿಸಿರುವ ಮತ್ತು ಎಲ್ಲ ನಾಗರಿಗೂ ಒಡೆಯನಾದ ಶೇಷನು ಮಹಾಮಣಿಗಳಿಂದ ಅಲಂಕೃತವಾದ ನಾಗ ಹಾರವೊಂದನ್ನು ಅರ್ಪಿಸಿದನು.

೩೧-೩೨. ಹೀಗೆ ಇತರ ದೇವತೆಗಳಿಂದಲೂ ಆಯುಧ-ಭೂಷಣಗಳನ್ನು ಒಪ್ಪಿಸಿ ಗೌರವಿಸಲ್ಪಟ್ಟ ದೇವಿಯು, ಅಟ್ಟಹಾಸಮಾಡುತ್ತ ಪುನಃ ಪುನಃ ಗಟ್ಟಿಯಾಗಿ ಗರ್ಜಿಸಿದಳು. ಆಕೆಯ ಘೋರವಾದ ನಾದದಿಂದ ಆಕಾಶವು ಸಂಪೂರ್ಣವಾಗಿ ತುಂಬಿಹೋಯಿತು.

೩೩. ಆಕಾಶದಲ್ಲಿ ಹಿಡಿಯಲಾರದ ಆ ಗರ್ಜನೆಯ ಧ್ವನಿಯಿಂದ ದೊಡ್ಡ ಪ್ರತಿಧ್ವನಿಯುಂಟಾಯಿತು. ಎಲ್ಲ ಲೋಕಗಳೂ ಕ್ಷೋಭೆಗೊಂಡುವು ಮತ್ತು ಸಮುದ್ರಗಳು ಚಲಿಸಿದುವು.

೩೪. ಭೂಮಿಯು ಚಲಿಸಿತು ಮತ್ತು ಎಲ್ಲ ಪರ್ವತಗಳೂ ಚಲಿಸಿದುವು. ದೇವತೆಗಳು ಆ ಸಿಂಹಾವಾಹಿನಿಯನ್ನು ಕುರಿತು ಸಂತೋಷದಿಂದ ಜಯಕಾರ ಮಾಡಿದರು.

ತುಷ್ಟುವುರ್ಮುನಯಶ್ಚೈನಾಂ ಭಕ್ತಿನಮ್ರಾತ್ಮಮೂರ್ತಯಃ ।
ದೃಷ್ಟ್ವಾ ಸಮಸ್ತಂ ಸಂಕ್ಷುಬ್ಧಂ ತ್ರೈಲೋಕ್ಯಮಮರಾರಯಃ ॥ ೩೫ ॥

ಸನ್ನದ್ಧಾಖಿಲಸೈನ್ಯಾಸ್ತೇ ಸಮುತ್ತಸ್ಥುರುದಾಯುಧಾಃ ।
ಆಃ ಕಿಮೇತದಿತಿ ಕ್ರೋಧಾದಾಭಾಷ್ಯ ಮಹಿಷಾಸುರಃ ॥ ೩೬ ॥

ಅಭ್ಯಧಾವತ ತಂ ಶಬ್ದಮಶೇಷೈರಸುರೈರ್ವೃತಃ ।
ಸ ದದರ್ಶ ತತೋ ದೇವೀಂ ವ್ಯಾಪ್ತಲೋಕತ್ರಯಾಂ ತ್ವಿಷಾ ॥ ೩೭ ॥

ಪಾದಾಕ್ರಾಂತ್ಯಾ ನತಭುವಂ ಕಿರೀಟೋಲ್ಲಿಖಿತಾಂಬರಾಮ್ ।
ಕ್ಷೋಭಿತಾಶೇಷಪಾತಾಲಾಂ ಧನುರ್ಜ್ಯಾನಿಸ್ಸ್ವನೇನ ತಾಮ್ ॥ ೩೮ ॥

ದಿಶೋ ಭುಜಸಹಸ್ರೇಣ ಸಮಂತಾದ್ವ್ಯಾಪ್ಯ ಸಂಸ್ಥಿತಾಮ್ ।
ತತಃ ಪ್ರವವೃತೇ ಯುದ್ಧಂ ತಯಾ ದೇವ್ಯಾ ಸುರದ್ವಿಷಾಮ್ ॥ ೩೯ ॥

ಶಸ್ತ್ರಾಸ್ತ್ರೈರ್ಬಹುಧಾ ಮುಕ್ತೈರಾದೀಪಿತದಿಗಂತರಮ್ ॥ ೪೦ ॥

ಮಹಿಷಾಸುರಸೇನಾನೀಶ್ಚಿಕ್ಷುರಾಖ್ಯೋ ಮಹಾಽಸುರಃ ।
ಯುಯುಧೇ ಚಾಮರಶ್ಚಾನ್ಯೈಶ್ಚತುರಂಗಬಲಾನ್ವಿತಃ ॥ ೪೧ ॥

ರಥಾನಾಮಯುತೈಃ ಷಡ್ಭಿರುದಗ್ರಾಖ್ಯೋ ಮಹಾಸುರಃ ।
ಅಯುಧ್ಯತಾಯುತಾನಾಂ ಚ ಸಹಸ್ರೇಣ ಮಹಾಹನುಃ ॥ ೪೨ ॥

ಪಂಚಾಶದ್ಭಿಶ್ಚ ನಿಯುತೈರಸಿಲೋಮಾ ಮಹಾಽಸುರಃ ।
ಅಯುತಾನಾಂ ಶತೈಃ ಷಡ್ಭಿರ್ಬಾಷ್ಕಲೋ ಯುಯುಧೇ ರಣೇ ॥ ೪೩ ॥

೩೫. ಭಕ್ತಿಯಿಂದ ನಮ್ರರಾಗಿ ಋಷಿಗಳು ಈಕೆಯನ್ನು ಸ್ತುತಿಸಿದರು. ತ್ರೈಲೋಕ್ಯಗಳೆಲ್ಲವೂ ಸಂಕ್ಷೋಭೆ ಹೊಂದಿದ್ದನ್ನು ಕಂಡು ರಾಕ್ಷಸರು –

೩೬-೩೭. ಸನ್ನಾಹಗೊಳಿಸಿದ ಸಕಲ ಸೈನ್ಯವುಳ್ಳವರಾಗಿ ಆಯುಧಗಳನ್ನು ಮೇಲೆತ್ತಿ ಯುದ್ಧಕ್ಕೆದ್ದರು. 'ಓಹೋ! ಇದೇನು?' ಎಂದು ಕ್ರೋಧದಿಂದ ನುಡಿದು ಮಹಿಷಾಸುರನು ಎಲ್ಲ ರಾಕ್ಷಸರಿಂದಲೂ ಪರಿವೃತನಾಗಿ ಆ ಶಬ್ದ ಬಂದ ದಿಕ್ಕಿಗೆ ಓಡಿದನು. ಅನಂತರ ಮೂರು ಲೋಕಗಳನ್ನೂ ತನ್ನ ಕಾಂತಿಯಿಂದ ವ್ಯಾಪಿಸಿರುವ ದೇವಿಯನ್ನು ಅವನು ಕಂಡನು.

೩೮. ಪಾದಾಘಾತಗಳ ಮೂಲಕ ನೆಲವನ್ನು ತಗ್ಗಿಸಿದ, ಕಿರೀಟಾಗ್ರದಿಂದ ಆಕಾಶವನ್ನು ಕೆರೆದ, ಬಿಲ್ಲಿನ ಹೆದೆಯೇರಿಸುವಿಕೆಯ ಧ್ವನಿಯಿಂದ ಪಾತಾಳಲೋಕಗಳೆಲ್ಲವನ್ನೂ ಕ್ಷೋಭೆಗೊಳಿಸಿದ (ಆ ದೇವಿಯನ್ನು ಅವನು ಕಂಡನು).

೩೯. ತನ್ನ ಸಾವಿರಬಾಹುಗಳಿಂದ ದಿಕ್ಕುಗಳನ್ನು ಎಲ್ಲಕಡೆಗಳಿಂದಲೂ ವ್ಯಾಪಿಸಿ ನಿಂತಿದ್ದ (ಆಕೆಯನ್ನು ನೋಡಿದನು). ಅನಂತರ ಆ ದೇವಿಯೊಡನೆ ರಾಕ್ಷಸರಿಗೆ ಯುದ್ಧವು ಪ್ರಾರಂಭವಾಯಿತು.

೪೦-೪೧. ಬಹುವಿಧವಾಗಿ ಪ್ರಯೋಗಿಸಿದ ಶಸ್ತ್ರಾಸ್ತ್ರಗಳಿಂದ ದಿಗಂತರಗಳು ಬೆಳಗುವಂತಹ (ಯುದ್ಧವು ನಡೆಯಿತು). ಮಹಿಷಾಸುರನ ಸೇನಾನಿಯಾದ ಚಿಕ್ಷುರನೆಂಬ ಮಹಾಸುರನೂ, ಚಾಮರನೆಂಬ ಮತ್ತೊಬ್ಬನೂ, ಚತುರಂಗ ಬಲದಿಂದ ಕೂಡಿ ಯುದ್ಧಮಾಡಿದರು.

೪೨. ಉದಗ್ರನೆಂಬ ಮಹಾಸುರನು ಅರವತ್ತು ಸಾವಿರ ರಥಸೈನ್ಯದೊಡನೆಯೂ, ಮಹಾಹನುವೆಂಬ (ಮತ್ತೊಬ್ಬ ಅಸುರನು) ಒಂದು ಕೋಟಿ ರಥ ಸೈನ್ಯದೊಡನೆಯೂ ಬಂದು ಯುದ್ಧ ಮಾಡಿದರು.

೪೩. ಅಸಿಲೋಮನೆಂಬ ರಾಕ್ಷಸನು ಐದು ಕೋಟಿ ರಥಸೈನ್ಯದಿಂದಲೂ, ಬಾಷ್ಕಲನೆಂಬುವನು ಅರುವತ್ತು ಲಕ್ಷ ರಥಸೈನ್ಯದಿಂದಲೂ ಕೂಡಿ ಬಂದು ಯುದ್ಧಮಾಡಿದರು.

ಗಜವಾಜಿಸಹಸ್ರೌಘೈರನೇಕೈರುಗ್ರದರ್ಶನಃ ।
ವೃತೋ ರಥಾನಾಂ ಕೋಟ್ಯಾ ಚ ಯುದ್ಧೇ ತಸ್ಮಿನ್ನಯುಧ್ಯತ ॥ ೪೪ ॥

ಬಿಡಲಾಖ್ಯೋಽಯುತಾನಾಂ ಚ ಪಂಚಾಶದ್ಭಿರಥಾಯುತೈಃ ।
ಯುಯುಧೇ ಸಂಯುಗೇ ತತ್ರ ರಥಾನಾಂ ಪರಿವಾರಿತಃ ॥ ೪೫ ॥

ಅನ್ಯೇ ಚ ತತ್ರಾಯುತಶೋ ರಥನಾಗಹಯೈರ್ವೃತಾಃ ।
ಯುಯುಧುಸ್ಸಂಯುಗೇ ದೇವ್ಯಾ ಸಹ ತತ್ರ ಮಹಾಽಸುರಾಃ ॥ ೪೬ ॥

ಕೋಟಿಕೋಟಿಸಹಸ್ರೈಸ್ತು ರಥಾನಾಂ ದಂತಿನಾಂ ತಥಾ ।
ಹಯಾನಾಂ ಚ ವೃತೋ ಯುದ್ಧೇ ತತ್ರಾಭೂನ್ಮಹಿಷಾಸುರಃ ॥ ೪೭ ॥

ತೋಮರೈರ್ಭಿಂದಿಪಾಲೈಶ್ಚ ಶಕ್ತಿಭಿರ್ಮುಸಲೈಸ್ತಥಾ ।
ಯುಯುಧುಃ ಸಂಯುಗೇ ದೇವ್ಯಾ ಖಡ್ಗೈಃ ಪರಶುಪಟ್ಟಿಶೈಃ ॥ ೪೮ ॥

ಕೇಚಿಚ್ಚ ಚಿಕ್ಷಿಪುಃ ಶಕ್ತೀಃ ಕೇಚಿತ್ಪಾಶಾಂಸ್ತಥಾಽಪರೇ ।
ದೇವೀಂ ಖಡ್ಗಪ್ರಹಾರೈಸ್ತು ತೇ ತಾಂ ಹಂತುಂ ಪ್ರಚಕ್ರಮುಃ ॥ ೪೯ ॥

ಸಾಽಪಿ ದೇವೀ ತತಸ್ತಾನಿ ಶಸ್ತ್ರಾಣ್ಯಸ್ತ್ರಾಣಿ ಚಂಡಿಕಾ ।
ಲೀಲಯೈವ ಪ್ರಚಿಚ್ಛೇದ ನಿಜಶಸ್ತ್ರಾಸ್ತ್ರವರ್ಷಿಣೀ ॥ ೫೦ ॥

ಅನಾಯಸ್ತಾನನಾ ದೇವೀ ಸ್ತೂಯಮಾನಾ ಸುರರ್ಷಿಭಿಃ ।
ಮುಮೋಚಾಸುರದೇಹೇಷು ಶಸ್ತ್ರಾಣ್ಯಸ್ತ್ರಾಣಿ ಚೇಶ್ವರೀ ॥ ೫೧ ॥

ಸೋಽಪಿ ಕ್ರುದ್ಧೋ ಧುತಸಟೋ ದೇವ್ಯಾ ವಾಹನಕೇಸರೀ ।
ಚಚಾರಾಸುರಸೈನ್ಯೇಷು ವನೇಷ್ವಿವ ಹುತಾಶನಃ ॥ ೫೨ ॥

೪೪. ಉಗ್ರದರ್ಶನನೆಂಬುವನು ಅನೇಕ ಸಾವಿರ ಸಂಖ್ಯೆಯ ಆನೆ ಕುದುರೆಗಳ ಸೈನ್ಯಸಮೂಹದಿಂದಲೂ, ಒಂದು ಕೋಟಿ ರಥಸೈನ್ಯದಿಂದಲೂ ಕೂಡಿ ಆ ಯುದ್ಧದಲ್ಲಿ ಕಾದಿದನು.

೪೫. ಮತ್ತು ಬಿಡಾಲನೆಂಬ (ಮಹಾದೈತ್ಯನು) ಐದು ಲಕ್ಷ ಸಂಖ್ಯೆಯ ರಥಸೈನ್ಯಪರಿವಾರವುಳ್ಳವನಾಗಿ ಆ ಯುದ್ಧದಲ್ಲಿ ಹೋರಾಡಿದನು.

೪೬. ಮತ್ತೆ ಕೆಲವು ಮಂದಿ ಮಹಾಸುರರು ಹತ್ತು ಹತ್ತು ಸಾವಿರ ಸಂಖ್ಯೆಯ ರಥ-ಗಜ-ಅಶ್ವ-ಸೈನ್ಯದಿಂದ ಕೂಡಿ ಆ ಯುದ್ಧದಲ್ಲಿ ದೇವಿಯೊಡನೆ ಕಾದಾಡಿದರು.

೪೭. ಹೀಗೆ ಮಹಿಷಾಸುರನು ಸಹಸ್ರಾರು ಕೋಟಿ ಕೋಟಿ ಸಂಖ್ಯೆಯಷ್ಟು ರಥ-ಗಜ-ಅಶ್ವ-ಸೈನ್ಯದೊಡಗೂಡಿ ಯುದ್ಧಮಾಡಿದನು.

೪೮. ಆ ಯುದ್ಧದಲ್ಲಿ (ರಾಕ್ಷಸರು) ದೇವಿಯೊಡನೆ ತೋಮರ, ಭಿಂದಿಪಾಲ, ಶಕ್ತಿ, ಮುಸಲ, ಖಡ್ಗ, ಪರಶು, ಪಟ್ಟಿಶ – ಎಂಬೀ ಆಯುಧ ಗಳಿಂದ ಹೋರಾಡಿದರು.

೪೯. ಕೆಲವರು ಶಕ್ತ್ಯಾಯುಧಗಳನ್ನು ಎಸೆದರು, ಮತ್ತೆ ಕೆಲವರು ಪಾಶಾಯುಧವನ್ನು ಬಿಟ್ಟರು. ಇತರರು ಆ ದೇವಿಯನ್ನು ಖಡ್ಗಪ್ರಹಾರಗಳಿಂದ ಕೊಲ್ಲಲು ಉದ್ಯುಕ್ತರಾದರು.

೫೦. ಅನಂತರ ಆ ಚಂಡಿಕಾದೇವಿಯು ತನ್ನ ಶಸ್ತ್ರಾಸ್ತ್ರಗಳನ್ನು (ರಾಕ್ಷಸರ ಮೇಲೆ) ಪ್ರಯೋಗಿಸುತ್ತಾ (ಅವರಿಂದ ಬಿಡಲ್ಪಟ್ಟ) ಆ ಶಸ್ತ್ರಾಸ್ತ್ರಗಳನ್ನು ಲೀಲಾಜಾಲವಾಗಿ ಕತ್ತರಿಸಿಹಾಕಿದಳು.

೫೧. ಸರ್ವೇಶ್ವರಿಯಾದ ಆ ದೇವಿಯು ಆಯಾಸವಿಲ್ಲದ ಮುಖ ವುಳ್ಳವಳಾಗಿ, ದೇವತೆಗಳಿಂದಲೂ, ಋಷಿಗಳಿಂದಲೂ ಸ್ತುತಿಸಲ್ಪಡುತ್ತ ರಾಕ್ಷಸರ ದೇಹಗಳಲ್ಲಿ ಶಸ್ತ್ರಾಸ್ತ್ರಗಳನ್ನು ವರ್ಷಿಸಿದಳು.

೫೨. ದೇವಿಯ ವಾಹನವಾಗಿದ್ದ ಆ ಸಿಂಹವೂ ಕೂಡ ಕೋಪಗೊಂಡು ತನ್ನ ಜಟೆಗಳನ್ನು ಕೊಡವುತ್ತ ಅಸುರ ಸೈನ್ಯಗಳ ಮಧ್ಯದಲ್ಲಿ ಕಾಡನ್ನು ಆವರಿಸುವ ಬೆಂಕಿಯಂತೆ ಸಂಚರಿಸಿತು.

ನಿಶ್ವಾಸಾನ್ಮುಮುಚೇ ಯಾಂಶ್ಚ ಯುಧ್ಯಮಾನಾ ರಣೇಽಂಬಿಕಾ ।
ತ ಏವ ಸದ್ಯಃ ಸಂಭೂತಾ ಗಣಾಃ ಶತಸಹಸ್ರಶಃ ॥ ೫೩ ॥

ಯುಯುಧುಸ್ತೇ ಪರಶುಭಿರ್ಭಿಂದಿಪಾಲಾಸಿಪಟ್ಟಿಶೈಃ ।
ನಾಶಯಂತೋಽಸುರಗಣಾನ್ ದೇವೀಶಕ್ತ್ಯುಪಬೃಂಹಿತಾಃ ॥ ೫೪ ॥

ಅವಾದಯಂತ ಪಟಹಾನ್ ಗಣಾಃ ಶಂಖಾಂಸ್ತಥಾಽಪರೇ ।
ಮೃದಂಗಾಂಶ್ಚ ತಥೈವಾನ್ಯೇ ತಸ್ಮಿನ್ಯುದ್ಧಮಹೋತ್ಸವೇ ॥ ೫೫ ॥

ತತೋ ದೇವೀ ತ್ರಿಶೂಲೇನ ಗದಯಾ ಶಕ್ತಿವೃಷ್ಟಿಭಿಃ ।
ಖಡ್ಗಾದಿಭಿಶ್ಚ ಶತಶೋ ನಿಜಘಾನ ಮಹಾಽಸುರಾನ್ ॥ ೫೬ ॥

ಪಾತಯಾಮಾಸ ಚೈವಾನ್ಯಾನ್ ಘಂಟಾಸ್ವನವಿಮೋಹಿತಾನ್ ।
ಅಸುರಾನ್ ಭುವಿ ಪಾಶೇನ ಬದ್ಧ್ವಾ ಚಾನ್ಯಾನಕರ್ಷಯತ್ ॥ ೫೭ ॥

ಕೇಚಿದ್ದ್ವಿಧಾಕೃತಾಸ್ತೀಕ್ಷ್ಣೈಃ ಖಡ್ಗಪಾತೈಸ್ತಥಾಽಪರೇ ।
ವಿಪೋಥಿತಾ ನಿಪಾತೇನ ಗದಯಾ ಭುವಿ ಶೇರತೇ ॥ ೫೮ ॥

ವೇಮುಶ್ಚ ಕೇಚಿದ್ರುಧಿರಂ ಮುಸಲೇನ ಭೃಶಂ ಹತಾಃ ।
ಕೇಚಿನ್ನಿಪತಿತಾ ಭೂಮೌ ಭಿನ್ನಾಃ ಶೂಲೇನ ವಕ್ಷಸಿ ॥ ೫೯ ॥

ನಿರಂತರಶರೌಘೇಣ ಕೃತಾಃ ಕೇಚಿದ್ರಣಾಜಿರೇ ।
ಶೈಲಾನುಕಾರಿಣಃ ಪ್ರಾಣಾನ್ಮುಮುಚುಸ್ತ್ರಿದಶಾರ್ದನಾಃ ॥ ೬೦ ॥

ಕೇಷಾಂಚಿದ್ಬಾಹವಶ್ಛಿನ್ನಾಶ್ಛಿನ್ನಗ್ರೀವಾಸ್ತಥಾಽಪರೇ ।
ಶಿರಾಂಸಿ ಪೇತುರನ್ಯೇಷಾಮನ್ಯೇ ಮಧ್ಯೇ ವಿದಾರಿತಾಃ ॥ ೬೧ ॥

೫೩. ರಣರಂಗದಲ್ಲಿ ಯುದ್ಧಮಾಡುತ್ತಿದ್ದ ಅಂಬಿಕೆಯು ಯಾವ್ವ ನಿಟ್ಟುಸಿರುಗಳನ್ನು ಬಿಟ್ಟಳೋ ಅವು ಕೂಡಲೇ ನೂರುಸಾವಿರ ಸಂಖ್ಯೆಗಳಲ್ಲಿ (ಆಕೆಯ) ಪರಿವಾರಗಣಗಳಾದುವು.

೫೪. ದೇವಿಯ ಶಕ್ತಿಯಿಂದ ಬಲಗೊಂಡ ಆ ಗಣದೇವತೆಗಳು ಪರಶು, ಭಿಂದಿಪಾಲ, ಕತ್ತಿ, ಪಟ್ಟಿಶ-ಮೊದಲಾದ ಆಯುಧಗಳಿಂದ ಅಸುರಗಣಗಳನ್ನು ನಾಶಗೊಳಿಸುತ್ತ ಯುದ್ಧಮಾಡಿದರು.

೫೫. ಆ ಯುದ್ಧವೆಂಬ ಮಹೋತ್ಸವದಲ್ಲಿ ಕೆಲವು ಗಣದೇವತೆಗಳು ನಗಾರಿಗಳನ್ನೂ, ಕೆಲವರು ಶಂಖಗಳನ್ನೂ ಇನ್ನು ಕೆಲವರು ಮೃದಂಗಗಳನ್ನೂ ಧ್ವನಿಗೈದರು.

೫೬. ಅನಂತರ ದೇವಿಯು ತ್ರಿಶೂಲದಿಂದಲೂ ಗದೆಯಿಂದಲೂ ಶಕ್ತ್ಯಾಯುಧಗಳ ಸುರಿಮಳೆಯಿಂದಲೂ ಮತ್ತು ಕತ್ತಿಯೇ ಮೊದಲಾದ ಇತರ ಆಯುಧಗಳಿಂದಲೂ ಆ ಮಹಾಸುರರನ್ನು ನೂರಾರುಸಂಖ್ಯೆಯಲ್ಲಿ ವಧಿಸಿದಳು.

೫೭. (ದೇವಿಯು) ಮತ್ತೆ ಕೆಲವರನ್ನು ಘಂಟಾನಾದದಿಂದ ವಿಮೋಹಗೊಳಿಸಿ ಕೆಳಗೆ ಬೀಳಿಸಿದಳು. ಮತ್ತೂ ಕೆಲವು ಅಸುರರನ್ನು ಪಾಶದಿಂದ ಕಟ್ಟಿ ಭೂಮಿಯಲ್ಲಿ ಎಳೆದಾಡಿದಳು.

೫೮. ಕೆಲವರು ತೀಕ್ಷ್ಣವಾದ ಖಡ್ಗಪಾತಗಳಿಂದ ಎರಡು ತುಂಡಾಗಿ ಮಾಡಲ್ಪಟ್ಟರು. ಇನ್ನು ಕೆಲವರು ಗದಾಪ್ರಹಾರದಿಂದ ಹಿಂಸಿಸಲ್ಪಟ್ಟವರಾಗಿ ಸತ್ತು ನೆಲದಲ್ಲಿ ಬಿದ್ದರು.

೫೯. ಕೆಲವರು ಮುಸಲಾಯುಧದಿಂದ ಚೆನ್ನಾಗಿ ಹೊಡೆಯಲ್ಪಟ್ಟವರಾಗಿ ರಕ್ತವನ್ನು ಕಾರಿದರು. ಮತ್ತೆ ಕೆಲವರು, ಶೂಲಾಯುಧದಿಂದ ಎದೆಯಲ್ಲಿ ಚುಚ್ಚಲ್ಪಟ್ಟವರಾಗಿ ನೆಲದಮೇಲೆ ಬಿದ್ದರು.

೬೦. ರಣರಂಗದಲ್ಲಿ (ದೇವಿಯು) ನಿರಂತರವಾಗಿ ಬಿಟ್ಟ ಬಾಣಗಳ ಸುರಿಮಳೆಯಿಂದ ಕತ್ತರಿಸಲ್ಪಟ್ಟು – ಆಕಾರದಲ್ಲಿ ಬೆಟ್ಟಗಳನ್ನು ಹೋಲುತ್ತಿದ್ದ ಆ ರಾಕ್ಷಸರು – ಪ್ರಾಣಗಳನ್ನು ತ್ಯಜಿಸಿದರು.

೬೧. ಕೆಲವು ರಾಕ್ಷಸರ ಬಾಹುಗಳು ಕತ್ತರಿಸಲ್ಪಟ್ಟವು. ಕೆಲವರ ಕತ್ತುಗಳು ತುಂಡಾದವು. ಕೆಲವರ ತಲೆಗಳು ಕೆಳಗೆ ಬಿದ್ದವು. ಇತರರು ನಡುವಿನಲ್ಲಿ ಸೀಳಲ್ಪಟ್ಟರು.

ವಿಚ್ಛಿನ್ನಜಂಘಾಸ್ತ್ವಪರೇ ಪೇತುರುರ್ವ್ಯಾಂ ಮಹಾಽಸುರಾಃ ।
ಏಕಬಾಹ್ವಕ್ಷಿಚರಣಾಃ ಕೇಚಿದ್ದೇವ್ಯಾ ದ್ವಿಧಾ ಕೃತಾಃ ॥ ೬೨ ॥

ಛಿನ್ನೇಽಪಿ ಚಾನ್ಯೇ ಶಿರಸಿ ಪತಿತಾಃ ಪುನರುತ್ಥಿತಾಃ ।
ನನೃತುಶ್ಚಾಪರೇ ತತ್ರ ಯುದ್ಧೇ ತೂರ್ಯಲಯಾಶ್ರಿತಾಃ ॥ ೬೩ ॥

ಕಬಂಧಾಶ್ಛಿನ್ನಶಿರಸಃ ಖಡ್ಗಶಕ್ತ್ಯೃಷ್ಟಿಪಾಣಯಃ ।
ತಿಷ್ಠ ತಿಷ್ಠೇತಿ ಭಾಷಂತೋ ದೇವೀಮನ್ಯೇ ಮಹಾಽಸುರಾಃ ॥ ೬೪ ॥

ಪಾತಿತೈ ರಥನಾಗಾಶ್ವೈರಸುರೈಶ್ಚ ವಸುಂಧರಾ ।
ಅಗಮ್ಯಾ ಸಾಽಭವತ್ತತ್ರ ಯತ್ರಾಭೂತ್ಸ ಮಹಾರಣಃ ॥ ೬೫ ॥

ಶೋಣಿತೌಘಾ ಮಹಾನದ್ಯಃ ಸದ್ಯಸ್ತತ್ರ ವಿಸುಸ್ರುವುಃ ।
ಮಧ್ಯೇ ಚಾಸುರಸೈನ್ಯಸ್ಯ ವಾರಣಾಸುರವಾಜಿನಾಮ್ ॥ ೬೬ ॥

ಕ್ಷಣೇನ ತನ್ಮಹಾಸೈನ್ಯಮಸುರಾಣಾಂ ತಥಾಽಂಬಿಕಾ ।
ನಿನ್ಯೇ ಕ್ಷಯಂ ಯಥಾ ವಹ್ನಿಸ್ತೃಣದಾರುಮಹಾಚಯಮ್ ॥ ೬೭ ॥

ಸ ಚ ಸಿಂಹೋ ಮಹಾನಾದಮುತ್ಸೃಜನ್ ಧುತಕೇಸರಃ ।
ಶರೀರೇಭ್ಯೋಽಮರಾರೀಣಾಮಸೂನಿವ ವಿಚಿನ್ವತಿ ॥ ೬೮ ॥

ದೇವ್ಯಾ ಗಣೈಶ್ಚ ತೈಸ್ತತ್ರ ಕೃತಂ ಯುದ್ಧಂ ತಥಾಽಸುರೈಃ ।
ಯಥೈಷಾಂ ತುತುಷುರ್ದೇವಾಃ ಪುಷ್ಪವೃಷ್ಟಿಮುಚೋ ದಿವಿ ॥ ೬೯ ॥

ಇತಿ ಶ್ರೀಮಾರ್ಕಂಡೇಯಪುರಾಣೇ ಸಾವರ್ಣಿಕೇ ಮನ್ವಂತರೇ
ಶ್ರೀದೇವೀಮಾಹಾತ್ಮ್ಯೇ ಮಹಿಷಾಸುರಸೈನ್ಯವಧೋ ನಾಮ ದ್ವಿತೀಯೋಽಧ್ಯಾಯಃ

೬೨. ಇತರ ಮಹಾಸುರರು ಕತ್ತರಿಸಿದ ಮೊಣಕಾಲುಳ್ಳವರಾಗಿ ಭೂಮಿಯಲ್ಲಿ ಬಿದ್ದರು. ಇನ್ನು ಕೆಲವರು ಒಂದು ಕಣ್ಣು, ಒಂದು ಬಾಹು, ಒಂದು ಕಾಲು ಉಳ್ಳವರಾದರು; ಮತ್ತೆ ಕೆಲವರು ದೇವಿಯಿಂದ ಎರಡಾಗಿ ಸೀಳಲ್ಪಟ್ಟರು.

೬೩. ತಲೆಗಳು ಕತ್ತರಿಸಲ್ಪಟ್ಟಿದ್ದರೂ ಕೆಳಗೆ ಬಿದ್ದಿದ್ದ ಕೆಲವರು ಪುನಃ ಎದ್ದರು. ಇತರರಾದರೋ ಆ ಯುದ್ಧದಲ್ಲಿ ತೂರ್ಯಾದಿವಾದ್ಯಗಳ ಲಯಕ್ಕನುಸಾರವಾಗಿ ನರ್ತಿಸಿದರು.

೬೪. ಮತ್ತೆ ಕೆಲವರು ರಾಕ್ಷಸರು ತಲೆಗಳು ಕತ್ತರಿಸಲ್ಪಟ್ಟು ಕಬಂಧಗಳಾಗಿ, ಖಡ್ಗ-ಶಕ್ತಿ-ಋಷ್ಟಿ ಎಂಬ ಆಯುಧಗಳನ್ನು ಕೈಯಲ್ಲಿ ಹಿಡಿದು, 'ನಿಲ್ಲು ನಿಲ್ಲು' ಎಂದು ದೇವಿಯನ್ನು ಕುರಿತು ಹೇಳುತ್ತಿದ್ದರು.

೬೫. ಆ ಮಹಾಯುದ್ಧವು ನಡೆದಿದ್ದ ಸ್ಥಳದಲ್ಲಿ ಕೆಳಕ್ಕೆ ಬೀಳಿಸಲ್ಪಟ್ಟ ರಥಗಳು, ಆನೆಗಳು, ಕುದುರೆಗಳು ಮತ್ತು ರಾಕ್ಷಸರು-ಇವರಿಂದ (ಯುದ್ಧ) ಭೂಮಿಯು ವೀರರಿಗೆ ಮುಂದೆ ನಡೆಯಲಾಗದ ಹಾಗಾಗಿತ್ತು.

೬೬. ಅಸುರಸೈನ್ಯದ ಆನೆ-ರಾಕ್ಷಸ-ಕುದುರೆಗಳ ನಡುವೆ ರಕ್ತ ಪ್ರವಾಹದಿಂದ ಕೂಡಿದ ಮಹಾನದಿಗಳು ಕೂಡಲೇ (ಹುಟ್ಟಿ) ಹರಿದುವು.

೬೭. ಹೀಗೆ ಆ ಚಂಡಿಕಾಂಬಿಕೆಯು ಅಸುರರ ಆ ಮಹಾಸೈನ್ಯವನ್ನು-ಅಗ್ನಿಯು ಹುಲ್ಲುಸೌದೆಗಳ ದೊಡ್ಡ ರಾಶಿಯನ್ನು ನಾಶಮಾಡುವಂತೆ - ಕ್ಷಣಮಾತ್ರದಲ್ಲಿ ನಾಶಮಾಡಿದಳು.

೬೮. (ದೇವಿಯ ವಾಹನವಾದ) ಆ ಸಿಂಹವು ಕೇಸರವನ್ನು ಕೊಡವುತ್ತ, ಮಹಾಗರ್ಜನೆಯನ್ನುಂಟುಮಾಡುತ್ತ, ರಾಕ್ಷಸರ ಶರೀರಗಳಿಂದ ಪ್ರಾಣಗಳನ್ನು ಹುಡುಕುವಂತಿತ್ತು.

೬೯. ದೇವಿಯ ಗಣಗಳೂ ಅಸುರರೊಂದಿಗೆ ಯುದ್ಧಮಾಡಿದುವು. ಇವರ (ಯುದ್ಧದಿಂದ) ಸಂತುಷ್ಟರಾದ ದೇವತೆಗಳು ಅಂತರಿಕ್ಷದಿಂದ ಪುಷ್ಪ ವೃಷ್ಟಿಯನ್ನು ಸುರಿಸಿದರು.

ಹೀಗೆ ಸಾವರ್ಣಿಕಮನ್ವಂತರಕ್ಕೆ ಸೇರಿದ ಮಾರ್ಕಂಡೇಯ ಪುರಾಣದಲ್ಲಿ ದೇವೀಮಾಹಾತ್ಮ್ಯದಲ್ಲಿ 'ಮಹಿಷಾಸುರಸೈನ್ಯವಧೆ' ಎಂಬ ಎರಡನೆಯ ಅಧ್ಯಾಯವು ಮುಗಿಯಿತು.

# ತೃತೀಯೋಽಧ್ಯಾಯಃ

## ಮಹಿಷಾಸುರವಧಃ

### ಧ್ಯಾನಮ್

ಓಮ್ ಉದ್ಯದ್ಭಾನುಸಹಸ್ರಕಾಂತಿಮರುಣಕ್ಷೌಮಾಂ ಶಿರೋಮಾಲಿಕಾಂ
ರಕ್ತಾಲಿಪ್ತಪಯೋಧರಾಂ ಜಪವಟೀಂ ವಿದ್ಯಾಮಭೀತಿಂ ವರಮ್ ।
ಹಸ್ತಾಬ್ಜೈರ್ದಧತೀಂ ತ್ರಿನೇತ್ರವಿಲಸದ್ವಕ್ತ್ರಾರವಿಂದಶ್ರಿಯಂ
ದೇವೀಂ ಬದ್ಧಹಿಮಾಂಶುರತ್ನಮುಕುಟಾಂ ವಂದೇಽರವಿಂದಸ್ಥಿತಾಮ್ ॥

ಋಷಿರುವಾಚ ॥ ೧ ॥

ನಿಹನ್ಯಮಾನಂ ತತ್ಸೈನ್ಯಮವಲೋಕ್ಯ ಮಹಾಽಸುರಃ ।
ಸೇನಾನೀಶ್ಚಿಕ್ಷುರಃ ಕೋಪಾದ್ಯಯೌ ಯೋದ್ಧುಮಥಾಂಬಿಕಾಮ್ ॥ ೨ ॥

ಸ ದೇವೀಂ ಶರವರ್ಷೇಣ ವವರ್ಷ ಸಮರೇಽಸುರಃ ।
ಯಥಾ ಮೇರುಗಿರೇಃ ಶೃಂಗಂ ತೋಯವರ್ಷೇಣ ತೋಯದಃ ॥ ೩ ॥

ತಸ್ಯ ಛಿತ್ವಾ ತತೋ ದೇವೀ ಲೀಲಯೈವ ಶರೋತ್ಕರಾನ್ ।
ಜಘಾನ ತುರಗಾನ್ ಬಾಣೈರ್ಯಂತಾರಂ ಚೈವ ವಾಜಿನಾಮ್॥ ೪ ॥

ಚಿಚ್ಛೇದ ಚ ಧನುಃ ಸದ್ಯೋ ಧ್ವಜಂ ಚಾತಿಸಮುಚ್ಛ್ರಿತಮ್ ।
ವಿವ್ಯಾಧ ಚೈವ ಗಾತ್ರೇಷು ಛಿನ್ನಧನ್ವಾನಮಾಶುಗೈಃ ॥ ೫ ॥

ಸಚ್ಛಿನ್ನಧನ್ವಾ ವಿರಥೋ ಹತಾಶ್ವೋ ಹತಸಾರಥಿಃ ।
ಅಭ್ಯಧಾವತ ತಾಂ ದೇವೀಂ ಖಡ್ಗಚರ್ಮಧರೋಽಸುರಃ ॥ ೬ ॥

# ಮೂರನೆಯ ಅಧ್ಯಾಯ

## ಮಹಿಷಾಸುರವಧೆ

### ಧ್ಯಾನ

ಉದಯಿಸುತ್ತಿರುವ ಸೂರ್ಯನ ಸಹಸ್ರದಷ್ಟು ಕಾಂತಿಯನ್ನುಳ್ಳ, ಕೆಂಪು ರೇಷ್ಮೆ ವಸ್ತ್ರವನ್ನು ಧರಿಸಿರುವ, ಮುಂಡಗಳ ಮಾಲೆಯನ್ನು ಹಾಕಿಕೊಂಡಿರುವ, ರಕ್ತದಿಂದ ತೊಯ್ದು ಸ್ತನಗಳನ್ನುಳ್ಳ, ತನ್ನ ಕರಕಮಲಗಳಲ್ಲಿ ಜಪಮಾಲೆಯನ್ನು ಧರಿಸಿ ವಿದ್ಯೆ, ಅಭೀತಿ ಮತ್ತು ವರ ಎಂಬ ಮುದ್ರೆಗಳನ್ನು ಪ್ರದರ್ಶಿಸುತ್ತಿರುವ, ಮೂರು ಕಣ್ಣುಗಳಿಂದಲೂ ಮತ್ತು ಶಾಂತಿಯುಕ್ತವಾದ ವದನಾರವಿಂದದ ಶೋಭೆಯಿಂದಲೂ ಕೂಡಿರುವ, ರತ್ನ ಕಿರೀಟದ ತುದಿಯಲ್ಲಿ ಚಂದ್ರನನ್ನುಳ್ಳ, ಕಮಲಾಸನದಲ್ಲಿ ಕುಳಿತಿರುವ ದೇವಿಯನ್ನು ವಂದಿಸುತ್ತೇನೆ.

೧-೨. ಋಷಿಯು ಹೇಳಿದನು: ನಾಶಹೊಂದುತ್ತಿದ್ದ ಆ ಸೈನ್ಯವನ್ನು ನೋಡಿ ಸೇನಾಪತಿಯಾದ ಚಕ್ಷುರನೆಂಬ ಮಹಾಸುರನು ಕೋಪಹೊಂದಿ ತಾನೇ ದೇವಿಯೊಡನೆ ಯುದ್ಧಮಾಡಲು ಹೋದನು.

೩. ಮೇಘವು ಮೇರುಗಿರಿಯ ಶಿಖರದ ಮೇಲೆ ಮಳೆಯನ್ನು ಸುರಿಸುವಂತೆ ಅವನು ಆ ಯುದ್ಧದಲ್ಲಿ ದೇವಿಯ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದನು.

೪. ಅನಂತರ ದೇವಿಯು ಅನಾಯಾಸವಾಗಿ ಅವನ ಬಾಣರಾಶಿಯನ್ನು ಕತ್ತರಿಸಿದ್ದಲ್ಲದೆ ಪ್ರತಿಬಾಣಗಳಿಂದ ಅವನ ಕುದುರೆಗಳನ್ನೂ ಅವುಗಳ ಸಾರಥಿಯನ್ನೂ ಸಂಹರಿಸಿದಳು.

೫. (ಆ ದೇವಿಯು ಅವನ) ಧನುಸ್ಸನ್ನು ಕೂಡಲೆ ಕತ್ತರಿಸಿದಳು. ಅತ್ಯುನ್ನತವಾಗಿದ್ದ ಧ್ವಜವನ್ನು ಕೂಡ (ಕತ್ತರಿಸಿದಳು). ಹೀಗೆ ಮುರಿಯಲ್ಪಟ್ಟ ಧನುಸ್ಸುಳ್ಳ ಅವನನ್ನು ವೇಗವಾದ ಬಾಣಗಳ ಮೂಲಕ ಶರೀರದಲ್ಲಿ ಚುಚ್ಚಿದಳು.

೬. (ಹೀಗೆ) ಮುರಿದ ಧನುಸ್ಸುಳ್ಳ, ರಥವನ್ನು ಕಳೆದುಕೊಂಡಿರುವ, ಮತ್ತು ಕುದುರೆ-ಸಾರಥಿಗಳು ಹತವಾಗಿರುವ ಆ ರಾಕ್ಷಸನು ಖಡ್ಗ-ಗುರಾಣಿಗಳನ್ನು ಧರಿಸಿ ಆ ದೇವಿಯ ಕಡೆಗೆ ಓಡಿಬಂದನು.

ಸಿಂಹಮಾಹತ್ಯ ಖಡ್ಗೇನ ತೀಕ್ಷ್ಣಧಾರೇಣ ಮೂರ್ಧನಿ ।
ಆಜಘಾನ ಭುಜೇ ಸವ್ಯೇ ದೇವೀಮಪ್ಯತಿವೇಗವಾನ್ ॥ ೭ ॥

ತಸ್ಯಾಃ ಖಡ್ಗೋ ಭುಜಂ ಪ್ರಾಪ್ಯ ಪಫಾಲ ನೃಪನಂದನ ।
ತತೋ ಜಗ್ರಾಹ ಶೂಲಂ ಸ ಕೋಪಾದರುಣಲೋಚನಃ ॥ ೮ ॥

ಚಿಕ್ಷೇಪ ಚ ತತಸ್ತತ್ತು ಭದ್ರಕಾಲ್ಯಾಂ ಮಹಾಽಸುರಃ ।
ಜಾಜ್ವಲ್ಯಮಾನಂ ತೇಜೋಭೀ ರವಿಬಿಂಬಮಿವಾಂಬರಾತ್ ॥ ೯ ॥

ದೃಷ್ಟ್ವಾ ತದಾಽಽಪತಚ್ಛೂಲಂ ದೇವೀ ಶೂಲಮಮುಂಚತ ।
ತೇನ ತಚ್ಛತಧಾ ನೀತಂ ಶೂಲಂ ಸ ಚ ಮಹಾಽಸುರಃ ॥ ೧೦ ॥

ಹತೇ ತಸ್ಮಿನ್ಮಹಾವೀರ್ಯೇ ಮಹಿಷಸ್ಯ ಚಮೂಪತೌ ।
ಆಜಗಾಮ ಗಜಾರೂಢಶ್ಚಾಮರಸ್ತ್ರಿದಶಾರ್ದನಃ ॥ ೧೧ ॥

ಸೋಽಪಿ ಶಕ್ತಿಂ ಮುಮೋಚಾಥ ದೇವ್ಯಾಸ್ತಾಮಂಬಿಕಾ ದ್ರುತಮ್ ।
ಹುಂಕಾರಾಭಿಹತಾಂ ಭೂಮೌ ಪಾತಯಾಮಾಸ ನಿಷ್ಪ್ರಭಾಮ್ ॥ ೧೨ ॥

ಭಗ್ನಾಂ ಶಕ್ತಿಂ ನಿಪತಿತಾಂ ದೃಷ್ಟ್ವಾ ಕ್ರೋಧಸಮನ್ವಿತಃ ।
ಚಿಕ್ಷೇಪ ಚಾಮರಃ ಶೂಲಂ ಬಾಣೈಸ್ತದಪಿ ಸಾಽಚ್ಛಿನತ್ ॥ ೧೩ ॥

ತತಃ ಸಿಂಹಃ ಸಮುತ್ಪತ್ಯ ಗಜಕುಂಭಾಂತರೇ ಸ್ಥಿತಃ ।
ಬಾಹುಯುದ್ಧೇನ ಯುಯುಧೇ ತೇನೋಚ್ಚೈಸ್ತ್ರಿದಶಾರಿಣಾ ॥ ೧೪ ॥

ಯುದ್ಧ್ಯಮಾನೌ ತತಸ್ತೌ ತು ತಸ್ಮಾನ್ನಾಗಾನ್ಮಹೀಂ ಗತೌ ।
ಯುಯುಧಾತೇಽತಿಸಂರಬ್ಧೌ ಪ್ರಹಾರೈರತಿದಾರುಣೈಃ ॥ ೧೫ ॥

೭. ತೀಕ್ಷ್ಣವಾದ ಅಲಗುಳ್ಳ ತನ್ನ ಕತ್ತಿಯಿಂದ ಸಿಂಹದ ತಲೆಯ ಮೇಲೆ ಪ್ರಹಾರಮಾಡಿ, ಅತ್ಯಂತ ವೇಗವುಳ್ಳವನಾಗಿ, ದೇವಿಯನ್ನೂ ಕೂಡ ಎಡಭುಜದಲ್ಲಿ ಹೊಡೆದನು.

೮. ಎಲೈ ರಾಜಪುತ್ರನೆ, ಆಕೆಯ ಭುಜಕ್ಕೆ ತಗುಲಿದ ಖಡ್ಗವು ಚೂರುಚೂರಾಯಿತು. ಅನಂತರ ಕೋಪದಿಂದ ಕೆಂಗಣ್ಣುಳ್ಳ ಅವನು ಶೂಲವನ್ನು ತೆಗೆದುಕೊಂಡನು.

೯. ಅನಂತರ ಆ ಮಹಾರಾಕ್ಷಸನು ಆಕಾಶದಿಂದ ರವಿಬಿಂಬವನ್ನೇ ಕಿತ್ತೆಸೆಯುತ್ತಿದ್ದಾನೆಯೋ ಎಂಬಂತೆ ತೇಜಸ್ಸಿನಿಂದ ಜ್ವಲಿಸುತ್ತಿದ್ದ ಆ ಶೂಲವನ್ನು ಭದ್ರಕಾಲಿಯ ಕಡೆಗೆ ಎಸೆದನು.

೧೦. ತನ್ನ ಮೇಲೇರಿಬರುತ್ತಿರುವ ಆ ಶೂಲವನ್ನು ನೋಡಿ ದೇವಿಯು (ತನ್ನ) ಶೂಲವನ್ನು ಬಿಟ್ಟಳು. ಇದರಿಂದ ಆ ರಾಕ್ಷಸನ ಶೂಲವು ನೂರು ತುಂಡುಗಳಾಯಿತು. ಮತ್ತು ಆ ರಾಕ್ಷಸನೂ ಕೂಡ (ನೂರು ತುಂಡಾಗಿ ಬಿದ್ದನು).

೧೧. ಮಹಿಷನ ಸೇನಾಪತಿಯೂ, ಮಹಾವೀರ್ಯಸಂಪನ್ನನೂ ಆಗಿದ್ದ ಆ ಚಿಕ್ಷುರಾಸುರನು (ಹೀಗೆ) ಕೊಲ್ಲಲ್ಪಡಲು ದೇವಕಂಟಕನಾದ ಚಾಮರನೆಂಬುವನು ಆನೆಯ ಮೇಲೆ ಕುಳಿತು (ಯುದ್ಧಕ್ಕೆ) ಬಂದನು.

೧೨. ಅವನೂ ಕೂಡ ದೇವಿಯ ಮೇಲೆ ಶಕ್ತ್ಯಾಯುಧವನ್ನು ಬಿಟ್ಟನು. ಅನಂತರ ದೇವಿಯು ಅದನ್ನು ಕೂಡಲೇ ಹುಂಕಾರದಿಂದ ಅಪ್ಪಳಿಸಿ ಕಳೆಗುಂದಿಸಿ ಭೂಮಿಯಲ್ಲಿ ಕೆಡವಿದಳು.

೧೩. ಆ ಚಾಮರನು ತನ್ನ ಶಕ್ತ್ಯಾಯುಧವು ಭಗ್ನವಾಗಿ ಬಿದ್ದದ್ದನ್ನು ಕಂಡು ಕೋಪದಿಂದ ಶೂಲವನ್ನೆಸೆದನು. ಆಕೆಯು ಅದನ್ನು ಕೂಡ ಬಾಣಗಳಿಂದ ಕತ್ತರಿಸಿದಳು.

೧೪. ಅನಂತರ ಸಿಂಹವು ಮೇಲೆ ನೆಗೆದು ಆನೆಯ ಕುಂಭಸ್ಥಳದ ನಡುವೆ ಏರಗಿತು; (ಅಲ್ಲಿಂದಲೇ) ದೇವಶತ್ರುವಾದ ಆ ರಾಕ್ಷಸನೊಡನೆ ಬಾಹು ಯುದ್ಧದಲ್ಲಿ ತೊಡಗಿತು.

೧೫. ಅನಂತರ ಅವರಿಬ್ಬರೂ ಯುದ್ಧಮಾಡುತ್ತಲೇ ಆ ಆನೆಯಿಂದ ನೆಲಕ್ಕಿಳಿದು ಬಹು ಕ್ರೋಧದಿಂದ, ಅತ್ಯಂತ ಭಯಂಕರ ಪ್ರಹಾರಗಳ ಮೂಲಕ, ಕಾದಿದರು.

ತತೋ ವೇಗಾತ್ಖಮುತ್ಪತ್ಯ ನಿಪತ್ಯ ಚ ಮೃಗಾರಿಣಾ ।
ಕರಪ್ರಹಾರೇಣ ಶಿರಶ್ಚಾಮರಸ್ಯ ಪೃಥಕ್ಕೃತಮ್ ॥ ೧೬ ॥

ಉದಗ್ರಶ್ಚ ರಣೇ ದೇವ್ಯಾ ಶಿಲಾವೃಕ್ಷಾದಿಭಿರ್ಹತಃ ।
ದಂತಮುಷ್ಟಿತಲೈಶ್ಚೈವ ಕರಾಲಶ್ಚ ನಿಪಾತಿತಃ ॥ ೧೭ ॥

ದೇವೀ ಕ್ರುದ್ಧಾ ಗದಾಪಾತೈಶ್ಚೂರ್ಣಯಾಮಾಸ ಚೋದ್ಧತಮ್ ।
ಬಾಷ್ಕಲಂ ಭಿಂದಿಪಾಲೇನ ಬಾಣೈಸ್ತಾಮ್ರಂ ತಥಾಽಂಧಕಮ್ ॥ ೧೮ ॥

ಉಗ್ರಾಸ್ಯಮುಗ್ರವೀರ್ಯಂ ಚ ತಥೈವ ಚ ಮಹಾಹನುಮ್ ।
ತ್ರಿನೇತ್ರಾ ಚ ತ್ರಿಶೂಲೇನ ಜಘಾನ ಪರಮೇಶ್ವರೀ ॥ ೧೯ ॥

ಬಿಡಾಲಸ್ಯಾಸಿನಾ ಕಾಯಾತ್ ಪಾತಯಾಮಾಸ ವೈ ಶಿರಃ ।
ದುರ್ಧರಂ ದುರ್ಮುಖಂ ಚೋಭೌ ಶರೈರ್ನಿನ್ಯೇ
ಯಮಕ್ಷಯಮ್ ॥ ೨೦ ॥

ಏವಂ ಸಂಕ್ಷೀಯಮಾಣೇ ತು ಸ್ವಸೈನ್ಯೇ ಮಹಿಷಾಸುರಃ ।
ಮಾಹಿಷೇಣ ಸ್ವರೂಪೇಣ ತ್ರಾಸಯಾಮಾಸ ತಾನ್ ಗಣಾನ್ ॥ ೨೧ ॥

ಕಾಂಶ್ಚಿತ್ತುಂಡಪ್ರಹಾರೇಣ ಖುರಕ್ಷೇಪೈಸ್ತಥಾಽಪರಾನ್ ।
ಲಾಂಗೂಲತಾಡಿತಾಂಶ್ಚಾನ್ಯಾನ್ ಶೃಂಗಾಭ್ಯಾಂ ಚ
ವಿದಾರಿತಾನ್ ॥ ೨೨ ॥

ವೇಗೇನ ಕಾಂಶ್ಚಿದಪರಾನ್ ನಾದೇನ ಭ್ರಮಣೇನ ಚ ।
ನಿಶ್ವಾಸಪವನೇನಾನ್ಯಾನ್ ಪಾತಯಾಮಾಸ ಭೂತಲೇ ॥ ೨೩ ॥

ನಿಪಾತ್ಯ ಪ್ರಮಥಾನೀಕಮಭ್ಯಧಾವತ ಸೋಽಸುರಃ ।
ಸಿಂಹಂ ಹಂತುಂ ಮಹಾದೇವ್ಯಾಃ ಕೋಪಂ ಚಕ್ರೇ
ತತೋಽಂಬಿಕಾ ॥ ೨೪॥

೧೬. ಅನಂತರ ವೇಗದಿಂದ ಆಕಾಶಕ್ಕೇರಿ ಕೆಳಕ್ಕೆ ಬಿದ್ದ ಸಿಂಹದ ಕೈ ಹೊಡೆತದಿಂದ ಚಾಮರಾಸುರನ ರುಂಡವು ಬೇರೆಯಾಯಿತು.

೧೭. ಮತ್ತು ಅದೇ ಯುದ್ಧದಲ್ಲಿ ಉದಗ್ರನೆಂಬ ರಾಕ್ಷಸನು ದೇವಿಯಿಂದ ಕಲ್ಲು-ಮರಗಳೇ ಮೊದಲಾದವುಗಳ ಮೂಲಕ ಹತನಾದನು. ಹಾಗೆಯೇ ಕರಾಲನೆಂಬುವನು ದೇವಿಯ ಹಲ್ಲು-ಮುಷ್ಟಿಪ್ರಹಾರಗಳಿಂದ ಕೆಡಹಲ್ಪಟ್ಟನು.

೧೮. ಕೋಪಾವೇಶದಿಂದ ಕೂಡಿದ ದೇವಿಯು ಗದಾಪ್ರಹಾರಗಳಿಂದ ಉದ್ಧತನೆಂಬ ರಾಕ್ಷಸನನ್ನು ಹುಡಿಹುಡಿ ಮಾಡಿದಳು; ಹಾಗೆಯೇ ಭಿಂದಿಪಾಲವೆಂಬ ಆಯುಧದಿಂದ ಬಾಷ್ಕಲನನ್ನೂ, ಬಾಣಗಳಿಂದ ತಾಮ್ರ, ಅಂಧಕರನ್ನೂ ವಧಿಸಿದಳು.

೧೯. ತ್ರಿನೇತ್ರಳಾದ ಪರಮೇಶ್ವರಿಯು ತ್ರಿಶೂಲದಿಂದ ಉಗ್ರಾಸ್ಯ, ಉಗ್ರವೀರ್ಯ ಮತ್ತು ಮಹಾಹನು (ಎಂಬ ರಾಕ್ಷಸರನ್ನೂ) ಸಂಹರಿಸಿದಳು.

೨೦. (ಹಾಗೆಯೇ) ಬಿಡಾಲನ ಶರೀರದಿಂದ ತಲೆಯನ್ನು ಕತ್ತಿಯಿಂದ ಕೆಡವಿದಳು; ಮತ್ತು ದುರ್ಧರ-ದುರ್ಮುಖರಿಬ್ಬರನ್ನೂ ಬಾಣಗಳಿಂದ ಯಮಸದನಕ್ಕಟ್ಟಿದಳು.

೨೧. ಹೀಗೆ ತನ್ನ ಸೈನ್ಯವೆಲ್ಲವೂ ಕಡಿಮೆಯಾಗುತ್ತಿರುವುದನ್ನು (ಮನಗಂಡು) ಮಹಿಷಾಸುರನು ತನ್ನ ಕೋಣನ ರೂಪದಿಂದ (ದೇವಿಯ) ಆ ಗಣಗಳನ್ನು ಹೆದರಿಸಿದನು.

೨೨. ಕೆಲವರನ್ನು ತನ್ನ ಮೂತಿಯ ಏಟುಗಳಿಂದಲೂ, ಮತ್ತೆ ಕೆಲವರನ್ನು ಗೊರಸಿನ ಏಟುಗಳಿಂದಲೂ, ಇನ್ನು ಕೆಲವರನ್ನು ಬಾಲದ ಏಟುಗಳಿಂದಲೂ (ಬೀಳಿಸಿ), ಇತರರನ್ನು ಕೊಂಬುಗಳಿಂದ ಸೀಳಿದನು.

೨೩. ಇನ್ನು ಕೆಲವರನ್ನು ವೇಗದಿಂದಲೂ, ಗರ್ಜನೆಯಿಂದಲೂ, ಗಿರಗಿರನೆ ತಿರುಗಿಸುವುದರಿಂದಲೂ, ಹಾಗೆಯೇ ಇತರರನ್ನು ಉಸುರಿನ ಗಾಳಿಯಿಂದಲೂ ಭೂಮಿಯಲ್ಲಿ ಕೆಡವಿಹಾಕಿದನು.

೨೪. (ಹೀಗೆ) ಪ್ರಥಮಗಣಗಳ ಸೈನ್ಯವನ್ನು ಬೀಳಿಸಿ ಆ ಅಸುರನು ಮಹಾದೇವಿಯ ಸಿಂಹವನ್ನು ಕೊಲ್ಲಲು ಮುನ್ನುಗ್ಗಿದನು. ಆಗ ಅಂಬಿಕೆಯು ಕೋಪಗೊಂಡಳು.

ಸೋऽಪಿ ಕೋಪಾನ್ಮಹಾವೀರ್ಯಃ ಖುರಕ್ಷುಣ್ಣಮಹೀತಲಃ ।
ಶೃಂಗಾಭ್ಯಾಂ ಪರ್ವತಾನುಚ್ಚಾಂಶ್ಚಿಕ್ಷೇಪ ಚ ನನಾದ ಚ ॥ ೨೫ ॥

ವೇಗಭ್ರಮಣವಿಕ್ಷುಣ್ಣಾ ಮಹೀ ತಸ್ಯ ವ್ಯಶೀರ್ಯತ ।
ಲಾಂಗೂಲೇನಾಹತಶ್ಚಾಬ್ಧಿಃ ಪ್ಲಾವಯಾಮಾಸ ಸರ್ವತಃ ॥ ೨೬ ॥

ಧುತಶೃಂಗವಿಭಿನ್ನಾಶ್ಚ ಖಂಡಂ ಖಂಡಂ ಯಯುರ್ಘನಾಃ ।
ಶ್ವಾಸಾನಿಲಾಸ್ತಾಃ ಶತಶೋ ನಿಪೇತುರ್ನಭಸೋऽಚಲಾಃ ॥ ೨೭ ॥

ಇತಿ ಕ್ರೋಧಸಮಾಧ್ಮಾತಮಾಪತಂತಂ ಮಹಾऽಸುರಮ್ ।
ದೃಷ್ಟ್ವಾ ಸಾ ಚಂಡಿಕಾ ಕೋಪಂ ತದ್ವಧಾಯ ತದಾऽಕರೋತ್ ॥ ೨೮ ॥

ಸಾ ಕ್ಷಿಪ್ತ್ವಾ ತಸ್ಯ ವೈ ಪಾಶಂ ತಂ ಬಬಂಧ ಮಹಾऽಸುರಮ್ ।
ತತ್ಯಾಜ ಮಾಹಿಷಂ ರೂಪಂ ಸೋऽಪಿ ಬದ್ಧೋ ಮಹಾಮೃಧೇ ॥ ೨೯ ॥

ತತಃ ಸಿಂಹೋऽಭವತ್ ಸದ್ಯೋ ಯಾವತ್ತಸ್ಯಾಂಬಿಕಾ ಶಿರಃ ।
ಛಿನತ್ತಿ ತಾವತ್ ಪುರುಷಃ ಖಡ್ಗಪಾಣಿರದೃಶ್ಯತ ॥ ೩೦ ॥

ತತ ಏವಾಶು ಪುರುಷಂ ದೇವೀ ಚಿಚ್ಛೇದ ಸಾಯಕೈಃ ।
ತಂ ಖಡ್ಗಚರ್ಮಣಾ ಸಾರ್ಧಂ ತತಃ ಸೋऽಭೂನ್ಮಹಾಗಜಃ ॥ ೩೧ ॥

ಕರೇಣ ಚ ಮಹಾಸಿಂಹಂ ತಂ ಚಕರ್ಷ ಜಗರ್ಜ ಚ ।
ಕರ್ಷತಸ್ತು ಕರಂ ದೇವೀ ಖಡ್ಗೇನ ನಿರಕೃಂತತ ॥ ೩೨ ॥

ತತೋ ಮಹಾಸುರೋ ಭೂಯೋ ಮಾಹಿಷಂ ವಪುರಾಸ್ಥಿತಃ ।
ತಥೈವ ಕ್ಷೋಭಯಾಮಾಸ ತ್ರೈಲೋಕ್ಯಂ ಸಚರಾಚರಮ್ ॥ ೩೩ ॥

೨೫. ಮಹಾವೀರ್ಯಶಾಲಿಯಾದ ಆವನೂ ಕೂಡ ಕೋಪದಿಂದ ತನ್ನ ಗೊರಸುಗಳ ಮೂಲಕ ಭೂಮಿಯನ್ನು ಪುಡಿಮಾಡುತ್ತ, ಕೊಂಬುಗಳಿಂದ ಎತ್ತರವಾದ ಪರ್ವತಗಳನ್ನು ಎಸೆದನು ಮತ್ತು ಗರ್ಜಿಸಿದನು.

೨೬. ಆವನು ವೇಗವಾಗಿ ತಿರುಗುತ್ತಿದ್ದದ್ದರಿಂದ ಧೂಳಿದ್ದ ಭೂಮಿಯು ಸೀಳಿಹೋಯಿತು. ಆವನ ಬಾಲದೇಟಿನಿಂದ ಸಮುದ್ರವು ಎಲ್ಲ ಕಡೆಗೂ ಉಬ್ಬಿ ಹರಿಯಿತು.

೨೭. (ಆವನ) ಕೊಂಬುಗಳ ಕೊಡವಿಕೆಯಿಂದ ಮೋಡಗಳು ತುಂಡು ತುಂಡಾದವು. (ಆವನ) ನಿಟ್ಟುಸಿರಿನ ಗಾಳಿಯಿಂದ ಬೆಟ್ಟಗಳು ನೂರಾರು (ತುಂಡುಗಳಾಗಿ) ಆಕಾಶದಿಂದ ಬಿದ್ದವು.

೨೮. ಹೀಗೆ ಕೋಪದಿಂದುಬ್ಬಿ ಮೇಲೆ ಬೀಳಲು ಬರುತ್ತಿದ್ದ ಮಹಿಷಾಸುರನನ್ನು ನೋಡಿ ಆ ಚಂಡಿಕೆಯು ಆಗ ಆವನನ್ನು ವಧಿಸಲು (ನಿಶ್ಚಯಿಸಿ) ಕೋಪಗೊಂಡಳು.

೨೯. ಆವಳು ಪಾಶವನ್ನೆಸೆದು ಆ ಮಹಾಸುರನನ್ನು ಬಂಧಿಸಿದಳು. ಈ ಮಹಾಯುದ್ಧದಲ್ಲಿ (ಹೀಗೆ) ಬಂಧಿತನಾದ ಆವನೂ ಕೂಡ ತನ್ನ ಮಾಹಿಷರೂಪವನ್ನು ತ್ಯಜಿಸಿದನು.

೩೦. ಆನಂತರ ಆವನು ಕೂಡಲೇ ಸಿಂಹರೂಪವನ್ನು ತಾಳಿದನು. ಆಂಬಿಕೆಯು ತಲೆಯನ್ನು ಕತ್ತರಿಸುವಷ್ಟರಲ್ಲಿಯೇ ಖಡ್ಗಪಾಣಿಯಾದ ಪುರುಷನಂತೆ ಕಾಣಿಸಿಕೊಂಡನು.

೩೧. ಆ ಕೂಡಲೆ ದೇವಿಯು ಬಾಣಗಳಿಂದ ಆ ಪುರುಷನನ್ನು ಆವನ ಖಡ್ಗ-ಗುರಾಣಿಗಳೊಂದಿಗೆ ಕತ್ತರಿಸಿದಳು. ಆನಂತರ ಆವನು ದೊಡ್ಡ ಆನೆಯಾದನು.

೩೨. (ಆವನು ತನ್ನ) ಸೊಂಡಿಲಿನಿಂದ (ದೇವಿಯ ವಾಹನವಾದ) ಮಹಾಸಿಂಹವನ್ನು ಎಳೆದನು ಮತ್ತು ಘೀಳಿಟ್ಟನು. ಆದರೆ (ಸಿಂಹವನ್ನು) ಎಳೆಯುತ್ತಿದ್ದ ಆ ಸೊಂಡಿಲನ್ನು ದೇವಿಯು ಕತ್ತಿಯಿಂದ ಕತ್ತರಿಸಿ ಹಾಕಿದಳು.

೩೩. ಆನಂತರ ಆ ಮಹಾರಾಕ್ಷಸನು ಪುನಃ ಮಹಿಷಶರೀರವನ್ನು ಆಶ್ರಯಿಸಿ ಮುಂಚಿನಂತೆಯೇ ಚರಾಚರದಿಂದ ಕೂಡಿದ ಮೂಜಗವನ್ನೂ ಕ್ಷೋಭೆಗೊಳಿಸಿದನು.

ತತಃ ಕ್ರುದ್ಧಾ ಜಗನ್ಮಾತಾ ಚಂಡಿಕಾ ಪಾನಮುತ್ತಮಮ್ ।
ಪಪೌ ಪುನಃ ಪುನಶ್ಚೈವ ಜಹಾಸಾರುಣಲೋಚನಾ ॥ ೩೪ ॥

ನನರ್ದ ಚಾಸುರಃ ಸೋಽಪಿ ಬಲವೀರ್ಯಮದೋದ್ಧತಃ ।
ವಿಷಾಣಾಭ್ಯಾಂ ಚ ಚಿಕ್ಷೇಪ ಚಂಡಿಕಾಂ ಪ್ರತಿ ಭೂಧರಾನ್ ॥ ೩೫ ॥

ಸಾ ಚ ತಾನ್ ಪ್ರಹಿತಾಂಸ್ತೇನ ಚೂರ್ಣಯಂತೀ ಶರೋತ್ಕರೈಃ ।
ಉವಾಚ ತಂ ಮದೋದ್ಧೂತಮುಖರಾಗಾಕುಲಾಕ್ಷರಮ್ ॥ ೩೬ ॥

ದೇವ್ಯುವಾಚ ॥ ೩೭ ॥

ಗರ್ಜ ಗರ್ಜ ಕ್ಷಣಂ ಮೂಢ ಮಧು ಯಾವತ್ಪಿಬಾಮ್ಯಹಮ್ ।
ಮಯಾ ತ್ವಯಿ ಹತೇಽತ್ರೈವ ಗರ್ಜಿಷ್ಯಂತ್ಯಾಶು ದೇವತಾಃ ॥ ೩೮ ॥

ಋಷಿರುವಾಚ ॥ ೩೯ ॥

ಏವಮುಕ್ತ್ವಾ ಸಮುತ್ಪತ್ಯ ಸಾಽಽರೂಢಾ ತಂ ಮಹಾಽಸುರಮ್ ।
ಪಾದೇನಾಕ್ರಮ್ಯ ಕಂಠೇ ಚ ಶೂಲೇನೈನಮತಾಡಯತ್ ॥ ೪೦ ॥

ತತಃ ಸೋಽಪಿ ಪದಾಕ್ರಾಂತಸ್ತಯಾ ನಿಜಮುಖಾತ್ತದಾ ।
ಅರ್ಧನಿಷ್ಕ್ರಾಂತ ಏವಾಸೀದ್ದೇವ್ಯಾ ವೀರ್ಯೇಣ ಸಂವೃತಃ ॥ ೪೧ ॥

ಅರ್ಧನಿಷ್ಕ್ರಾಂತ ಏವಾಸೌ ಯುಧ್ಯಮಾನೋ ಮಹಾಽಸುರಃ ।
ತಯಾ ಮಹಾಽಸಿನಾ ದೇವ್ಯಾ ಶಿರಶ್ಛಿತ್ತ್ವಾ ನಿಪಾತಿತಃ ॥ ೪೨ ॥

ತತೋ ಹಾಹಾಕೃತಂ ಸರ್ವಂ ದೈತ್ಯಸೈನ್ಯಂ ನನಾಶ ತತ್ ।
ಪ್ರಹರ್ಷಂ ಚ ಪರಂ ಜಗ್ಮುಃ ಸಕಲಾ ದೇವತಾಗಣಾಃ ॥ ೪೩ ॥

ತುಷ್ಟುವುಸ್ತಾಂ ಸುರಾ ದೇವೀಂ ಸಹ ದಿವ್ಯೈರ್ಮಹರ್ಷಿಭಿಃ ।
ಜಗುರ್ಗಂಧರ್ವಪತಯೋ ನನೃತುಶ್ಚಾಪ್ಸರೋಗಣಾಃ ॥ ೪೪ ॥

ಇತಿ ಶ್ರೀಮಾರ್ಕಂಡೇಯಪುರಾಣೇ ಸಾವರ್ಣಿಕೇ ಮನ್ವಂತರೇ ದೇವೀಮಾಹಾತ್ಮ್ಯೇ
ಮಹಿಷಾಸುರವಧೋ ನಾಮ ತೃತೀಯೋಽಧ್ಯಾಯಃ

೩೪. ಅನಂತರ ಕೋಪಗೊಂಡಿದ್ದ ಜಗನ್ಮಾತೆ ಚಂಡಿಕೆಯು ಅತ್ಯುತ್ಕೃಷ್ಟವಾದ ಪಾನವನ್ನು ಪುನಃ ಪುನಃ ಕುಡಿಯುತ್ತ ಕೆಂಗಣ್ಣುಳ್ಳವಳಾಗಿ ಅಟ್ಟಹಾಸ ಮಾಡಿದಳು.

೩೫. ಬಲದಿಂದಲೂ, ವೀರ್ಯದಿಂದಲೂ, ಮದಿಸಿ ಉದ್ಧತನಾಗಿದ್ದ ಆ ರಾಕ್ಷಸನೂ ಕೂಡ ಗರ್ಜಿಸಿದನು; ಮತ್ತು ಚಂಡಿಕೆಯ ಮೇಲೆ ಪರ್ವತಗಳನ್ನು ತನ್ನ ಕೊಂಬುಗಳಿಂದ ಕಿತ್ತೆಸೆದನು.

೩೬. ಅವಳೂ ಕೂಡ ಅವನಿಂದ ಎಸೆಯಲ್ಪಟ್ಟ ಆ ಪರ್ವತಗಳನ್ನು ಬಾಣವರ್ಷಗಳಿಂದ ಪುಡಿಪುಡಿ ಮಾಡುತ್ತ, ಮದದಿಂದ ಕೆಂಪಾದ ಮುಖವುಳ್ಳ ಮತ್ತು ತೊದಲುಮಾತುಳ್ಳ ಅವನನ್ನು ಕುರಿತು ಹೀಗೆಂದಳು.

೩೭-೩೮. ದೇವಿಯು ಹೇಳಿದಳು: ಎಲವೋ ಮೂಢನೇ, ನಾನು ಮಧುವನ್ನು ಕುಡಿಯುವವರೆಗೂ ಕ್ಷಣಕಾಲ ಗರ್ಜಿಸುತ್ತಿರು. ನನ್ನಿಂದ ನೀನು ಇಲ್ಲಿಯೇ ಕೊಲ್ಲಲ್ಪಟ್ಟ ಕೂಡಲೇ ದೇವತೆಗಳು ಗರ್ಜಿಸುವರು.

೩೯-೪೦. ಋಷಿಯು ಇಂತೆಂದನು: ಹೀಗೆ ಹೇಳಿ ಆ ದೇವಿಯು ಮೇಲೆ ಹಾರಿ, ಆ ಮಹಾಸುರನ ಮೇಲೇರಿ ಪಾದಗಳಿಂದ ಮೆಟ್ಟಿ ತುಳಿದು, ಅವನನ್ನು ಕತ್ತಿನಲ್ಲಿ ಶೂಲದಿಂದ ಇರಿದಳು.

೪೧. ಅನಂತರ ಅವನೂ ಕೂಡ ಆಕೆಯ ಪಾದದಿಂದ ಹೀಗೆ ಮೆಟ್ಟಲ್ಪಟ್ಟು, ತನ್ನ ಮಹಿಷರೂಪದ ಮುಖದಿಂದ ಹೊರಕ್ಕೆ ಅರ್ಧ ಬಂದಿರುವಾಗಲೇ ದೇವಿಯ ಪರಾಕ್ರಮಕ್ಕೊಳಗಾದನು.

೪೨. ಹೀಗೆ ಅರ್ಧ ಮಾತ್ರ ಹೊರಬಂದಿದ್ದ ಆ ರಾಕ್ಷಸನು ಯುದ್ಧ ಮಾಡುತ್ತಿರುವಾಗಲೇ ದೇವಿಯು ತನ್ನ ದೊಡ್ಡ ಕತ್ತಿಯಿಂದ ಅವನ ತಲೆಯನ್ನು ಕಡಿದು ಬೀಳಿಸಿದಳು.

೪೩. ಆಗ ರಾಕ್ಷಸಸೈನ್ಯವೆಲ್ಲವೂ ಹಾಹಾಕಾರ ಮಾಡುತ್ತ ನಾಶವನ್ನು ಹೊಂದಿತು. ಎಲ್ಲಾ ದೇವಗಣಗಳೂ ಅತ್ಯಂತ ಹರ್ಷವನ್ನು ಹೊಂದಿದವು.

೪೪. ದಿವ್ಯವಾದ ಮಹರ್ಷಿಗಳಿಂದ ಕೂಡಿ ದೇವತೆಗಳು ಆ ದೇವಿಯನ್ನು ಸ್ತುತಿಸಿದರು. ಗಂಧರ್ವರಾಜರು (ಗುಣಗಾನವನ್ನು) ಹಾಡಿದರು. ಅಪ್ಸರ ಗಣಗಳು ನರ್ತನ ಮಾಡಿದವು.

ಹೀಗೆ ಸಾವರ್ಣಿಕಮನ್ವಂತರಕ್ಕೆ ಸೇರಿದ ಮಾರ್ಕಂಡೇಯಪುರಾಣದಲ್ಲಿ ದೇವೀಮಾಹಾತ್ಮ್ಯದ 'ಮಹಿಷಾಸುರವಧೆ' ಎಂಬ ಮೂರನೆಯ ಅಧ್ಯಾಯವು ಮುಗಿಯಿತು.

# ಚತುರ್ಥೋಽಧ್ಯಾಯಃ

## ಇಂದ್ರಾದಿಸ್ತುತಿಃ

### ಧ್ಯಾನಮ್

ಓಮ್ । ಕಾಲಾಭ್ರಾಭಾಂ ಕಟಾಕ್ಷೈರರಿಕುಲಭಯದಾಂ ಮೌಲಿಬದ್ಧೇಂದುರೇಖಾಂ, ಶಂಖಂ ಚಕ್ರಂ ಕೃಪಾಣಂ ತ್ರಿಶಿಖಮಪಿ ಕರೈರುದ್ವಹಂತೀಂ ತ್ರಿನೇತ್ರಾಮ್ । ಸಿಂಹಸ್ಕಂಧಾಧಿರೂಢಾಂ ತ್ರಿಭುವನಮಖಿಲಂ ತೇಜಸಾ ಪೂರಯಂತೀಂ, ಧ್ಯಾಯೇದ್ದುರ್ಗಾಂ ಜಯಾಖ್ಯಾಂ ತ್ರಿದಶಪರಿವೃತಾಂ ಸೇವಿತಾಂ ಸಿದ್ಧಿಕಾಮೈಃ ॥

ಋಷಿರುವಾಚ ॥ ೧ ॥

ಶಕ್ರಾದಯಃ ಸುರಗಣಾ ನಿಹತೇಽತಿವೀರ್ಯೇ
ತಸ್ಮಿನ್ ದುರಾತ್ಮನಿ ಸುರಾರಿಬಲೇ ಚ ದೇವ್ಯಾ ।
ತಾಂ ತುಷ್ಟುವುಃ ಪ್ರಣತಿನಮ್ರಶಿರೋಧರಾಂಸಾ
ವಾಗ್ಭಿಃ ಪ್ರಹರ್ಷಪುಲಕೋದ್ಗಮಚಾರುದೇಹಾಃ ॥ ೨ ॥

ದೇವ್ಯಾ ಯಯಾ ತತಮಿದಂ ಜಗದಾತ್ಮಶಕ್ತ್ಯಾ
ನಿಶ್ಶೇಷದೇವಗಣಶಕ್ತಿಸಮೂಹಮೂರ್ತ್ಯಾ ।
ತಾಮಂಬಿಕಾಮಖಿಲದೇವಮಹರ್ಷಿಪೂಜ್ಯಾಂ
ಭಕ್ತ್ಯಾ ನತಾಃ ಸ್ಮ ವಿದಧಾತು ಶುಭಾನಿ ಸಾ ನಃ ॥ ೩ ॥

ಯಸ್ಯಾಃ ಪ್ರಭಾವಮತುಲಂ ಭಗವಾನನಂತೋ
ಬ್ರಹ್ಮಾ ಹರಶ್ಚ ನ ಹಿ ವಕ್ತುಮಲಂ ಬಲಂ ಚ ।
ಸಾ ಚಂಡಿಕಾಽಖಿಲಜಗತ್ಪರಿಪಾಲನಾಯ
ನಾಶಾಯ ಚಾಶುಭಭಯಸ್ಯ ಮತಿಂ ಕರೋತು ॥ ೪ ॥

# ನಾಲ್ಕನೆಯ ಅಧ್ಯಾಯ

## ಇಂದ್ರಾದಿಗಳ ಸ್ತುತಿ

### ಧ್ಯಾನ

ಕಪ್ಪು ಮೋಡದ ಕಾಂತಿಯನ್ನು ಹೊಂದಿರುವ, ತನ್ನ ಕಟಾಕ್ಷಗಳಿಂದ ಶತ್ರುಸಮೂಹಕ್ಕೆ ಭಯವನ್ನುಂಟುಮಾಡುತ್ತಿರುವ, ಶಿರದಲ್ಲಿ ಬಾಲಚಂದ್ರನನ್ನು ಧರಿಸಿರುವ, ತನ್ನ ಕೈಗಳಲ್ಲಿ ಶಂಖ-ಚಕ್ರ-ಕೃಪಾಣ-ತ್ರಿಶೂಲಗಳನ್ನು ಎತ್ತಿ ಹಿಡಿದಿರುವ, ತ್ರಿಲೋಚನಳಾದ, ಸಿಂಹದ ಹೆಗಲ ಮೇಲೆ ಏರಿ ಕುಳಿತಿರುವ, ತನ್ನ ತೇಜಸ್ಸಿನಿಂದ ತ್ರಿಭುವನಗಳನ್ನು ಸಂಪೂರ್ಣವಾಗಿ ತುಂಬಿರುವ, ಸಿದ್ಧಿಕಾಮರಿಂದ ಸೇವಿಸಲ್ಪಡುತ್ತಿರುವ, ದೇವತೆಗಳಿಂದ ಸುತ್ತುವರಿಯಲ್ಪಟ್ಟಿರುವ, 'ಜಯಾ' ಎಂಬ ದುರ್ಗಾದೇವಿಯನ್ನು ಧ್ಯಾನಿಸತಕ್ಕದ್ದು.

೧-೨. ಋಷಿಯು ಇಂತೆಂದನು: ಅತ್ಯಂತ ವೀರ್ಯಶಾಲಿಯೂ (ಆದರೆ) ದುರಾತ್ಮನೂ ಆದ ಆ ಮಹಿಷಾಸುರನೂ ಮತ್ತು ಅವನ ರಾಕ್ಷಸ ಸೇನೆಯೂ ದೇವಿಯಿಂದ ಸಂಹರಿಸಲ್ಪಟ್ಟಮೇಲೆ ಇಂದ್ರನೇ ಮೊದಲಾದ ದೇವತೆಗಳು ನಮಸ್ಕಾರದಿಂದ ಬಗ್ಗಿದ ಕತ್ತು-ಹೆಗಲುಗಳುಳ್ಳವರಾಗಿ, ಅತ್ಯಂತ ಹೆಚ್ಚಿನ ಸಂತೋಷದಿಂದುಂಟಾದ ರೋಮಾಂಚನದಿಂದ ಸುಂದರವಾದ ದೇಹವುಳ್ಳವ ರಾಗಿ ಆ ದೇವಿಯನ್ನು ಈ ಮಾತುಗಳಿಂದ ಸ್ತುತಿಸಿದರು.

೩. ಎಲ್ಲ ದೇವಗಣಗಳ ಶಕ್ತಿಸಮೂಹದ ಮೂರ್ತಿಯಾದ ಯಾವ ದೇವಿಯ ಆತ್ಮಶಕ್ತಿಯಿಂದ ಈ ಜಗತ್ತೆಲ್ಲವೂ ವ್ಯಾಪ್ತವಾಗಿದೆಯೋ ಅಂತಹ, ಸಮಸ್ತ ದೇವಮಹರ್ಷಿಗಳಿಗೆ ಪೂಜ್ಯಳಾದ ಅಂಬಿಕೆಯನ್ನು ಭಕ್ತಿಯಿಂದ ನಮಸ್ಕರಿಸುತ್ತೇವೆ; ಆಕೆಯ ನಮಗೆ ಶುಭವನ್ನುಂಟುಮಾಡಲಿ.

೪. ಯಾವಾಕೆಯ ಅಸದೃಶವಾದ ಪ್ರಭಾವವನ್ನಾಗಲಿ, ಬಲವನ್ನಾಗಲಿ ಭಗವಂತನಾದ ವಿಷ್ಣು, ಬ್ರಹ್ಮ ಮತ್ತು ರುದ್ರ- ಇವರೂ ವರ್ಣಿಸಲಾರರೊ, ಅಂತಹ ಚಂಡಿಕಾದೇವಿಯು ಸಮಸ್ತ ಪ್ರಪಂಚವನ್ನು ಕಾಪಾಡುವುದಕ್ಕೋಸ್ಕರ ಮತ್ತು ಅಮಂಗಳದಿಂದ ಉಂಟಾಗುವ ಭಯವನ್ನು ಪರಿಹರಿಸುವುದಕ್ಕೋಸ್ಕರ ಮನಸ್ಸು ಮಾಡಲಿ.

ಯಾ ಶ್ರೀಃ ಸ್ವಯಂ ಸುಕೃತಿನಾಂ ಭವನೇಷ್ವಲಕ್ಷ್ಮೀಃ
ಪಾಪಾತ್ಮನಾಂ ಕೃತಧಿಯಾಂ ಹೃದಯೇಷು ಬುದ್ಧಿಃ ।
ಶ್ರದ್ಧಾ ಸತಾಂ ಕುಲಜನಪ್ರಭವಸ್ಯ ಲಜ್ಜಾ
ತಾಂ ತ್ವಾಂ ನತಾಃ ಸ್ಮ ಪರಿಪಾಲಯ ದೇವಿ ವಿಶ್ವಮ್ ॥ ೫ ॥

ಕಿಂ ವರ್ಣಯಾಮ ತವ ರೂಪಮಚಿಂತ್ಯಮೇತತ್
ಕಿಂ ಚಾತಿವೀರ್ಯಮಸುರಕ್ಷಯಕಾರಿ ಭೂರಿ ।
ಕಿಂ ಚಾಹವೇಷು ಚರಿತಾನಿ ತವಾತಿ ಯಾನಿ
ಸರ್ವೇಷು ದೇವ್ಯಸುರದೇವಗಣಾದಿಕೇಷು ॥ ೬ ॥

ಹೇತುಃ ಸಮಸ್ತಜಗತಾಂ ತ್ರಿಗುಣಾಽಪಿ ದೋಷೈಃ
ನ ಜ್ಞಾಯಸೇ ಹರಿಹರಾದಿಭಿರಪ್ಯಪಾರಾ ।
ಸರ್ವಾಶ್ರಯಾಽಖಿಲಮಿದಂ ಜಗದಂಶಭೂತ-
ಮವ್ಯಾಕೃತಾ ಹಿ ಪರಮಾ ಪ್ರಕೃತಿಸ್ತ್ವಮಾದ್ಯಾ ॥ ೭ ॥

ಯಸ್ಯಾಃ ಸಮಸ್ತಸುರತಾ ಸಮುದೀರಣೇನ
ತೃಪ್ತಿಂ ಪ್ರಯಾತಿ ಸಕಲೇಷು ಮಖೇಷು ದೇವಿ ।
ಸ್ವಾಹಾಽಸಿ ವೈ ಪಿತೃಗಣಸ್ಯ ಚ ತೃಪ್ತಿಹೇತು-
ರುಚ್ಚಾರ್ಯಸೇ ತ್ವಮತ ಏವ ಜನೈಃ ಸ್ವಧಾ ಚ ॥ ೮ ॥

ಯಾ ಮುಕ್ತಿಹೇತುರವಿಚಿಂತ್ಯಮಹಾವ್ರತಾ ತ್ವಮ್
ಅಭ್ಯಸ್ಯಸೇ ಸುನಿಯತೇಂದ್ರಿಯತತ್ತ್ವಸಾರೈಃ ।
ಮೋಕ್ಷಾರ್ಥಿಭಿರ್ಮುನಿಭಿರಸ್ತಸಮಸ್ತದೋಷೈ-
ರ್ವಿದ್ಯಾಽಸಿ ಸಾ ಭಗವತೀ ಪರಮಾ ಹಿ ದೇವಿ ॥ ೯ ॥

೫. ಯಾವ ದೇವಿಯು ಪುಣ್ಯವಂತರ ಮನೆಯಲ್ಲಿ ಲಕ್ಷ್ಮೀ ಸ್ವರೂಪಳಾಗಿರುವಳೋ, ಪಾಪಿಗಳ ಗೃಹದಲ್ಲಿ ಅಲಕ್ಷ್ಮೀರೂಪಳಾಗಿರುವಳೋ, ಸುಸಂಸ್ಕೃತರ ಹೃದಯದಲ್ಲಿ ನಿಶ್ಚಯಾತ್ಮಿಕ ಬುದ್ಧಿಯಾಗಿರುವಳೋ, ಸಜ್ಜನರಲ್ಲಿ ಶ್ರದ್ಧೆಯಾಗಿರುವಳೋ, ಸದ್ವಂಶಜರಲ್ಲಿ ಲಜ್ಜೆಯಾಗಿರುವಳೋ ಅಂತಹ ನಿನ್ನನ್ನು ನಮಸ್ಕರಿಸುತ್ತೇವೆ. ಹೇ ದೇವಿ, ಪ್ರಪಂಚವನ್ನು ಕಾಪಾಡು !

೬. ಹೇ ದೇವಿ, ನಿನ್ನ ಅಚಿಂತ್ಯರೂಪವನ್ನಾಗಲಿ, ಅಸುರನಾಶಕಾರಿಯಾದ ನಿನ್ನ ಮಹಾಪರಾಕ್ರಮವನ್ನಾಗಲಿ, ದೇವಾಸುರಗಣಗಳ ಯುದ್ಧದಲ್ಲಿ ನಿನ್ನ ಅತ್ಯದ್ಭುತವಾದ ಕರ್ಮಗಳನ್ನಾಗಲಿ ನಾನು ಹೇಗೆ ಬಣ್ಣಿಸಲಿ !

೭. ಸಮಸ್ತ ಜಗತ್ತುಗಳ ಕಾರಣಳು ನೀನೇ; ನೀನು ತ್ರಿಗುಣೆಯಾದರೂ ಅವುಗಳ ದೋಷಗಳಿಂದ (ಲಿಪ್ತಳಾಗಿಲ್ಲ). ಹರಿಹರಾದಿಗಳೂ ನಿನ್ನನ್ನು ಅರಿಯರಾರರು; (ಏಕೆಂದರೆ ನೀನು) ಅಪಾರಳು, ನೀನು ಸರ್ವಾಶ್ರಯಳು. ಈ ಜಗತ್ತೆಲ್ಲವೂ ನಿನ್ನ ಅಂಶಮಾತ್ರವಾಗಿದೆ. ನೀನೇ ಅವ್ಯಾಕೃತಳು, ಪರಮ ಪ್ರಕೃತಿಯು, ಸರ್ವಮೂಲಳು.

೮. ಹೇ ದೇವಿ, ಯಾವುದರ ಉಚ್ಚಾರಣೆಯಿಂದ ಎಲ್ಲ ಯಜ್ಞಗಳಲ್ಲಿಯೂ ಸಮಸ್ತ ದೇವಗಣಗಳೂ ಸಂತೃಪ್ತಿಯನ್ನು ಹೊಂದುವುವೋ, ಅಂತಹ 'ಸ್ವಾಹಾ' ಮಂತ್ರವೇ ನೀನು. ಪಿತೃಗಣಗಳಿಗೆ ತೃಪ್ತಿಯನ್ನುಂಟು ಮಾಡಲು ಕಾರಣಳಾದವಳೂ ನೀನೇ. ಆದುದರಿಂದಲೇ ಜನರಿಂದ ನೀನು 'ಸ್ವಧಾ' ಎಂದು ಉಚ್ಚರಿಸಲ್ಪಡುತ್ತೀಯೆ.

೯. ಹೇ ದೇವಿ, ಯಾವುದು ಮುಕ್ತಿಗೆ ಕಾರಣವಾಗಿರುವುದೋ, ಯಾವುದು ಎಣಿಸಲಾರದಷ್ಟು ಕಷ್ಟವಾದ ಮಹಾವ್ರತರೂಪವಾಗಿರುವುದೋ, ಜಿತೇಂದ್ರಿಯರೂ, ತತ್ತ್ವಸಾರವನ್ನರಿತಿರುಪವರೂ, ಮೋಕ್ಷಾಕಾಂಕ್ಷಿಗಳೂ, ಸಮಸ್ತದೋಷಶೂನ್ಯರೂ ಆದ ಮುನಿಗಳಿಂದ ಯಾವುದು ಅಭ್ಯಸಿಸಲ್ಪಡುತ್ತಿರುವುದೋ - ಹೇ ಭಗವತಿ - ಆ ಪರಾವಿದ್ಯೆಯೂ ನೀನೇ ಆಗಿರುವೆ.

ಶಬ್ದಾತ್ಮಿಕಾ ಸುವಿಮಲರ್ಗ್ಯಜುಷಾಂ ನಿಧಾನಮ್
ಉದ್ಗೀಥರಮ್ಯಪದಪಾಠವತಾಂ ಚ ಸಾಮ್ನಾಮ್ ।
ದೇವೀ ತ್ರಯೀ ಭಗವತೀ ಭವಭಾವನಾಯ
ವಾರ್ತಾ ಚ ಸರ್ವಜಗತಾಂ ಪರಮಾರ್ತಿಹಂತ್ರೀ ॥ ೧೦ ॥

ಮೇಧಾಽಸಿ ದೇವಿ ವಿದಿತಾಖಿಲಶಾಸ್ತ್ರಸಾರಾ
ದುರ್ಗಾಽಸಿ ದುರ್ಗಭವಸಾಗರನೌರಸಂಗಾ ।
ಶ್ರೀಃ ಕೈಟಭಾರಿಹೃದಯೈಕಕೃತಾಧಿವಾಸಾ
ಗೌರೀ ತ್ವಮೇವ ಶಶಿಮೌಲಿಕೃತಪ್ರತಿಷ್ಠಾ ॥ ೧೧ ॥

ಈಷತ್ಸಹಾಸಮಮಲಂ ಪರಿಪೂರ್ಣಚಂದ್ರ-
ಬಿಂಬಾನುಕಾರಿ ಕನಕೋತ್ತಮಕಾಂತಿಕಾಂತಮ್ ।
ಅತ್ಯದ್ಭುತಂ ಪ್ರಹೃತಮಾತ್ತರುಷಾ ತಥಾಽಪಿ
ವಕ್ತ್ರಂ ವಿಲೋಕ್ಯ ಸಹಸಾ ಮಹಿಷಾಸುರೇಣ ॥ ೧೨ ॥

ದೃಷ್ಟ್ವಾ ತು ದೇವಿ ಕುಪಿತಂ ಭ್ರುಕುಟೀಕರಾಲಮ್
ಉದ್ಯಚ್ಛಶಾಂಕಸದೃಶಚ್ಛವಿ ಯನ್ನ ಸದ್ಯಃ ।
ಪ್ರಾಣಾನ್ಮುಮೋಚ ಮಹಿಷಸ್ತದತೀವ ಚಿತ್ರಂ
ಕೈರ್ಜೀವ್ಯತೇ ಹಿ ಕುಪಿತಾಂತಕದರ್ಶನೇನ ॥ ೧೩ ॥

ದೇವಿ ಪ್ರಸೀದ ಪರಮಾ ಭವತೀ ಭವಾಯ
ಸದ್ಯೋ ವಿನಾಶಯಸಿ ಕೋಪವತೀ ಕುಲಾನಿ ।
ವಿಜ್ಞಾತಮೇತದಧುನೈವ ಯದಸ್ತಮೇತ-
ನ್ನೀತಂ ಬಲಂ ಸುವಿಪುಲಂ ಮಹಿಷಾಸುರಸ್ಯ ॥ ೧೪ ॥

೧೦. ನೀನು ಶಬ್ದಸ್ವರೂಪಳು. ನೀನೇ ಅತಿ ನಿರ್ಮಲವಾದ ಋಗ್ವೇದ ಮತ್ತು ಯಜುರ್ವೇದಗಳಿಗೆ ಆಶ್ರಯಳು. ಉದ್ಗೀಥದಿಂದಲೂ, ರಮ್ಯವಾದ ಪದ ಪಾಠಗಳಿಂದಲೂ ಕೂಡಿದ ಸಾಮವೇದದ (ಆಶ್ರಯವೂ ನೀನೇ). ಪ್ರಕಾಶ ಸ್ವರೂಪಳೂ, ವೇದಮಾತೆಯೂ, ಷಡ್ಗುಣೈಶ್ವರ್ಯಸಂಪನ್ನಳೂ ನೀನೇ. ಜಗತ್ತಿನ ಪಾಲನೆಗೆ ಬೇಕಾದ ಲೌಕಿಕಶಾಸ್ತ್ರಗಳೂ ನೀನೇ; ಮತ್ತು ಸರ್ವ ಜಗತ್ತುಗಳ ದುಃಖನಾಶಕಳೂ ನೀನೇ.

೧೧. ಹೇ ದೇವಿ, ಯಾವುದರಿಂದ ಸಕಲ ಶಾಸ್ತ್ರಗಳ ಸಾರವನ್ನು ತಿಳಿಯಬಹುದೊ, ಆ ಮೇಧಾಶಕ್ತಿಯು ನೀನೇ, ದುರ್ಗಮವಾದ ಭವಸಾಗರವನ್ನು ದಾಟಲು ನೌಕೆಯಂತಿರುವ ದುರ್ಗಾದೇವಿಯೂ ನೀನೇ. ನೀನು ಅಸಂಗಳು; ಮಧುಕೈಟಭಶತ್ರುವಾದ (ವಿಷ್ಣುವಿನ) ಹೃದಯವನ್ನೇ ವಾಸಸ್ಥಾನವನ್ನಾಗಿ ಮಾಡಿಕೊಂಡಿರುವ ಲಕ್ಷ್ಮಿಯೂ ನೀನೇ. ಚಂದ್ರಶೇಖರ ಶಿವನೊಂದಿಗೆ ಪ್ರತಿಷ್ಠಿತಳಾದ ಗೌರಿಯೂ ನೀನೇ.

೧೨. ಮಂದಹಾಸಯುಕ್ತವೂ, ನಿರ್ಮಲವೂ, ಪರಿಪೂರ್ಣಚಂದ್ರ ಬಿಂಬದಂತಿರುವುದೂ, ಉತ್ತಮಸ್ವರ್ಣಕಾಂತಿಯಂತೆ ಕಮನೀಯವೂ ಆದ ನಿನ್ನ ಮುಖವನ್ನು ನೋಡಿದರೂ ಕ್ರೋಧಾಕುಲನಾದ ಮಹಿಷಾಸುರನು ನಿನ್ನನ್ನು ಹಠಾತ್ತಾಗಿ ಹೊಡೆದುದು ಆಶ್ಚರ್ಯವೇ ಸರಿ!

೧೩. ಹೇ ದೇವಿ, ಕೋಪಗೊಂಡಿರುವ, ಹುಬ್ಬುಗಂಟಿನಿಂದ ಭಯಂಕರ ವಾಗಿರುವ, ಉದಯಿಸುತ್ತಿರುವ ಚಂದ್ರನಂತೆ ತೇಜೋಮಯವಾದ, ಯಾವ (ನಿನ್ನ ಮುಖವನ್ನು) ನೋಡಿಯೂ ಮಹಿಷಾಸುರನು ಕೂಡಲೇ ಪ್ರಾಣಗಳನ್ನು ಬಿಡಲಿಲ್ಲವೆಂದಮೇಲೆ ಅದು ಬಹುವಿಚಿತ್ರವೇ ಸರಿ! ಏಕೆಂದರೆ ಕುಪಿತನಾದ ಯಮನನ್ನು ನೋಡಿ ಯಾರು ತಾನೇ ಬದುಕಬಲ್ಲರು?

೧೪. ದೇವಿಯೇ, ಪ್ರಸನ್ನಳಾಗು. ಪರಮಸ್ವರೂಪಳಾದ ನೀನು (ಪ್ರಸನ್ನಳಾದರೆ) ಪ್ರಪಂಚದ (ಉದ್ಧಾರಕ್ಕಾಗಿ ಆಗುವೆ); ಕೋಪಗೊಂಡರೆ ವಂಶಗಳನ್ನು ಕೂಡಲೇ ನಾಶಮಾಡುವೆ; ಮಹಿಷಾಸುರನ ವಿಪುಲ ಸೈನ್ಯವೆಲ್ಲವೂ ನಾಶವಾಗಿರುವುದರಿಂದಲೇ, ಇದು ನಮಗೆ ಈಗ ತಾನೆ ತಿಳಿದು ಬಂದಿತು.

ತೇ ಸಂಮತಾ ಜನಪದೇಷು ಧನಾನಿ ತೇಷಾಂ
ತೇಷಾಂ ಯಶಾಂಸಿ ನ ಚ ಸೀದತಿ ಧರ್ಮವರ್ಗಃ ।
ಧನ್ಯಾಸ್ತ ಏವ ನಿಭೃತಾತ್ಮಜಭೃತ್ಯದಾರಾ
ಯೇಷಾಂ ಸದಾಽಭ್ಯುದಯದಾ ಭವತೀ ಪ್ರಸನ್ನಾ ॥ ೧೫ ॥

ಧರ್ಮ್ಯಾಣಿ ದೇವಿ ಸಕಲಾನಿ ಸದೈವ ಕರ್ಮಾ-
ಣ್ಯತ್ಯಾದೃತಃ ಪ್ರತಿದಿನಂ ಸುಕೃತೀ ಕರೋತಿ ।
ಸ್ವರ್ಗಂ ಪ್ರಯಾತಿ ಚ ತತೋ ಭವತೀಪ್ರಸಾದಾ-
ಲ್ಲೋಕತ್ರಯೇಽಪಿ ಫಲದಾ ನನು ದೇವಿ ತೇನ ॥ ೧೬ ॥

ದುರ್ಗೇ ಸ್ಮೃತಾ ಹರಸಿ ಭೀತಿಮಶೇಷಜಂತೋಃ
ಸ್ವಸ್ಥೈಃ ಸ್ಮೃತಾ ಮತಿಮತೀವ ಶುಭಾಂ ದದಾಸಿ ।
ದಾರಿದ್ರ್ಯದುಃಖಭಯಹಾರಿಣಿ ಕಾ ತ್ವದನ್ಯಾ
ಸರ್ವೋಪಕಾರಕರಣಾಯ ಸದಾಽಽರ್ದ್ರಚಿತ್ತಾ ॥ ೧೭ ॥

ಏಭಿರ್ಹತೈರ್ಜಗದುಪೈತಿ ಸುಖಂ ತಥೈತೇ
ಕುರ್ವಂತು ನಾಮ ನರಕಾಯ ಚಿರಾಯ ಪಾಪಮ್ ।
ಸಂಗ್ರಾಮಮೃತ್ಯುಮಧಿಗಮ್ಯ ದಿವಂ ಪ್ರಯಾಂತು
ಮತ್ವೇತಿ ನೂನಮಹಿತಾನ್ ವಿನಿಹಂಸಿ ದೇವಿ ॥ ೧೮ ॥

ದೃಷ್ಟ್ವೈವ ಕಿಂ ನ ಭವತೀ ಪ್ರಕರೋತಿ ಭಸ್ಮ
ಸರ್ವಾಸುರಾನರಿಷು ಯತ್ಪ್ರಹಿಣೋಷಿ ಶಸ್ತ್ರಮ್ ।
ಲೋಕಾನ್ಪ್ರಯಾಂತು ರಿಪವೋಽಪಿ ಹಿ ಶಸ್ತ್ರಪೂತಾ
ಇತ್ಥಂ ಮತಿರ್ಭವತಿ ತೇಷ್ವಪಿ ತೇಽತಿಸಾಧ್ವೀ ॥ ೧೯ ॥

೧೫. ನೀನು ಯಾರ ವಿಷಯದಲ್ಲಿ ಯಾವಾಗಲೂ ಅಭ್ಯುದಯವನ್ನು ಕೊಡುವವಳೂ ಪ್ರಸನ್ನಳೂ ಆಗುತ್ತೀಯೋ ಅವರು ಎಲ್ಲಾ ದೇಶಗಳಲ್ಲಿಯೂ ಗೌರವಿಸಲ್ಪಡುತ್ತಾರೆ, ಐಶ್ವರ್ಯ-ಯಶಸ್ಸುಗಳು ಅವರಿಗೆ ದೊರಕುತ್ತವೆ. ಅವರ ಧರ್ಮಾರ್ಥಕಾಮಮೋಕ್ಷಗಳಿಗೆ ಹಾನಿಯಿರುವುದಿಲ್ಲ. ಅವರೇ ಮಡದಿ-ಮಕ್ಕಳು-ಸೇವಕರೊಂದಿಗೆ ಬಾಳುತ್ತ ಧನ್ಯರಾಗುತ್ತಾರೆ.

೧೬. ಹೇ ದೇವಿ, ಪುಣ್ಯಾತ್ಮನು ಯಾವಾಗಲೂ ಅತ್ಯಾದರದಿಂದ ಧರ್ಮವಿಹಿತವಾದ ಕರ್ಮಗಳನ್ನು ಪ್ರತಿದಿನವೂ ಮಾಡುತ್ತಾನೆ. ಅನಂತರ ನಿನ್ನ ಅನುಗ್ರಹದಿಂದ ಸ್ವರ್ಗಕ್ಕೆ ಹೋಗುತ್ತಾನೆ. ಆದುದರಿಂದಲೇ ನೀನು ತ್ರಿಲೋಕಗಳಲ್ಲಿಯೂ ಫಲದಾತ್ರಿಯು.

೧೭. ಹೇ ದುರ್ಗೆ, ನಿನ್ನನ್ನು ಸ್ಮರಿಸಿದರೆ ಎಲ್ಲ ಜೀವಿಗಳ ಭಯವನ್ನೂ ಹೋಗಲಾಡಿಸುತ್ತೀಯೆ, ಸುಖವಾಗಿರುವವರಿಂದ ಸ್ಮರಿಸಲ್ಪಟ್ಟಾಗ (ಅವರಿಗೆ) ಅತ್ಯಂತ ಶುಭಬುದ್ಧಿಯನ್ನು ಕೊಡುತ್ತೀಯೆ. ದಾರಿದ್ರ್ಯ-ದುಃಖ-ಭಯಗಳನ್ನು ಹೋಗಲಾಡಿಸುವವಳೇ! ನೀನಲ್ಲದೆ ಮತ್ತಾರು ಸರ್ವಪ್ರಾಣಿಗಳ ಉಪಕಾರಕ್ಕೋಸ್ಕರ ಯಾವಾಗಲೂ ದಯಾಪೂರಿತ ಚಿತ್ತರಾಗಿರುತ್ತಾರೆ?

೧೮. 'ಈ ಅಸುರರು ಹತರಾದರೆ ಜಗತ್ತು ಸುಖವನ್ನು ಹೊಂದುವುದು. (ಇವರು) ಚಿರಕಾಲ ನರಕದಲ್ಲಿ ನರಳುವಂತಹ ಪಾಪವನ್ನು ಮಾಡಿದ್ದರೂ (ನನ್ನೊಡನೆ) ಯುದ್ಧಮಾಡಿ ಮೃತ್ಯುವನ್ನು ಹೊಂದಿ ಸ್ವರ್ಗವನ್ನು ಹೊಂದಲಿ!' ಎಂದು ಯೋಚಿಸಿ, ಈ ಅಹಿತಕಾರಿಗಳಾದ (ಅಸುರರನ್ನು) ನಾಶಮಾಡಿರುವೆ. ಇದು ನಿಶ್ಚಯ.

೧೯. ದೃಷ್ಟಿಮಾತ್ರದಿಂದಲೇ ನೀನು ಎಲ್ಲ ಅಸುರರನ್ನೂ ಏಕೆ ಭಸ್ಮ ಮಾಡುವುದಿಲ್ಲ? (ಹಾಗೆ ಮಾಡುವ ಶಕ್ತಿಯಿದ್ದರೂ ನೀನು) ಶತ್ರುಗಳಲ್ಲಿ ಶಸ್ತ್ರಪ್ರಹಾರಮಾಡಲು ಕಾರಣವಿದೆ. ಶತ್ರುಗಳಾದರೂ ಅವರು ಕೂಡ ನಿನ್ನ ಆಯುಧಗಳಿಂದ ಪವಿತ್ರರಾಗಿ ಉತ್ತಮಲೋಕಗಳನ್ನು ಹೊಂದಲಿ ಎಂಬುದೇ ನಿನ್ನ ಆಶಯ. ಅಂತಹವರಲ್ಲಿಯೂ ಕೂಡ ನಿನ್ನ ಕೃಪಾ ಬುದ್ಧಿಯು ಅತ್ಯಂತ ಸಾಧುವಾದುದು!

 

ಖಡ್ಗಪ್ರಭಾನಿಕರವಿಸ್ಫುರಣೈಸ್ತಥೋಗ್ರೈಃ
ಶೂಲಾಗ್ರಕಾಂತಿನಿವಹೇನ ದೃಶೋಽಸುರಾಣಾಮ್ ।
ಯನ್ನಾಗತಾ ವಿಲಯಮಂಶುಮದಿಂದುಖಂಡ-
ಯೋಗ್ಯಾನನಂ ತವ ವಿಲೋಕಯತಾಂ ತದೇತತ್ ॥ ೨೦ ॥

ದುರ್ವೃತ್ತವೃತ್ತಶಮನಂ ತವ ದೇವಿ ಶೀಲಂ
ರೂಪಂ ತಥೈತದವಿಚಿಂತ್ಯಮತುಲ್ಯಮನ್ಯೈಃ ।
ವೀರ್ಯಂ ಚ ಹಂತೃ ಹೃತದೇವಪರಾಕ್ರಮಾಣಾಂ
ವೈರಿಷ್ವಪಿ ಪ್ರಕಟಿತೈವ ದಯಾ ತ್ವಯೇತ್ಥಮ್ ॥ ೨೧ ॥

ಕೇನೋಪಮಾ ಭವತು ತೇಽಸ್ಯ ಪರಾಕ್ರಮಸ್ಯ
ರೂಪಂ ಚ ಶತ್ರುಭಯಕಾರ್ಯತಿಹಾರಿ ಕುತ್ರ ।
ಚಿತ್ತೇ ಕೃಪಾ ಸಮರನಿಷ್ಠುರತಾ ಚ ದೃಷ್ಟಾ
ತ್ವಯ್ಯೇವ ದೇವಿ ವರದೇ ಭುವನತ್ರಯೇಽಪಿ ॥ ೨೨ ॥

ತ್ರೈಲೋಕ್ಯಮೇತದಖಿಲಂ ರಿಪುನಾಶನೇನ
ತ್ರಾತಂ ತ್ವಯಾ ಸಮರಮೂರ್ಧನಿ ತೇಽಪಿ ಹತ್ವಾ ।
ನೀತಾ ದಿವಂ ರಿಪುಗಣಾ ಭಯಮಪ್ಯಪಾಸ್ತಮ್
ಅಸ್ಮಾಕಮುನ್ಮದಸುರಾರಿಭವಂ ನಮಸ್ತೇ ॥ ೨೩ ॥

ಶೂಲೇನ ಪಾಹಿ ನೋ ದೇವಿ ಪಾಹಿ ಖಡ್ಗೇನ ಚಾಂಬಿಕೇ ।
ಘಂಟಾಸ್ವನೇನ ನಃ ಪಾಹಿ ಚಾಪಜ್ಯಾನಿಸ್ಸ್ವನೇನ ಚ ॥ ೨೪ ॥

ಪ್ರಾಚ್ಯಾಂ ರಕ್ಷ ಪ್ರತೀಚ್ಯಾಂ ಚ ಚಂಡಿಕೇ ರಕ್ಷ ದಕ್ಷಿಣೇ ।
ಭ್ರಾಮಣೇನಾತ್ಮಶೂಲಸ್ಯ ಉತ್ತರಸ್ಯಾಂ ತಥೇಶ್ವರಿ ॥ ೨೫ ॥

ಸೌಮ್ಯಾನಿ ಯಾನಿ ರೂಪಾಣಿ ತ್ರೈಲೋಕ್ಯೇ ವಿಚರಂತಿ ತೇ ।
ಯಾನಿ ಚಾತ್ಯಂತಘೋರಾಣಿ ತೈ ರಕ್ಷಾಸ್ಮಾಂಸ್ತಥಾ ಭುವಮ್ ॥ ೨೬ ॥

೨೦. ನಿನ್ನ ಖಡ್ಗದಿಂದ ಹೊರಹೊಮ್ಮುತ್ತಿದ್ದ ಉಗ್ರವಾದ ತೇಜೋರಾಶಿಯಿಂದಾಗಲಿ ಅಥವಾ ನಿನ್ನ ಶೂಲಾಗ್ರಕಾಂತಿಯಿಂದಾಗಲಿ ಅಸುರರ ಕಣ್ಣುಗಳು ಕುರುಡಾಗದೆ ಇದ್ದದ್ದಕ್ಕೆ, ಅವರು ಅಮೃತಕಿರಣರಂಜಿತವಾದ ನಿನ್ನ ಚಂದ್ರವದನವನ್ನು ನೋಡುತ್ತಿದ್ದದ್ದೇ ಕಾರಣ.

೨೧. ಹೇ ದೇವಿ, ದುಷ್ಟರ ನಡತೆಯನ್ನು ಅಡಗಿಸಬಲ್ಲ ಸ್ವಭಾವ ನಿನ್ನದು; ಹಾಗೆಯೇ ನಿನ್ನ ಈ ರೂಪವು ಅವಿಚಿಂತ್ಯವೂ ಅಸದೃಶವೂ ಆಗಿದೆ; ವೀರ್ಯವಾದರೋ ದೇವತೆಗಳ ಪರಾಕ್ರಮವನ್ನಡಗಿಸಿದ ಅಸುರರನ್ನೇ ಸಂಹರಿಸಬಲ್ಲದು; ಶತ್ರುಗಳಲ್ಲಿಯೂ ಕೂಡ ನಿನ್ನ ದಯೆಯು ಹೀಗೆ ಪ್ರಕಟಿತವಾಗಿದೆ.

೨೨. ನಿನ್ನ ಈ ಪರಾಕ್ರಮಕ್ಕೆ ಯಾವುದರೊಡನೆ ಹೋಲಿಕೆ ಇದ್ದೀತು? ಮತ್ತು ಶತ್ರುಗಳಿಗೆ ಭಯವನ್ನುಂಟುಮಾಡುವ ಹಾಗೆಯೆ ಅತ್ಯಂತ ಮನೋಹರವಾಗಿಯೂ ಇರುವ ನಿನ್ನ ಸೌಂದರ್ಯವನ್ನು ಮತ್ತೆಲ್ಲಿ ನೋಡೇವು? ಹೇ ದೇವಿ, ವರದೆ, ಹೃದಯದಲ್ಲಿ ಕೃಪೆ ಮತ್ತು ಸಮರದಲ್ಲಿ ನಿಷ್ಠುರತೆ –ಇವುಗಳನ್ನು ಮೂರು ಲೋಕಗಳಲ್ಲಿ ಹುಡುಕಿದರೂ ನಿನ್ನಲ್ಲಿ ಮಾತ್ರ ಕಾಣುವೆವು!

೨೩. ಶತ್ರುನಾಶದ ಮೂಲಕ ಈ ಮೂಜಗವೂ ನಿನ್ನಿಂದ ಕಾಪಾಡಲ್ಪಟ್ಟಿದೆ. ಸಮರದಲ್ಲಿ ಹತವಾಗಿ ಆ ಶತ್ರುಸೈನ್ಯಗಳೂ ಕೂಡ ನಿನ್ನಿಂದ ಸ್ವರ್ಗಕ್ಕೊಯ್ಯಲ್ಪಟ್ಟಿರುವುವು. ಉನ್ಮತ್ತರಾದ ಅಸುರರಿಂದ ಉಂಟಾದ ನಮ್ಮ ಭಯವೂ ಕೂಡ ಹೋಯಿತು. ನಿನಗೆ ನಮಸ್ಕಾರ !

೨೪. ಹೇ ದೇವಿ ಅಂಬಿಕೆ, ನಿನ್ನ ಶೂಲದಿಂದ ನಮ್ಮನ್ನು ಕಾಪಾಡು. ನಿನ್ನ ಖಡ್ಗದಿಂದಲೂ, ಗಂಟೆಯ ಶಬ್ದದಿಂದಲೂ, ಬಿಲ್ಲಿನ ಟಂಕಾರದಿಂದಲೂ ನಮ್ಮನ್ನು ಕಾಪಾಡು!

೨೫. ಹೇ ಚಂಡಿಕೆ, ಹೇ ಈಶ್ವರಿ, ನಿನ್ನ ಶೂಲಾಯುಧವನ್ನು ತಿರುಗಿಸುತ್ತ ನಮ್ಮನ್ನು ಪೂರ್ವಪಶ್ಚಿಮಗಳಲ್ಲಿ ಮತ್ತು ಉತ್ತರದಕ್ಷಿಣಗಳಲ್ಲಿ ರಕ್ಷಿಸು !

೨೬. ತ್ರಿಲೋಕಗಳಲ್ಲಿ ಸಂಚರಿಸುತ್ತಿರುವ ಅಥವಾ ವಿರಾಜಿಸುತ್ತಿರುವ ನಿನ್ನ ಸೌಮ್ಯರೂಪಗಳಿಂದಲೂ ಮತ್ತು ನಿನ್ನ ಅತ್ಯಂತ ಘೋರ ರೂಪಗಳಿಂದಲೂ ನಮ್ಮನ್ನೂ, ಜಗತ್ತನ್ನೂ ರಕ್ಷಿಸು.

ಖಡ್ಗಶೂಲಗದಾದೀನಿ ಯಾನಿ ಚಾಸ್ತ್ರಾಣಿ ತೇಽಂಬಿಕೇ ।
ಕರಪಲ್ಲವಸಂಗೀನಿ ತೈರಸ್ಮಾನ್ ರಕ್ಷ ಸರ್ವತಃ ॥ ೨೭ ॥

ಋಷಿರುವಾಚ ॥ ೨೮ ॥

ಏವಂ ಸ್ತುತಾ ಸುರೈರ್ದಿವ್ಯೈಃ ಕುಸುಮೈರ್ನಂದನೋದ್ಭವೈಃ ।
ಅರ್ಚಿತಾ ಜಗತಾಂ ಧಾತ್ರೀ ತಥಾ ಗಂಧಾನುಲೇಪನೈಃ ॥ ೨೯ ॥

ಭಕ್ತ್ಯಾ ಸಮಸ್ತೈಸ್ತ್ರಿದಶೈರ್ದಿವ್ಯೈರ್ಧೂಪೈಃ ಸುಧೂಪಿತಾ ।
ಪ್ರಾಹ ಪ್ರಸಾದಸುಮುಖೀ ಸಮಸ್ತಾನ್ ಪ್ರಣತಾನ್ ಸುರಾನ್ ॥ ೩೦ ॥

ದೇವ್ಯುವಾಚ ॥ ೩೧ ॥

ವ್ರಿಯತಾಂ ತ್ರಿದಶಾಃ ಸರ್ವೇ ಯದಸ್ಮತ್ತೋಽಭಿವಾಂಛಿತಮ್ ।
ದದಾಮ್ಯಹಮತಿಪ್ರೀತ್ಯಾ ಸ್ತವೈರೇಭಿಃ ಸುಪೂಜಿತಾ ॥ ೩೨ ॥

ದೇವಾ ಊಚುಃ ॥ ೩೩ ॥

ಭಗವತ್ಯಾ ಕೃತಂ ಸರ್ವಂ ನ ಕಿಂಚಿದವಶಿಷ್ಯತೇ ।
ಯದಯಂ ನಿಹತಃ ಶತ್ರುರಸ್ಮಾಕಂ ಮಹಿಷಾಸುರಃ ॥ ೩೪ ॥

ಯದಿ ಚಾಪಿ ವರೋ ದೇಯಸ್ತ್ವಯಾಽಸ್ಮಾಕಂ ಮಹೇಶ್ವರಿ ।
ಸಂಸ್ಮೃತಾ ಸಂಸ್ಮೃತಾ ತ್ವಂ ನೋ ಹಿಂಸೇಥಾಃ ಪರಮಾಪದಃ ॥ ೩೫ ॥

ಯಶ್ಚ ಮರ್ತ್ಯಃ ಸ್ತವೈರೇಭಿಸ್ತ್ವಾಂ ಸ್ತೋಷ್ಯತ್ಯಮಲಾನನೇ ।
ತಸ್ಯ ವಿತ್ತರ್ದ್ಧಿವಿಭವೈರ್ಧನದಾರಾದಿಸಂಪದಾಮ್ ॥ ೩೬ ॥

ವೃದ್ಧಯೇಽಸ್ಮತ್ಪ್ರಸನ್ನಾ ತ್ವಂ ಭವೇಥಾಃ ಸರ್ವದಾಽಂಬಿಕೇ ॥ ೩೭ ॥

ಋಷಿರುವಾಚ ॥ ೩೮ ॥

ಇತಿ ಪ್ರಸಾದಿತಾ ದೇವೈರ್ಜಗತೋಽರ್ಥೇ ತಥಾಽಽತ್ಮನಃ ।
ತಥೇತ್ಯುಕ್ತ್ವಾ ಭದ್ರಕಾಲೀ ಬಭೂವಾಂತರ್ಹಿತಾ ನೃಪ ॥ ೩೯ ॥

೨೭. ಹೇ ಅಂಬಿಕೆ, ನಿನ್ನ ಕರಪಲ್ಲವಗಳ ಸಂಗವನ್ನು ಹೊಂದಿರುವ ಖಡ್ಗ-ಶೂಲ-ಗದೆಗಳಿಂದಲೂ, ಇತರ ಅಸ್ತ್ರಗಳಿಂದಲೂ ನಮ್ಮನ್ನು ಎಲ್ಲ ಕಡೆಗಳಲ್ಲಿಯೂ ರಕ್ಷಿಸು.

೨೮-೨೯. ಸುಮೇಧ ಋಷಿಯು ಹೇಳಿದನು: ಹೀಗೆ ದೇವತೆಗಳಿಂದ ಸ್ತುತಿಸಲ್ಪಟ್ಟಮೇಲೆ, ನಂದನವನದಲ್ಲಿ ಬೆಳೆದ ದಿವ್ಯ ಕುಸುಮಗಳಿಂದಲೂ, ಗಂಧಾದಿಗಳ ಲೇಪನದಿಂದಲೂ ಜಗದ್ಧಾತ್ರಿಯು ಪೂಜಿಸಲ್ಪಟ್ಟಳು.

೩೦. ಎಲ್ಲ ದೇವತೆಗಳಿಂದ ಧೂಪಗಳ ಮೂಲಕ ಭಕ್ತಿಯಿಂದ ಪೂಜಿತಳಾದ ದೇವಿಯು ಪ್ರಸನ್ನವದನಳಾಗಿ, ನಮಸ್ಕರಿಸಿದ್ದ ಆ ಸಮಸ್ತ ದೇವತೆಗಳನ್ನೂ ಕುರಿತು ಹೀಗೆಂದಳು.

೩೧-೩೨. ದೇವಿಯು ಹೇಳಿದಳು : ಎಲೈ ದೇವತೆಗಳೆ, ನಿಮ್ಮ ಅಭೀಷ್ಟ ವೇನಿದೆಯೋ ಅದನ್ನು ಕುರಿತು ವರವನ್ನು ಕೇಳಿರಿ. ಈ ನಿಮ್ಮ ಸ್ತವಗಳಿಂದ ಪೂಜಿತಳಾದ ನಾನು ಅತ್ಯಂತ ಪ್ರೀತಿಯಿಂದ (ಅದನ್ನು) ಕೊಡುತ್ತೇನೆ.

೩೩-೩೪. ದೇವತೆಗಳು ಉತ್ತರಿಸಿದರು: ಭಗವತಿಯಾದ ನಿನ್ನಿಂದ (ನಮಗೆ) ಬೇಕಾದುದೆಲ್ಲವೂ ಮಾಡಲ್ಪಟ್ಟಿತು; ಇನ್ನು (ಬೇಡಬೇಕಾದುದು) ಏನೂ ಉಳಿದಿಲ್ಲ ; ಏಕೆಂದರೆ ನಮ್ಮ ಶತ್ರುವಾದ ಈ ಮಹಿಷಾಸುರನು (ಈಗಾಗಲೇ) ಹತನಾಗಿದ್ದಾನೆ.

೩೫. ಹೀಗಿದ್ದರೂ, ಹೇ ಮಹೇಶ್ವರಿ, ನೀನು ನಮಗೆ ವರವನ್ನು ಕೊಡಲೇಬೇಕಾಗಿದ್ದರೆ ನಿನ್ನನ್ನು (ನಾವು) ನೆನೆದಾಗಲೆಲ್ಲ ನಮ್ಮ ಮಹದಾಪತ್ತು ಗಳನ್ನು ನಾಶಮಾಡು.

೩೬-೩೭. ಹೇ ಅಮಲಾನನೆ, ಮತ್ತು ಯಾವ ಮನುಷ್ಯನು ಈ ಸ್ತೋತ್ರಗಳಿಂದ ನಿನ್ನನ್ನು ಸ್ತುತಿಸುವನೊ, ಅವನ ಐಶ್ವರ್ಯ, ವೈಭವ, ಧನ, ಪತ್ನಿ, ಸಂಪತ್ತು, ಇವು–ನಮ್ಮಲ್ಲಿ ಪ್ರಸನ್ನಳಾಗಿರುವ ಹೇ ತಾಯಿ–ಸದಾ ವರ್ಧಿಸುವಂತೆ ಅನುಗ್ರಹಿಸು.

೩೮-೩೯. ಸುಮೇಧ ಋಷಿಯು ಇಂತೆಂದನು: ಎಲೈ ರಾಜನೆ, ಹೀಗೆ ದೇವತೆಗಳಿಂದ ತಮಗಾಗಿ ಮತ್ತು ಜಗತ್ತಿನ ಹಿತಕ್ಕಾಗಿ ಪ್ರಸನ್ನಗೊಳಿಸಲ್ಪಟ್ಟ ಭದ್ರಕಾಳಿಯು 'ಹಾಗೆಯೇ ಆಗಲಿ!' ಎಂದು ವರವನ್ನಿತ್ತು ಅಂತರ್ಧಾನಳಾದಳು.

ಇತ್ಯೇತತ್ ಕಥಿತಂ ಭೂಪ ಸಂಭೂತಾ ಸಾ ಯಥಾ ಪುರಾ ।
ದೇವೀ ದೇವಶರೀರೇಭ್ಯೋ ಜಗತ್ತ್ರಯಹಿತೈಷಿಣೀ ॥ ೪೦ ॥

ಪುನಶ್ಚ ಗೌರೀದೇಹಾ ಸಾ ಸಮುದ್ಭೂತಾ ಯಥಾಽಭವತ್ ।
ವಧಾಯ ದುಷ್ಟದೈತ್ಯಾನಾಂ ತಥಾ ಶುಂಭನಿಶುಂಭಯೋಃ ॥ ೪೧ ॥

ರಕ್ಷಣಾಯ ಚ ಲೋಕಾನಾಂ ದೇವಾನಾಮುಪಕಾರಿಣೀ ।
ತಚ್ಛೃಣುಷ್ವ ಮಯಾಽಽಖ್ಯಾತಂ ಯಥಾವತ್ಕಥಯಾಮಿ ತೇ ॥ ೪೨ ॥

ಇತಿ ಶ್ರೀಮಾರ್ಕಂಡೇಯಪುರಾಣೇ ಸಾವರ್ಣಿಕೇ ಮನ್ವಂತರೇ
ಶ್ರೀದೇವೀಮಾಹಾತ್ಮ್ಯೇ ಇಂದ್ರಾದಿಸ್ತುತಿರ್ನಾಮ ಚತುರ್ಥೋಽಧ್ಯಾಯಃ

೪೦. ಹೇ ರಾಜನೇ, ಆ ದೇವಿಯು ಮೂರು ಜಗತ್ತುಗಳ ಹಿತವನ್ನು ಬಯಸುವವಳಾಗಿ ಹಿಂದೆ ದೇವತೆಗಳ ಶರೀರಗಳಿಂದ ಹೇಗೆ ಉತ್ಪನ್ನಳಾದಳೆಂಬ ಈ ವಿಷಯವನ್ನು (ನಿನಗೆ) ಹೇಳಿದ್ದಾಯಿತು.

೪೧-೪೨. ಪುನಃ ಆಕೆಯು ದುಷ್ಟದೈತ್ಯರ ಮತ್ತು ಶುಂಭನಿಶುಂಭರ ವಧೆಗಾಗಿಯೂ, ಲೋಕರಕ್ಷಣಕ್ಕಾಗಿಯೂ ದೇವತೆಗಳಿಗೆ ಉಪಕಾರಿಣಿಯಾದ ಗೌರೀರೂಪದಿಂದ ಹೇಗೆ ಹುಟ್ಟಿದಳೆಂಬುದನ್ನು – ಅದು ನಡೆದಂತೆಯೇ – ಹೇಳುತ್ತೇನೆ. ಅದನ್ನು ಕೇಳು.

ಹೀಗೆ ಸಾವರ್ಣಿಕಮನ್ವಂತರಕ್ಕೆ ಸೇರಿದ ಮಾರ್ಕಂಡೇಯಪುರಾಣದಲ್ಲಿ ದೇವೀಮಾಹಾತ್ಮ್ಯದ 'ಇಂದ್ರಾದಿಗಳ ಸ್ತುತಿ' ಎಂಬ ನಾಲ್ಕನೆಯ ಅಧ್ಯಾಯವು ಮುಗಿಯಿತು.

# ಅಥ ಉತ್ತಮಚರಿತ್ರಮ್

ಉತ್ತಮಚರಿತ್ರಸ್ಯ ರುದ್ರ ಋಷಿಃ । ಮಹಾಸರಸ್ವತೀ ದೇವತಾ । ಅನುಷ್ಟುಪ್ ಛಂದಃ । ಭೀಮಾ ಶಕ್ತಿಃ । ಭ್ರಾಮರೀ ಬೀಜಮ್ । ಸೂರ್ಯಸ್ತತ್ತ್ವಮ್ । ಸಾಮವೇದಃ ಸ್ವರೂಪಮ್ । ಮಹಾಸರಸ್ವತೀ ಪ್ರೀತ್ಯರ್ಥಮ್ ಉತ್ತಮಚರಿತ್ರಜಪೇ ವಿನಿಯೋಗಃ ॥

## ಮಹಾಸರಸ್ವತೀಧ್ಯಾನಮ್

ಓಮ್ । ಘಂಟಾಶೂಲಹಲಾನಿ ಶಂಖಮುಸಲೇ ಚಕ್ರಂ ಧನುಃ ಸಾಯಕಂ, ಹಸ್ತಾಬ್ಜೈರ್ದಧತೀಂ ಘನಾಂತವಿಲಸಚ್ಛೀತಾಂಶುತುಲ್ಯ ಪ್ರಭಾಮ್ । ಗೌರೀದೇಹಸಮುದ್ಭವಾಂ ತ್ರಿಜಗತಾಮಾಧಾರಭೂತಾಂ ಮಹಾಽಪೂರ್ವಾಮತ್ರ ಸರಸ್ವತೀಮನುಭಜೇ ಶುಂಭಾದಿದೈತ್ಯಾರ್ದಿನೀಮ್ ॥

# ಉತ್ತಮಚರಿತ್ರೆ

## ಮಹಾಸರಸ್ವತೀಧ್ಯಾನ

(ತನ್ನ ಎಂಟು) ಹಸ್ತಗಳಿಂದ ಗಂಟೆ, ಶೂಲ, ಹಲಾಯುಧ, ಶಂಖ, ಮುಸಲಾಯುಧ, ಚಕ್ರ, ಧನುಸ್ಸು, ಬಾಣ – ಇವುಗಳನ್ನು ಧರಿಸಿರುವ, ಶರದೃತುವಿನ ಚಂದ್ರನಿಗೆ ಸಮಾನವಾದ ಪ್ರಭೆಯನ್ನುಳ್ಳ, ಗೌರಿಯ ದೇಹದಿಂದ ಸಮುದ್ಭೂತಳಾದ, ಮೂರು ಜಗತ್ತುಗಳಿಗೂ ಆಧಾರ ಭೂತಳಾದ, ಅಪೂರ್ವಳಾದ, ಶುಂಭಾದಿ ದೈತ್ಯರನ್ನು ನಾಶಮಾಡಿದ, ಮಹಾಸರಸ್ವತಿಯನ್ನು ಭಜಿಸುತ್ತೇನೆ.

# ಪಂಚಮೋಽಧ್ಯಾಯಃ

## ದೇವ್ಯಾ ದೂತಸಂವಾದಃ

ಓಂ ಕ್ಲೀಂ ಋಷಿರುವಾಚ ॥ ೧ ॥

ಪುರಾ ಶುಂಭನಿಶುಂಭಾಭ್ಯಾಮಸುರಾಭ್ಯಾಂ ಶಚೀಪತೇಃ ।
ತ್ರೈಲೋಕ್ಯಂ ಯಜ್ಞಭಾಗಶ್ಚ ಹೃತಾ ಮದಬಲಾಶ್ರಯಾತ್ ॥ ೨ ॥

ತಾವೇವ ಸೂರ್ಯತಾಂ ತದ್ವದಧಿಕಾರಂ ತಥೈಂದವಮ್ ।
ಕೌಬೇರಮಥ ಯಾಮ್ಯಂ ಚ ಚಕ್ರಾತೇ ವರುಣಸ್ಯ ಚ ॥ ೩ ॥

ತಾವೇವ ಪವನರ್ದ್ಧಿಂ ಚ ಚಕ್ರತುರ್ವಹ್ನಿಕರ್ಮ ಚ ।
ತತೋ ದೇವಾ ವಿನಿರ್ಧೂತಾ ಭ್ರಷ್ಟರಾಜ್ಯಾಃ ಪರಾಜಿತಾಃ ॥ ೪ ॥

ಹೃತಾಧಿಕಾರಾಸ್ತ್ರಿದಶಾಸ್ತಾಭ್ಯಾಂ ಸರ್ವೇ ನಿರಾಕೃತಾಃ ।
ಮಹಾಽಸುರಾಭ್ಯಾಂ ತಾಂ ದೇವೀಂ ಸಂಸ್ಮರಂತ್ಯಪರಾಜಿತಾಮ್ ॥ ೫ ॥

ತಯಾಽಸ್ಮಾಕಂ ವರೋ ದತ್ತೋ ಯಥಾಽಽಪತ್ಸು ಸ್ಮೃತಾಽಖಿಲಾಃ ।
ಭವತಾಂ ನಾಶಯಿಷ್ಯಾಮಿ ತತ್ಕ್ಷಣಾತ್ ಪರಮಾಪದಃ ॥ ೬ ॥

ಇತಿ ಕೃತ್ವಾ ಮತಿಂ ದೇವಾ ಹಿಮವಂತಂ ನಗೇಶ್ವರಮ್ ।
ಜಗ್ಮುಸ್ತತ್ರ ತತೋ ದೇವೀಂ ವಿಷ್ಣುಮಾಯಾಂ ಪ್ರತುಷ್ಟುವುಃ ॥ ೭ ॥

ದೇವಾ ಊಚುಃ ॥ ೮ ॥

ನಮೋ ದೇವ್ಯೈ ಮಹಾದೇವ್ಯೈ ಶಿವಾಯೈ ಸತತಂ ನಮಃ ।
ನಮಃ ಪ್ರಕೃತ್ಯೈ ಭದ್ರಾಯೈ ನಿಯತಾಃ ಪ್ರಣತಾಃ ಸ್ಮ ತಾಮ್ ॥ ೯ ॥

ರೌದ್ರಾಯೈ ನಮೋ ನಿತ್ಯಾಯೈ ಗೌರ್ಯೈ ಧಾತ್ರ್ಯೈ ನಮೋ. ನಮಃ ।
ಜ್ಯೋತ್ಸ್ನಾಯೈ ಚೇಂದುರೂಪಿಣ್ಯೈ ಸುಖಾಯೈ ಸತತಂ ನಮಃ ॥ ೧೦ ॥

# ಐದನೆಯ ಅಧ್ಯಾಯ

## ದೇವಿಯೊಡನೆ ದೂತನ ಸಂವಾದ

೧-೨. ಋಷಿಯು ಹೇಳಿದನು: ಹಿಂದೆ ಶುಂಭ - ನಿಶುಂಭರೆಂಬ ಅಸುರರು ಮದಬಲಗಳನ್ನಾಶ್ರಯಿಸಿ ಇಂದ್ರನ ಯಜ್ಞಭಾಗವನ್ನೂ, ಮೂರು ಲೋಕಗಳ ಆಧಿಪತ್ಯವನ್ನೂ ಅಪಹರಿಸಿದರು.

೩. ಅವರಿಬ್ಬರೇ ಸೂರ್ಯನ ಅಧಿಕಾರವನ್ನೂ, ಇಂದ್ರನ ಅಧಿಕಾರವನ್ನೂ, ಕುಬೇರನ ಅಧಿಕಾರವನ್ನೂ, ಹಾಗೆಯೇ ಯಮವರುಣರ ಅಧಿಕಾರಗಳನ್ನೂ ಆಕ್ರಮಿಸಿ ಆಳತೊಡಗಿದರು.

೪. ಅವರಿಬ್ಬರೇ ವಾಯುವಿನ ಕರ್ತವ್ಯವನ್ನೂ ಅಗ್ನಿಯ ಕರ್ಮವನ್ನೂ ಮಾಡತೊಡಗಿದರು. ಹೀಗೆ ದೇವತೆಗಳು ಪರಾಜಿತರಾಗಿ ರಾಜ್ಯವನ್ನು ಕಳೆದುಕೊಂಡು ಹೊರದೂಡಲ್ಪಟ್ಟರು.

೫. ಹೀಗೆ ಆ ಮಹಾಸುರರಿಂದ ಅಧಿಕಾರಗಳನ್ನು ಕಳೆದುಕೊಂಡು ಹೊರದೂಡಲ್ಪಟ್ಟ ಎಲ್ಲ ದೇವತೆಗಳೂ, ಅಪರಾಜಿತಾ (ಎಂಬ ಹೆಸರನ್ನುಳ್ಳ ಆ) ದೇವಿಯನ್ನು ಸ್ಮರಿಸಿದರು.

೬. ' ''ಆಪತ್ತುಗಳಲ್ಲಿ ಸ್ಮರಿಸಲ್ಪಟ್ಟರೆ ನಿಮ್ಮ ಎಲ್ಲ ಪರಮಾಪತ್ತುಗಳನ್ನೂ ಕ್ಷಣದಲ್ಲೇ ನಾಶಗೊಳಿಸುವೆನು'' ಎಂಬ ವರವು ಆಕೆಯಿಂದ ನಮಗೆ ಕೊಡಲ್ಪಟ್ಟಿದೆ.'

೭. ಹೀಗೆ ಯೋಚಿಸಿ ದೇವತೆಗಳು ಪರ್ವತರಾಜನಾದ ಹಿಮವಂತನನ್ನು ಸೇರಿ ಅಲ್ಲಿ ವಿಷ್ಣುಮಾಯೆಯಾದ ದೇವಿಯನ್ನು (ಹೀಗೆ) ಸ್ತುತಿಸಿದರು.

೮. ದೇವತೆಗಳು ಹೇಳಿದರು :

(ಈ ಸ್ತೋತ್ರವು **ಅಪರಾಜಿತಾಸ್ತೋತ್ರ** ಎನಿಸಿದೆ.)

೯. ದೇವಿಗೆ ನಮಸ್ಕಾರ. ಮಹಾದೇವಿಗೆ ನಮಸ್ಕಾರ. ಶಿವೆಗೆ ಯಾವಾಗಲೂ ನಮಸ್ಕಾರ. ಪ್ರಕೃತಿಗೆ ನಮಸ್ಕಾರ. ಭದ್ರೆಗೆ ನಮಸ್ಕಾರ. ನಿಯತಚಿತ್ತರಾಗಿ ಆಕೆಯನ್ನು ನಮಸ್ಕರಿಸಿದ್ದೇವೆ.

೧೦. ರೌದ್ರರೂಪಿಯಾದ ದೇವಿಗೆ ನಮಸ್ಕಾರ. ನಿತ್ಯಳೂ ಗೌರಿಯೂ ಜಗದ್ಧಾತ್ರಿಯೂ ಆದವಳಿಗೆ ನಮಸ್ಕಾರ. ಬೆಳದಿಂಗಳಿನ ಮತ್ತು ಚಂದ್ರನ ರೂಪಿಯಾದ, ಹಾಗೆಯೇ ಸುಖರೂಪಳಾದ (ದೇವಿಗೆ) ಸತತವೂ ನಮಸ್ಕಾರ.

ಕಲ್ಯಾಣ್ಯೈ ಪ್ರಣತಾವೃದ್ಧ್ಯೈ ಸಿದ್ಧ್ಯೈ ಕುರ್ಮೋ ನಮೋ ನಮಃ ।
ನೈರ್ಋತ್ಯೈ ಭೂಭೃತಾಂ ಲಕ್ಷ್ಮ್ಯೈ ಶರ್ವಾಣ್ಯೈ ತೇ
ನಮೋ ನಮಃ ॥ ೧೧ ॥

ದುರ್ಗಾಯೈ ದುರ್ಗಪಾರಾಯೈ ಸಾರಾಯೈ ಸರ್ವಕಾರಿಣ್ಯೈ ।
ಖ್ಯಾತ್ಯೈ ತಥೈವ ಕೃಷ್ಣಾಯೈ ಧೂಮ್ರಾಯೈ ಸತತಂ ನಮಃ ॥ ೧೨ ॥

ಅತಿಸೌಮ್ಯಾತಿರೌದ್ರಾಯೈ ನತಾಸ್ತಸ್ಯೈ ನಮೋ ನಮಃ ।
ನಮೋ ಜಗತ್ಪ್ರತಿಷ್ಠಾಯೈ ದೇವ್ಯೈ ಕೃತ್ಯೈ ನಮೋ ನಮಃ ॥ ೧೩ ॥

ಯಾ ದೇವೀ ಸರ್ವಭೂತೇಷು ವಿಷ್ಣುಮಾಯೇತಿ ಶಬ್ದಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೧೪-೧೬ ॥

ಯಾ ದೇವೀ ಸರ್ವಭೂತೇಷು ಚೇತನೇತ್ಯಭಿಧೀಯತೇ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೧೭-೧೯ ॥

ಯಾ ದೇವೀ ಸರ್ವಭೂತೇಷು ಬುದ್ಧಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೨೦-೨೨ ॥

ಯಾ ದೇವೀ ಸರ್ವಭೂತೇಷು ನಿದ್ರಾರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೨೩-೨೫ ॥

ಯಾ ದೇವೀ ಸರ್ವಭೂತೇಷು ಕ್ಷುಧಾರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೨೬-೨೮ ॥

ಯಾ ದೇವೀ ಸರ್ವಭೂತೇಷು ಛಾಯಾರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೨೯-೩೧ ॥

೧೧. ಕಲ್ಯಾಣಿಯನ್ನು ನಮಸ್ಕರಿಸುತ್ತೇವೆ. ಐಶ್ವರ್ಯರೂಪಳೂ, ಸಿದ್ಧಿರೂಪಳೂ ಆದವಳಿಗೆ ನಮಸ್ಕಾರಗಳನ್ನು ಪುನಃ ಪುನಃ ಮಾಡುತ್ತೇವೆ. ಭೂಪತಿಗಳಿಗೆ ಲಕ್ಷ್ಮಿಯೂ ಆಗಿರುವ, ಶರ್ವಾಣಿಯಾದ ನಿನಗೆ ಅನೇಕ ನಮಸ್ಕಾರಗಳು.

೧೨. ಕಷ್ಟಗಳಿಂದ ಪಾರುಮಾಡುವ ದುರ್ಗೆಗೆ, ಸಾರರೂಪಳೂ ಸರ್ವಕಾರಿಣಿಯೂ, ವಿವೇಕಖ್ಯಾತಿಯೂ, ಕೃಷ್ಣವರ್ಣಳೂ, ಧೂಮ್ರ ವರ್ಣಳೂ ಆದ ದೇವಿಗೆ ಯಾವಾಗಲೂ ನಮಸ್ಕಾರ.

೧೩. ಅತಿಸೌಮ್ಯಳೂ, ಅತಿರೌದ್ರಳೂ ಆದ ಅವಳಿಗೆ ಅನೇಕ ನಮಸ್ಕಾರಗಳು. ಜಗತ್ತಿನ ಆಧಾರಳಾದ ದೇವಿಗೆ ನಮಸ್ಕಾರ. ಕೃತಿರೂಪಳಿಗೆ ನಮಸ್ಕಾರ.

೧೪-೧೬. ಯಾವ ದೇವಿಯು ಸರ್ವಪ್ರಾಣಿಗಳಲ್ಲಿಯೂ ಇದ್ದುಕೊಂಡು 'ವಿಷ್ಣುಮಾಯೆ' ಎಂಬ ಹೆಸರಿನಿಂದ ಕರೆಯಲ್ಪಡುವಳೋ ಅವಳಿಗೆ ನಮಸ್ಕಾರ, ಅವಳಿಗೆ ಪುನಃ ಪುನಃ ನಮಸ್ಕಾರಗಳು.

೧೭-೧೯. ಯಾವ ದೇವಿಯು ಸರ್ವಪ್ರಾಣಿಗಳಲ್ಲಿಯೂ ಇದ್ದುಕೊಂಡು 'ಚೇತನಾ' ಎಂದು ಕರೆಯಲ್ಪಡುವಳೊ, ಅವಳಿಗೆ ಪುನಃ ಪುನಃ ನಮಸ್ಕಾರ.

೨೦-೨೨. ಯಾವ ದೇವಿಯು ಎಲ್ಲಾ ಜೀವಿಗಳಲ್ಲಿಯೂ ಬುದ್ಧಿ ರೂಪದಿಂದ ನೆಲಸಿರುವಳೊ, ಅವಳಿಗೆ ಪುನಃ ಪುನಃ ನಮಸ್ಕಾರ.

೨೩-೨೫. ಯಾವ ದೇವಿಯು ಸರ್ವಜೀವಿಗಳಲ್ಲಿಯೂ ನಿದ್ರಾರೂಪ ದಿಂದ ನೆಲಸಿರುವಳೊ, ಆ ದೇವಿಗೆ ಪುನಃ ಪುನಃ ನಮಸ್ಕಾರ.

೨೬-೨೮. ಯಾವ ದೇವಿಯು ಸಕಲ ಭೂತಗಳಲ್ಲಿಯೂ ಹಸಿವಿನ ರೂಪದಿಂದ ನೆಲಸಿರುವಳೋ, ಅವಳಿಗೆ ಪುನಃ ಪುನಃ ನಮಸ್ಕಾರ.

೨೯-೩೧. ಯಾವ ದೇವಿಯು ಸಕಲ ಜೀವಿಗಳಲ್ಲಿಯೂ ನೆರಳಿನ ರೂಪದಿಂದ ನೆಲಸಿರುವಳೊ ಅವಳಿಗೆ ಪುನಃ ಪುನಃ ನಮಸ್ಕಾರ.

ಯಾ ದೇವೀ ಸರ್ವಭೂತೇಷು ಶಕ್ತಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೩೨-೩೪ ॥

ಯಾ ದೇವೀ ಸರ್ವಭೂತೇಷು ತೃಷ್ಣಾರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೩೫-೩೭ ॥

ಯಾ ದೇವೀ ಸರ್ವಭೂತೇಷು ಕ್ಷಾಂತಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೩೮-೪೦ ॥

ಯಾ ದೇವೀ ಸರ್ವಭೂತೇಷು ಜಾತಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೪೧-೪೩ ॥

ಯಾ ದೇವೀ ಸರ್ವಭೂತೇಷು ಲಜ್ಜಾರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೪೪-೪೬ ॥

ಯಾ ದೇವೀ ಸರ್ವಭೂತೇಷು ಶಾಂತಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೪೭-೪೯ ॥

ಯಾ ದೇವೀ ಸರ್ವಭೂತೇಷು ಶ್ರದ್ಧಾರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೫೦-೫೨ ॥

ಯಾ ದೇವೀ ಸರ್ವಭೂತೇಷು ಕಾಂತಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೫೩-೫೫ ॥

ಯಾ ದೇವೀ ಸರ್ವಭೂತೇಷು ಲಕ್ಷ್ಮೀರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೫೬-೫೮ ॥

೩೨-೩೪. ಯಾವ ದೇವಿಯು ಸರ್ವಜೀವಿಗಳಲ್ಲಿಯೂ ಶಕ್ತಿರೂಪದಿಂದ ನೆಲಸಿರುವಳೋ, ಆ ದೇವಿಗೆ ಪುನಃ ಪುನಃ ನಮಸ್ಕಾರ.

೩೫-೩೭. ಯಾವ ದೇವಿಯು ಸರ್ವಜಂತುಗಳಲ್ಲಿಯೂ ಹಸಿವೆಯ ರೂಪದಿಂದ ನೆಲಸಿರುವಳೋ, ಅವಳಿಗೆ ಪುನಃ ಪುನಃ ನಮಸ್ಕಾರ.

೩೮-೪೦. ಯಾವ ದೇವಿಯು ಸರ್ವಭೂತಗಳಲ್ಲಿಯೂ ಕ್ಷಮಾರೂಪದಿಂದ ನೆಲಸಿರುವಳೋ, ಅವಳಿಗೆ ಪುನಃ ಪುನಃ ನಮಸ್ಕಾರ.

೪೧-೪೩. ಯಾವ ದೇವಿಯು ಸರ್ವಪ್ರಾಣಿಗಳಲ್ಲಿಯೂ ಜಾತಿರೂಪದಿಂದ ನೆಲಸಿರುವಳೋ, ಅವಳಿಗೆ ಪುನಃ ಪುನಃ ನಮಸ್ಕಾರ.

೪೪-೪೬. ಯಾವ ದೇವಿಯು ಸಮಸ್ತ ಪ್ರಾಣಿಗಳಲ್ಲಿಯೂ ಲಜ್ಜೆಯ ರೂಪದಿಂದಿರುವಳೋ, ಅವಳಿಗೆ ಪುನಃ ಪುನಃ ನಮಸ್ಕಾರ.

೪೭-೪೯. ಯಾವ ದೇವಿಯು ಸಕಲ ಭೂತಗಳಲ್ಲಿಯೂ ಶಾಂತಿ ರೂಪದಿಂದ ನೆಲಸಿರುವಳೋ, ಆ ದೇವಿಗೆ ಪುನಃ ಪುನಃ ನಮಸ್ಕಾರಗಳು.

೫೦-೫೨. ಯಾವ ದೇವಿಯು ಸರ್ವಭೂತಗಳಲ್ಲಿಯೂ ಶ್ರದ್ಧೆಯ ರೂಪದಿಂದಿರುವಳೋ, ಆ ದೇವಿಗೆ ಪುನಃ ಪುನಃ ನಮಸ್ಕಾರ.

೫೩-೫೫. ಯಾವ ದೇವಿಯು ಸರ್ವಪ್ರಾಣಿಗಳಲ್ಲಿಯೂ ಕಾಂತಿ ರೂಪದಿಂದ ನೆಲಸಿರುವಳೋ, ಆ ದೇವಿಗೆ ಪುನಃ ಪುನಃ ನಮಸ್ಕಾರ.

೫೬-೫೮. ಯಾವ ದೇವಿಯು ಸಕಲ ಪ್ರಾಣಿಗಳಲ್ಲಿಯೂ ಲಕ್ಷ್ಮೀರೂಪದಿಂದ ನೆಲಸಿರುವಳೋ, ಅವಳಿಗೆ ಪುನಃ ಪುನಃ ನಮಸ್ಕಾರ.

ಯಾ ದೇವೀ ಸರ್ವಭೂತೇಷು ವೃತ್ತಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೫೯-೬೧ ॥

ಯಾ ದೇವೀ ಸರ್ವಭೂತೇಷು ಸ್ಮೃತಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೬೨-೬೪ ॥

ಯಾ ದೇವೀ ಸರ್ವಭೂತೇಷು ದಯಾರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೬೫-೬೭॥

ಯಾ ದೇವೀ ಸರ್ವಭೂತೇಷು ತುಷ್ಟಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೬೮-೭೦ ॥

ಯಾ ದೇವೀ ಸರ್ವಭೂತೇಷು ಮಾತೃರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೭೧-೭೩ ॥

ಯಾ ದೇವೀ ಸರ್ವಭೂತೇಷು ಭ್ರಾಂತಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೭೪-೭೬ ॥

ಇಂದ್ರಿಯಾಣಾಮಧಿಷ್ಠಾತ್ರೀ ಭೂತಾನಾಂ ಚಾಖಿಲೇಷು ಯಾ ।
ಭೂತೇಷು ಸತತಂ ತಸ್ಯೈ ವ್ಯಾಪ್ತಿದೇವ್ಯೈ ನಮೋ ನಮಃ ॥ ೭೭ ॥

ಚಿತಿರೂಪೇಣ ಯಾ ಕೃತ್ಸ್ನಮೇತದ್ವ್ಯಾಪ್ಯ ಸ್ಥಿತಾ ಜಗತ್ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೭೮-೮೦ ॥

ಸ್ತುತಾ ಸುರೈಃ ಪೂರ್ವಮಭೀಷ್ಟಸಂಶ್ರಯಾತ್
ತಥಾ ಸುರೇಂದ್ರೇಣ ದಿನೇಷು ಸೇವಿತಾ ।
ಕರೋತು ಸಾ ನಃ ಶುಭಹೇತುರೀಶ್ವರೀ
ಶುಭಾನಿ ಭದ್ರಾಣ್ಯಭಿಹಂತು ಚಾಪದಃ ॥ ೮೧ ॥

೫೯-೬೧. ಯಾವ ದೇವಿಯು ಸಕಲ ಭೂತಗಳಲ್ಲಿಯೂ ವೃತ್ತಿ ರೂಪದಿಂದ ನೆಲಸಿರುವಳೊ, ಆ ದೇವಿಗೆ ಪುನಃ ಪುನಃ ನಮಸ್ಕಾರ.

೬೨-೬೪. ಯಾವ ದೇವಿಯು ಸರ್ವಜೀವಿಗಳಲ್ಲಿ ನೆನಪಿನ ರೂಪದಿಂದ ನೆಲಸಿರುವಳೊ, ಆವಳಿಗೆ ಅನೇಕ ನಮಸ್ಕಾರಗಳು.

೬೫-೬೭. ಯಾವ ದೇವಿಯು ಸಕಲ ಪ್ರಾಣಿಗಳಲ್ಲಿಯೂ ದಯಾ ರೂಪದಿಂದ ನೆಲಸಿರುವಳೊ, ಆ ದೇವಿಗೆ ಪುನಃ ಪುನಃ ನಮಸ್ಕಾರ.

೬೮-೭೦. ಯಾವ ದೇವಿಯು ಸರ್ವಜಂತುಗಳಲ್ಲಿಯೂ ತೃಪ್ತಿಯ ರೂಪದಿಂದ ನೆಲಸಿರುವಳೊ, ಆ ದೇವಿಗೆ ಪುನಃ ಪುನಃ ನಮಸ್ಕಾರ.

೭೧-೭೩. ಯಾವ ದೇವಿಯು ಸರ್ವಭೂತಗಳಲ್ಲಿಯೂ ಮಾತೃ ರೂಪದಿಂದ ನೆಲಸಿರುವಳೊ, ಆ ದೇವಿಗೆ ಪುನಃ ಪುನಃ ನಮಸ್ಕಾರ.

೭೪-೭೬. ಯಾವ ದೇವಿಯು ಸರ್ವಪ್ರಾಣಿಗಳಲ್ಲಿಯೂ ಭ್ರಾಂತಿಯ ರೂಪದಿಂದ ನೆಲೆಸಿರುವಳೊ, ಆ ದೇವಿಗೆ ಮತ್ತೆ ಮತ್ತೆ ನಮಸ್ಕಾರ.

೭೭. ಯಾವ ದೇವಿಯು ಇಂದ್ರಿಯಗಳ ಮತ್ತು ಪಂಚಭೂತಗಳ ಅಧಿಷ್ಠಾತ್ರಿಯೊ, ಅಂತಹ ಸರ್ವವ್ಯಾಪಿಯಾದ ದೇವಿಗೆ ಪುನಃ ಪುನಃ ನಮಸ್ಕಾರ.

೭೮-೮೦. ಯಾವ ದೇವಿಯು ಚಿದ್ರೂಪದಿಂದ ಈ ಜಗತ್ತನ್ನು ವ್ಯಾಪಿಸಿರುವಳೋ, ಆ ದೇವಿಗೆ ಪುನಃ ಪುನಃ ನಮಸ್ಕಾರ.

೮೧-೮೨. ಯಾವ ದೇವಿಯ ಸ್ತುತಿಯನ್ನು ಹಿಂದೆ (ಬ್ರಹ್ಮಾದಿ) ದೇವತೆಗಳು ಮಾಡಿದ್ದರೋ, ದೇವರಾಜನಾದ ಇಂದ್ರನು ತನ್ನ ಅಭೀಷ್ಟ ವನ್ನು (ಎಂದರೆ ಮಹಿಷಾಸುರವಧೆಯನ್ನು) ಹೊಂದಿದ ಮೇಲೆ ಯಾರ ಸೇವೆಯನ್ನು ದಿನದಿನವೂ ಮಾಡುತ್ತಿರುವನೋ, (ಶುಂಭ ಮೊದಲಾದ) ಸೊಕ್ಕುಳ್ಳ ದೈತ್ಯರಿಂದ ಪೀಡಿತರಾಗಿ ಈಗಲೂ ಯಾವ ಈಶ್ವರಿಯನ್ನು ದೇವತೆಗಳಾದ ನಾವು ನಮಸ್ಕರಿಸುತ್ತಿದ್ದೇವೆಯೋ, ಭಕ್ತಿಯಿಂದ ನಮ್ರವಾದ ದೇಹವುಳ್ಳ ನಮ್ಮಿಂದ ಸ್ಮರಿಸಲ್ಪಟ್ಟು ಯಾವ ದೇವಿಯು ಸಕಲ ವಿಪತ್ತು

ಯಾ ಸಾಂಪ್ರತಂ ಚೋದ್ಧತದೈತ್ಯತಾಪಿತೈ-
ರಸ್ಮಾಭಿರೀಶಾ ಚ ಸುರೈರ್ನಮಸ್ಯತೇ ।
ಯಾ ಚ ಸ್ಮೃತಾ ತತ್ಕ್ಷಣಮೇವ ಹಂತಿ ನಃ
ಸರ್ವಾಪದೋ ಭಕ್ತಿವಿನಮ್ರಮೂರ್ತಿಭಿಃ ॥ ೮೨ ॥

ಋಷಿರುವಾಚ ॥ ೮೩ ॥

ಏವಂ ಸ್ತವಾದಿಯುಕ್ತಾನಾಂ ದೇವಾನಾಂ ತತ್ರ ಪಾರ್ವತೀ ।
ಸ್ನಾತುಮಭ್ಯಾಯಯೌ ತೋಯೇ ಜಾಹ್ನವ್ಯಾ ನೃಪನಂದನ ॥ ೮೪ ॥

ಸಾಽಬ್ರವೀತ್ ತಾನ್ ಸುರಾನ್ ಸುಭ್ರೂರ್ಭವದ್ಭಿಃ ಸ್ತೂಯತೇಽತ್ರ ಕಾ।
ಶರೀರಕೋಶತಶ್ಚಾಸ್ಯಾಃ ಸಮುದ್ಭೂತಾಽಬ್ರವೀಚ್ಛಿವಾ ॥ ೮೫ ॥

ಸ್ತೋತ್ರಂ ಮಮೈತತ್ ಕ್ರಿಯತೇ ಶುಂಭದೈತ್ಯನಿರಾಕೃತೈಃ ।
ದೇವೈಃ ಸಮೇತೈಃ ಸಮರೇ ನಿಶುಂಭೇನ ಪರಾಜಿತೈಃ ॥ ೮೬ ॥

ಶರೀರಕೋಶಾದ್ಯತ್ತಸ್ಯಾಃ ಪಾರ್ವತ್ಯಾ ನಿಸ್ಸೃತಾಂಬಿಕಾ ।
ಕೌಶಿಕೀತಿ ಸಮಸ್ತೇಷು ತತೋ ಲೋಕೇಷು ಗೀಯತೇ ॥ ೮೭ ॥

ತಸ್ಯಾಂ ವಿನಿರ್ಗತಾಯಾಂ ತು ಕೃಷ್ಣಾಽಭೂತ್ ಸಾಽಪಿ ಪಾರ್ವತೀ ।
ಕಾಲಿಕೇತಿ ಸಮಾಖ್ಯಾತಾ ಹಿಮಾಚಲಕೃತಾಶ್ರಯಾ ॥ ೮೮ ॥

ತತೋಽಂಬಿಕಾಂ ಪರಂ ರೂಪಂ ಬಿಭ್ರಾಣಾಂ ಸುಮನೋಹರಮ್ ।
ದದರ್ಶ ಚಂಡೋ ಮುಂಡಶ್ಚ ಭೃತ್ಯೌ ಶುಂಭನಿಶುಂಭಯೋಃ ॥ ೮೯ ॥

ತಾಭ್ಯಾಂ ಶುಂಭಾಯ ಚಾಖ್ಯಾತಾ ಸಾಽತೀವ ಸುಮನೋಹರಾ ।
ಕಾಽಪ್ಯಾಸ್ತೇ ಸ್ತ್ರೀ ಮಹಾರಾಜ ಭಾಸಯಂತೀ ಹಿಮಾಚಲಮ್ ॥ ೯೦ ॥

ಗಳನ್ನು ತತ್ಷಣವೇ ನಾಶಮಾಡುವಳೋ, ಆ ಮಂಗಳಕರಳಾದ ಈಶ್ವರಿಯು ನಮಗೆ ಶುಭವನ್ನೂ, ಮಂಗಳವನ್ನೂ ಉಂಟುಮಾಡಿ ವಿಪತ್ತುಗಳನ್ನು ಹೋಗಲಾಡಿಸಲಿ !

೮೩-೮೪. ಸುಮೇಧಸು ಹೇಳಿದನು: ಹೀಗೆ ದೇವತೆಗಳು ಸ್ತುತಿಸುತ್ತಿರುವಾಗ – ಎಲೈ ರಾಜನೆ–ಜಾಹ್ನವಿಯ ಜಲದಲ್ಲಿ ಸ್ನಾನಮಾಡುವುದಕ್ಕಾಗಿ ಪಾರ್ವತಿಯು ಅಲ್ಲಿಗೆ ಬಂದಳು.

೮೫. ಸುಂದರವಾದ ಹುಬ್ಬುಳ್ಳ ಆಕೆಯು ಆ ದೇವತೆಗಳನ್ನು ಕುರಿತು 'ನೀವಾರನ್ನು ಸ್ತುತಿಸುತ್ತಿರುವಿರಿ?' ಎಂದು ಕೇಳಿದಳು. ಆಗ ಆಕೆಯ ಶರೀರಕೋಶದಿಂದ ಉದ್ಭವಿಸಿದ ಶಿವೆಯು ಹೀಗೆಂದಳು :

೮೬. 'ಶುಂಭನೆಂಬ ರಾಕ್ಷಸನಿಂದ ಹೊರದೂಡಲ್ಪಟ್ಟಿರುವ ಮತ್ತು ಯುದ್ಧದಲ್ಲಿ ನಿಶುಂಭನಿಂದ ಸೋತಿರುವ ಈ ದೇವತೆಗಳು ಇಲ್ಲಿ ಸೇರಿ ಸ್ತುತಿಸುತ್ತಿರುವುದು ನನ್ನನ್ನೇ.'

೮೭. ಆ ಪಾರ್ವತಿಯ ಶರೀರಕೋಶದಿಂದ ಹೊರಬಂದ ಕಾರಣದಿಂದ ಆ ತಾಯಿಯು ಎಲ್ಲ ಲೋಕಗಳಲ್ಲಿಯೂ 'ಕೌಶಿಕೀ' ಎಂದು ಪ್ರಸಿದ್ಧಳಾಗಿದ್ದಾಳೆ.

೮೮. ಅವಳು (ತನ್ನ ಶರೀರದಿಂದ) ಹೊರಬಂದಮೇಲೆ ಆ ಪಾರ್ವತಿಯೂ ಕೂಡ ಕಪ್ಪು ಬಣ್ಣವನ್ನು ಹೊಂದಿದಳು; ಕಾಲಿಕಾ ಎಂಬ ಹೆಸರಿನಿಂದ ಪ್ರಸಿದ್ಧಳಾಗಿ ಹಿಮಾಚಲದಲ್ಲಿ ನೆಲಸಿದಳು.

೮೯. ಅನಂತರ ಶುಂಭ-ನಿಶುಂಭರ ಸೇವಕರಾದ ಚಂಡ, ಮುಂಡ ಎಂಬ ಅಸುರರು, ಅತ್ಯಂತ ಮನೋಹರವಾದ ರೂಪವನ್ನು ಹೊಂದಿರುವ ಅಂಬಿಕೆಯನ್ನು ನೋಡಿದರು.

೯೦. ಅವರಿಬ್ಬರೂ ಶುಂಭನಿಗೆ ಹೀಗೆ ಹೇಳಿದರು: ಮಹಾರಾಜನೆ, ಅತ್ಯಂತ ಸುಂದರಿಯಾದ ಯಾವಳೋ ಒಬ್ಬ ಸ್ತ್ರೀಯು ಹಿಮಾಚಲವನ್ನು ಬೆಳಗುತ್ತ ನೆಲಸಿರುತ್ತಾಳೆ.

ನೈವ ತಾದೃಕ್ ಕ್ವಚಿದ್ರೂಪಂ ದೃಷ್ಟಂ ಕೇನಚಿದುತ್ತಮಮ್ ।
ಜ್ಞಾಯತಾಂ ಕಾಽಪ್ಯಸೌ ದೇವೀ ಗೃಹ್ಯತಾಂ ಚಾಸುರೇಶ್ವರ ॥ ೯೧ ॥

ಸ್ತ್ರೀರತ್ನಮತಿಚಾರ್ವಂಗೀ ದ್ಯೋತಯಂತೀ ದಿಶಸ್ತ್ವಿಷಾ।
ಸಾ ತು ತಿಷ್ಠತಿ ದೈತ್ಯೇಂದ್ರ ತಾಂ ಭವಾನ್ ದ್ರಷ್ಟುಮರ್ಹತಿ ॥ ೯೨ ॥

ಯಾನಿ ರತ್ನಾನಿ ಮಣಯೋ ಗಜಾಶ್ವಾದೀನಿ ವೈ ಪ್ರಭೋ।
ತ್ರೈಲೋಕ್ಯೇ ತು ಸಮಸ್ತಾನಿ ಸಾಂಪ್ರತಂ ಭಾಂತಿ ತೇ ಗೃಹೇ ॥ ೯೩ ॥

ಐರಾವತಃ ಸಮಾನೀತೋ ಗಜರತ್ನಂ ಪುರಂದರಾತ್।
ಪಾರಿಜಾತತರುಶ್ಚಾಯಂ ತಥೈವೋಚ್ಚೈಃಶ್ರವಾ ಹಯಃ ॥ ೯೪ ॥

ವಿಮಾನಂ ಹಂಸಸಂಯುಕ್ತಮೇತತ್ತಿಷ್ಠತಿ ತೇಽಂಗಣೇ।
ರತ್ನಭೂತಮಿಹಾನೀತಂ ಯದಾಸೀದ್ವೇಧಸೋಽದ್ಭುತಮ್ ॥ ೯೫ ॥

ನಿಧಿರೇಷ ಮಹಾಪದ್ಮಃ ಸಮಾನೀತೋ ಧನೇಶ್ವರಾತ್।
ಕಿಂಜಲ್ಕಿನೀಂ ದದೌ ಚಾಬ್ಧಿರ್ಮಾಲಾಮಮ್ಲಾನಪಂಕಜಾಮ್ ॥ ೯೬ ॥

ಛತ್ರಂ ತೇ ವಾರುಣಂ ಗೇಹೇ ಕಾಂಚನಸ್ರಾವಿ ತಿಷ್ಠತಿ।
ತಥಾಽಯಂ ಸ್ಯಂದನವರೋ ಯಃ ಪುರಾಽಽಸೀತ್ಪ್ರಜಾಪತೇಃ ॥ ೯೭ ॥

ಮೃತ್ಯೋರುತ್ಕ್ರಾಂತಿದಾ ನಾಮ ಶಕ್ತಿರೀಶ ತ್ವಯಾ ಹೃತಾ।
ಪಾಶಃ ಸಲಿಲರಾಜಸ್ಯ ಭ್ರಾತುಸ್ತವ ಪರಿಗ್ರಹೇ ॥ ೯೮ ॥

ನಿಶುಂಭಸ್ಯಾಬ್ಧಿಜಾತಾಶ್ಚ ಸಮಸ್ತಾ ರತ್ನಜಾತಯಃ।
ವಹ್ನಿರಪಿ ದದೌ ತುಭ್ಯಮಗ್ನಿಶೌಚೇ ಚ ವಾಸಸೀ ॥ ೯೯ ॥

೯೧. ಅಂತಹ ಉತ್ತಮರೂಪವನ್ನು ಯಾವನೂ ಎಲ್ಲಿಯೂ ನೋಡಿಲ್ಲ! ಅಸುರರಾಜನೆ, ಆ ದೇವಿಯು ಯಾವಳೆಂಬುದನ್ನು ತಿಳಿಯಬೇಕು ಮತ್ತು ಅವಳನ್ನು ವಶಪಡಿಸಿಕೊಳ್ಳಬೇಕು.

೯೨. ಅತಿ ಸುಂದರವಾದ ಅವಯವಗಳನ್ನುಳ್ಳ ಆ ಸ್ತ್ರೀರತ್ನವು ದಿಕ್ಕುಗಳನ್ನು ತನ್ನ ಕಾಂತಿಯಿಂದ ಬೆಳಗುತ್ತ ನೆಲಸಿರುತ್ತಾಳೆ. ದೈತ್ಯರಾಜನೆ, ನೀನವಳನ್ನು ನೋಡಬೇಕು!

೯೩. ಎಲೈ ಪ್ರಭುವೇ, ಮೂರು ಲೋಕಗಳಲ್ಲಿಯೂ ಯಾವ ಯಾವ ರತ್ನಗಳು, ಮಣಿಗಳು, ಆನೆ, ಕುದುರೆಗಳು – ಇತ್ಯಾದಿಗಳೇನೇನಿದ್ದವೋ ಅವೆಲ್ಲವೂ ಈಗ ನಿನ್ನ ಮನೆಯಲ್ಲಿ ರಾರಾಜಿಸುತ್ತಿವೆ.

೯೪. (ನೀನು) ಇಂದ್ರನಿಂದ ಐರಾವತವೆಂಬ ಗಜರತ್ನವನ್ನೂ, ಈ ಪಾರಿಜಾತವೃಕ್ಷವನ್ನೂ, ಹಾಗೆಯೇ ಉಚ್ಚೈಶ್ರವಸ್ ಎಂಬ ಕುದುರೆಯನ್ನೂ ತಂದಿರುವೆ.

೯೫. ಹಿಂದೆ ಬ್ರಹ್ಮನ ಬಳಿಯಿದ್ದ, ಹಂಸಗಳಿಂದ ಯುಕ್ತವಾದ, ವಿಮಾನರತ್ನವು ಇಲ್ಲಿಗೆ ತರಲ್ಪಟ್ಟು ಈಗ ನಿನ್ನ ಅಂಗಳದಲ್ಲಿ ನಿಂತಿರುತ್ತದೆ.

೯೬. ಕುಬೇರನಿಂದ ಕಿತ್ತು ತರಲ್ಪಟ್ಟಿದ್ದು ಈ ಮಹಾಪದ್ಮವೆಂಬ ನಿಧಿ. ಸಮುದ್ರರಾಜನು ಬಾಡದೆ ಇರುವ ಕಮಲಗಳಿಂದ ಮಾಡಿದ ಕಿಂಜಲ್ಕಿನೀ ಎಂಬೀ ಮಾಲೆಯನ್ನು ಕೊಟ್ಟಿರುವನು.

೯೭. ನಿನ್ನ ಮನೆಯುಲ್ಲಿರುವ, ಕಾಂಚನವನ್ನು ಸ್ರವಿಸಬಲ್ಲ, ಈ ಛತ್ರಿಯು ವರುಣನಿಗೆ ಸೇರಿದ್ದು. ಹಾಗೆಯೇ ಈ ಶ್ರೇಷ್ಠರಥವು ಹಿಂದೆ ಪ್ರಜಾಪತಿಯದಾಗಿತ್ತು.

೯೮. ಹೇ ಸ್ವಾಮಿಯೇ, ಮರಣವನ್ನುಂಟುಮಾಡಬಲ್ಲದ್ದೆಂದು ಪ್ರಸಿದ್ಧವಾಗಿರುವ ಈ ಪಾಶವನ್ನು ನೀನು ಮೃತ್ಯುವಿನಿಂದ ಅಪಹರಿಸಿರುತ್ತೀಯೆ. ನೀರಿಗೆ ರಾಜನಾದ ವರುಣನ ಪಾಶಾಯುಧಗಳು (ಈಗ) ನಿನ್ನ ತಮ್ಮನ ಕೈಯಲ್ಲಿರುತ್ತವೆ.

೯೯. ಸಮುದ್ರದಲ್ಲಿ ಸಿಕ್ಕುವ ವಿವಿಧ ಜಾತಿಯ ರತ್ನಗಳೆಲ್ಲವೂ ನಿಶುಂಭನದವಾಗಿವೆ. ಅಗ್ನಿಯಾದರೋ ನಿನಗೆ ಅಗ್ನಿಯಲ್ಲಿ ಶುಚಿಯನ್ನು ಹೊಂದುವ ಎರಡು ವಸ್ತ್ರಗಳನ್ನೂ ಕೊಟ್ಟಿರುವನು.

ಏವಂ ದೈತ್ಯೇಂದ್ರ ರತ್ನಾನಿ ಸಮಸ್ತಾನ್ಯಾಹೃತಾನಿ ತೇ।
ಸ್ತ್ರೀರತ್ನಮೇಷಾ ಕಲ್ಯಾಣೀ ತ್ವಯಾ ಕಸ್ಮಾನ್ನ ಗೃಹ್ಯತೇ ॥ ೧೦೦ ॥

ಋಷಿರುವಾಚ ॥ ೧೦೧ ॥

ನಿಶಮ್ಯೇತಿ ವಚಃ ಶುಂಭಃ ಸ ತದಾ ಚಂಡಮುಂಡಯೋಃ।
ಪ್ರೇಷಯಾಮಾಸ ಸುಗ್ರೀವಂ ದೂತಂ ದೇವ್ಯಾ
ಮಹಾಽಸುರಮ್ ॥ ೧೦೨ ॥

ಇತಿ ಚೇತಿ ಚ ವಕ್ತವ್ಯಾ ಸಾ ಗತ್ವಾ ವಚನಾನ್ಮಮ।
ಯಥಾ ಚಾಭ್ಯೇತಿ ಸಂಪ್ರೀತ್ಯಾ ತಥಾ ಕಾರ್ಯಂ ತ್ವಯಾ ಲಘು ॥ ೧೦೩ ॥

ಸ ತತ್ರ ಗತ್ವಾ ಯತ್ರಾಸ್ತೇ ಶೈಲೋದ್ದೇಶೇಽತಿಶೋಭನೇ।
ಸಾ ದೇವೀ ತಾಂ ತತಃ ಪ್ರಾಹ ಶ್ಲಕ್ಷ್ಣಂ ಮಧುರಯಾ ಗಿರಾ ॥ ೧೦೪ ॥

ದೂತ ಉವಾಚ ॥ ೧೦೫ ॥

ದೇವಿ ದೈತ್ಯೇಶ್ವರಃ ಶುಂಭಸ್ತ್ರೈಲೋಕ್ಯೇ ಪರಮೇಶ್ವರಃ।
ದೂತೋಽಹಂ ಪ್ರೇಷಿತಸ್ತೇನ ತ್ವತ್ಸಕಾಶಮಿಹಾಗತಃ ॥ ೧೦೬ ॥

ಅವ್ಯಾಹತಾಜ್ಞಃ ಸರ್ವಾಸು ಯಃ ಸದಾ ದೇವಯೋನಿಷು।
ನಿರ್ಜಿತಾಖಿಲದೈತ್ಯಾರಿಃ ಸ ಯದಾಹ ಶೃಣುಷ್ವ ತತ್ ॥ ೧೦೭ ॥

ಮಮ ತ್ರೈಲೋಕ್ಯಮಖಿಲಂ ಮಮ ದೇವಾ ವಶಾನುಗಾಃ।
ಯಜ್ಞಭಾಗಾನಹಂ ಸರ್ವಾನುಪಾಶ್ನಾಮಿ ಪೃಥಕ್ ಪೃಥಕ್ ॥ ೧೦೮ ॥

ತ್ರೈಲೋಕ್ಯೇ ವರರತ್ನಾನಿ ಮಮ ವಶ್ಯಾನ್ಯಶೇಷತಃ।
ತಥೈವ ಗಜರತ್ನಂ ಚ ಹೃತಂ ದೇವೇಂದ್ರವಾಹನಮ್ ॥ ೧೦೯ ॥

ಕ್ಷೀರೋದಮಥನೋದ್ಭೂತಮಶ್ವರತ್ನಂ ಮಮಾಮರೈಃ।
ಉಚ್ಚೈಃಶ್ರವಸಸಂಜ್ಞಂ ತತ್ ಪ್ರಣಿಪತ್ಯ ಸಮರ್ಪಿತಮ್ ॥ ೧೧೦ ॥

೧೦೦. ಎಲೈ ದೈತ್ಯರಾಜನೇ, ಸಮಸ್ತ ಶ್ರೇಷ್ಠವಸ್ತುಗಳನ್ನೂ ನೀನು ತಂದಿಟ್ಟಿರುತ್ತೀಯೆ. ಸ್ತ್ರೀರತ್ನಳಾದ ಈ ಕಲ್ಯಾಣಿಯನ್ನೇಕೆ ನೀನಿನ್ನೂ ಹಿಡಿದು ತರಲಿಲ್ಲ?

೧೦೧-೧೦೨. ಸುಮೇಧ ಋಷಿಯು ಇಂತೆಂದನು: ಚಂಡಮುಂಡರ ಈ ಮಾತನ್ನು ಕೇಳಿ ಶುಂಭನು ಸುಗ್ರೀವನೆಂಬ ಮಹಾಸುರನನ್ನು ದೂತನನ್ನಾಗಿ ದೇವಿಯ ಬಳಿಗೆ ಕಳಿಸಿದನು.

೧೦೩. (ಶುಂಭ:) (ನೀನು ಅವಳಲ್ಲಿಗೆ) ಹೋಗಿ, ಅವಳು ಪ್ರಸನ್ನಳಾಗಿ ಇಲ್ಲಿಗೆ ತ್ವರೆಯಿಂದ ಬರುವುದಕ್ಕಾಗಿ ಎಂತೆಂತಹ ಮಾತುಗಳನ್ನಾಡಬೇಕೋ ಅಂತಹ ಮಾತುಗಳನ್ನು ನನ್ನ ಆಜ್ಞೆಯಂತೆ ಆಡು.

೧೦೪. ಅತ್ಯಂತ ಸುಂದರವಾದ ಯಾವ ಪರ್ವತ ಪ್ರದೇಶದಲ್ಲಿ ದೇವಿಯು ನೆಲೆಸಿದ್ದಳೋ ಅಲ್ಲಿಗೆ ಹೋಗಿ ಅವನು ಆ ದೇವಿಯನ್ನು ಕುರಿತು ಮಧುರವಾದ ಮಾತುಗಳಿಂದ ಹೀಗೆಂದನು.

೧೦೫-೧೦೬. ದೂತನಿಂತೆಂದನು: ಎಲೈ ದೇವಿ, ದೈತ್ಯೇಶ್ವರನಾದ ಶುಂಭನು (ಈಗ) ಮೂರು ಲೋಕಗಳಿಗೂ ಪರಮೇಶ್ವರನಾಗಿರುತ್ತಾನೆ. ನಿನ್ನ ಬಳಿಗೆ ಬಂದಿರುವ ನಾನು ಅವನಿಂದ ಕಳಿಸಲ್ಪಟ್ಟಿರುವ ದೂತನು.

೧೦೭. ಯಾವನ ಆಜ್ಞೆಯನ್ನು ಎಲ್ಲ ದೇವತೆಗಳೂ ತಡೆಯಿಲ್ಲದೆ ಪರಿಪಾಲಿಸುವರೊ ಅಂತಹ, ಸಮಸ್ತ ದೈತ್ಯಾದಿಗಳನ್ನೂ ಗೆದ್ದಿರುವ, ಆ ಶುಂಭನು ಹೇಳಿ ಕಳಿಸಿರುವುದನ್ನು ಕೇಳು:

೧೦೮. ಮೂರು ಲೋಕಗಳೂ ನನ್ನವು, ದೇವತೆಗಳೆಲ್ಲ ನನ್ನ ವಶರು; (ಅವರೆಲ್ಲರ) ಯಜ್ಞಭಾಗಗಳೆಲ್ಲವನ್ನೂ ನಾನೇ ಬೇರೆಬೇರೆಯಾಗಿ ಭುಂಜಿಸುತ್ತಿರುವೆನು.

೧೦೯. ಮೂರು ಲೋಕಗಳಲ್ಲಿಯೂ (ಯಾವ ಯಾವ) ಶ್ರೇಷ್ಠ ರತ್ನಗಳಿವೆಯೋ ಅವೆಲ್ಲವೂ ನನ್ನ ವಶದಲ್ಲಿವೆ. ಹಾಗೆಯೇ ದೇವೇಂದ್ರನ ವಾಹನವಾದ ಗಜರತ್ನವನ್ನೂ ಅಪಹರಿಸಿ ತಂದಿಟ್ಟದ್ದೇನೆ.

೧೧೦. ಉಚ್ಚೈಃಶ್ರವಸ್ ಎಂಬ ಹೆಸರಿನ ಯಾವ ಅಶ್ವರತ್ನವು ಕ್ಷೀರಸಮುದ್ರಮಥನದಿಂದ ಹುಟ್ಟಿತೋ ಅದನ್ನು ದೇವತೆಗಳು ನನಗೆ ಸಪ್ರಣಾಮವಾಗಿ ಸಮರ್ಪಿಸಿರುತ್ತಾರೆ.

ಯಾನಿ ಚಾನ್ಯಾನಿ ದೇವೇಷು ಗಂಧರ್ವೇಷೂರಗೇಷು ಚ ।
ರತ್ನಭೂತಾನಿ ಭೂತಾನಿ ತಾನಿ ಮಯ್ಯೇವ ಶೋಭನೇ ॥ ೧೧೧ ॥

ಸ್ತ್ರೀರತ್ನಭೂತಾಂ ತ್ವಾಂ ದೇವಿ ಲೋಕೇ ಮನ್ಯಾಮಹೇ ವಯಮ್ ।
ಸಾ ತ್ವಮಸ್ಮಾನುಪಾಗಚ್ಛ ಯತೋ ರತ್ನಭುಜೋ ವಯಮ್ ॥ ೧೧೨ ॥

ಮಾಂ ವಾ ಮಮಾನುಜಂ ವಾಽಪಿ ನಿಶುಂಭಮುರುವಿಕ್ರಮಮ್ ।
ಭಜ ತ್ವಂ ಚಂಚಲಾಪಾಂಗಿ ರತ್ನಭೂತಾಽಸಿ ವೈ ಯತಃ ॥ ೧೧೩ ॥

ಪರಮೈಶ್ವರ್ಯಮತುಲಂ ಪ್ರಾಪ್ಸ್ಯಸೇ ಮತ್ಪರಿಗ್ರಹಾತ್ ।
ಏತದ್ ಬುದ್ಧ್ಯಾ ಸಮಾಲೋಚ್ಯ ಮತ್ಪರಿಗ್ರಹತಾಂ ವ್ರಜ ॥ ೧೧೪ ॥

ಋಷಿರುವಾಚ ॥ ೧೧೫ ॥

ಇತ್ಯುಕ್ತಾ ಸಾ ತದಾ ದೇವೀ ಗಂಭೀರಾಂತಸ್ಸ್ಮಿತಾ ಜಗೌ ।
ದುರ್ಗಾ ಭಗವತೀ ಭದ್ರಾ ಯಯೇದಂ ಧಾರ್ಯತೇ ಜಗತ್ ॥ ೧೧೬ ॥

ದೇವ್ಯುವಾಚ ॥ ೧೧೭ ॥

ಸತ್ಯಮುಕ್ತಂ ತ್ವಯಾ ನಾತ್ರ ಮಿಥ್ಯಾ ಕಿಂಚಿತ್ತ್ವಯೋದಿತಮ್ ।
ತ್ರೈಲೋಕ್ಯಾಧಿಪತಿಃ ಶುಂಭೋ ನಿಶುಂಭಶ್ಚಾಪಿ ತಾದೃಶಃ ॥ ೧೧೮ ॥

ಕಿಂ ತ್ವತ್ರ ಯತ್ಪ್ರತಿಜ್ಞಾತಂ ಮಿಥ್ಯಾ ತತ್ ಕ್ರಿಯತೇ ಕಥಮ್ ।
ಶ್ರೂಯತಾಮಲ್ಪಬುದ್ಧಿತ್ವಾತ್ ಪ್ರತಿಜ್ಞಾ ಯಾ ಕೃತಾ ಪುರಾ ॥ ೧೧೯ ॥

ಯೋ ಮಾಂ ಜಯತಿ ಸಂಗ್ರಾಮೇ ಯೋ ಮೇ ದರ್ಪಂ ವ್ಯಪೋಹತಿ ।
ಯೋ ಮೇ ಪ್ರತಿಬಲೋ ಲೋಕೇ ಸ ಮೇ ಭರ್ತಾ
ಭವಿಷ್ಯತಿ ॥ ೧೨೦ ॥

೧೧೧. ಎಲೈ ಶೋಭನೇ, ದೇವತೆಗಳಲ್ಲಿ, ಗಂಧರ್ವರಲ್ಲಿ ಮತ್ತು ಪನ್ನಗರಲ್ಲಿ ಅತ್ಯುತ್ತಮವಾದ ಯಾವ ಯಾವ ವಸ್ತುಗಳಿವೆಯೋ ಅವೆಲ್ಲವೂ (ಈಗ) ನನ್ನಲ್ಲಿವೆ.

೧೧೨. ದೇವಿ, ಈ ಲೋಕದಲ್ಲಿ ನೀನು ಸ್ತ್ರೀರತ್ನಳೆಂದು ನಾವು ಎಣಿಸಿರುವೆವು. ಅಂತಹ ನೀನು ನಮ್ಮನ್ನು ಸೇರಬೇಕು; ಏಕೆಂದರೆ ನಾವು (ಕೇವಲ) ಅತ್ಯುತ್ತಮವಾದುದನ್ನೇ ಭೋಗಿಸತಕ್ಕವರು.

೧೧೩. ಚಂಚಲವಾದ ಕಡೆಗಣ್ಣೋಟವುಳ್ಳವಳೆ, ನೀನು ರತ್ನಪ್ರಾಯ ಳಾಗಿರುವುದರಿಂದಲೇ, ನನ್ನನ್ನಾಗಲಿ, ನನ್ನ ತಮ್ಮನಾದ ಮಹಾಪರಾಕ್ರಮಶಾಲಿ ಯಾದ ನಿಶುಂಭನನ್ನಾಗಲಿ ಸೇವಿಸು.

೧೧೪. ನನ್ನನ್ನು ಸ್ವೀಕರಿಸುವುದರಿಂದ ಅತುಲವಾದ ಐಶ್ವರ್ಯವನ್ನು ಹೊಂದುತ್ತೀಯೆ. ಇದನ್ನು ಬುದ್ಧಿಪೂರ್ವಕವಾಗಿ ಸಮಾಲೋಚಿಸಿ ನನ್ನನ್ನು ಪರಿಗ್ರಹಿಸು.

೧೧೫-೧೧೬. ಸುಮೇಧನು ಹೇಳಿದನು: ಯಾವಳಿಂದ ಈ ಜಗತ್ತು ಧೃತವಾಗಿದೆಯೋ ಆ ದುರ್ಗೆಯೂ, ಭಗವತಿಯೂ, ಭದ್ರಕಾಳಿಯೂ ಆದ ದೇವಿಯು ಈ ಮಾತನ್ನು ಕೇಳಿದಾಗ ಒಳಗಡೆ ನಗುತ್ತ, ಮೇಲೆ ಗಾಂಭೀರ್ಯವನ್ನು ತಾಳಿದಳು.

೧೧೭-೧೧೮. ದೇವಿಯು ಇಂತೆಂದಳು: ನೀನು ಹೇಳಿದ್ದು ದಿಟವೇ. ಇದರಲ್ಲಿ ಸುಳ್ಳಾದುದು ಏನೂ ಇಲ್ಲ. ಶುಂಭನು ಮೂರು ಲೋಕಗಳಿಗೂ ಒಡೆಯನೇ; ನಿಶುಂಭನೂ ಅಂತಹವನೇ.

೧೧೯. ಆದರೆ ಈ ವಿಷಯದಲ್ಲಿ (ನಾನು) ಮಾಡಿರುವ ಪ್ರತಿಜ್ಞೆ ಯನ್ನು ಹೇಗೆ ಸುಳ್ಳಾಗಿಸುವುದು? ಹಿಂದೆ ಅಲ್ಪಬುದ್ಧಿಯಿಂದ ನಾನು ಮಾಡಿದ ಪ್ರತಿಜ್ಞೆಯನ್ನು ಕೇಳು:

೧೨೦. ಯಾವನು ನನ್ನನ್ನು ಯುದ್ಧದಲ್ಲಿ ಜಯಿಸುವನೋ, ಯಾವನು ನನ್ನ ದರ್ಪವನ್ನು ಹೋಗಲಾಡಿಸುವನೋ, ಯಾವನು ನನಗೆ ಸರಿಯಾದ ಪ್ರತಿದ್ವಂದ್ವಿಯೋ ಅವನೇ ನನ್ನ ಪತಿಯಾಗುವನು.

ತದಾಗಚ್ಛತು ಶುಂಭೋಽತ್ರ ನಿಶುಂಭೋ ವಾ ಮಹಾಬಲಃ ।
ಮಾಂ ಜಿತ್ವಾ ಕಿಂ ಚಿರೇಣಾತ್ರ ಪಾಣಿಂ ಗೃಹ್ಣಾತು ಮೇ ಲಘು ॥ ೧೨೧ ॥

ದೂತ ಉವಾಚ ॥ ೧೨೨ ॥

ಅವಲಿಪ್ತಾಽಸಿ ಮೈವಂ ತ್ವಂ ದೇವಿ ಬ್ರೂಹಿ ಮಮಾಗ್ರತಃ ।
ತ್ರೈಲೋಕ್ಯೇ ಕಃ ಪುಮಾಂಸ್ತಿಷ್ಠೇದಗ್ರೇ ಶುಂಭ-ನಿಶುಂಭಯೋಃ ॥ ೧೨೩ ॥

ಅನ್ಯೇಷಾಮಪಿ ದೈತ್ಯಾನಾಂ ಸರ್ವೇ ದೇವಾ ನ ವೈ ಯುಧಿ ।
ತಿಷ್ಠಂತಿ ಸಮ್ಮುಖೇ ದೇವಿ ಕಿಂ ಪುನಃ ಸ್ತ್ರೀ ತ್ವಮೇಕಿಕಾ ॥ ೧೨೪ ॥

ಇಂದ್ರಾದ್ಯಾಸ್ಸಕಲಾ ದೇವಾಸ್ತಸ್ಥುರ್ಯೇಷಾಂ ನ ಸಂಯುಗೇ ।
ಶುಂಭಾದೀನಾಂ ಕಥಂ ತೇಷಾಂ ಸ್ತ್ರೀ ಪ್ರಯಾಸ್ಯಸಿ
ಸಮ್ಮುಖಮ್ ॥ ೧೨೫ ॥

ಸಾ ತ್ವಂ ಗಚ್ಛ ಮಯೈವೋಕ್ತಾ ಪಾರ್ಶ್ವಂ ಶುಂಭನಿಶುಂಭಯೋಃ ।
ಕೇಶಾಕರ್ಷಣನಿರ್ಧೂತಗೌರವಾ ಮಾ ಗಮಿಷ್ಯಸಿ ॥ ೧೨೬ ॥

ದೇವ್ಯುವಾಚ ॥ ೧೨೭ ॥

ಏವಮೇತದ್ ಬಲೀ ಶುಂಭೋ ನಿಶುಂಭಶ್ಚಾಪಿ ತಾದೃಶಃ ।
ಕಿಂ ಕರೋಮಿ ಪ್ರತಿಜ್ಞಾ ಮೇ ಯದನಾಲೋಚಿತಾ ಪುರಾ ॥ ೧೨೮ ॥

ಸ ತ್ವಂ ಗಚ್ಛ ಮಯೋಕ್ತಂ ತೇ ಯದೇತತ್ಸರ್ವಮಾದೃತಃ ।
ತದಾಚಕ್ಷ್ವಾಸುರೇಂದ್ರಾಯ ಸ ಚ ಯುಕ್ತಂ ಕರೋತು ಯತ್ ॥ ೧೨೯ ॥

ಇತಿ ಶ್ರೀಮಾರ್ಕಂಡೇಯಪುರಾಣೇ ಸಾವರ್ಣಿಕೇ ಮನ್ವಂತರೇ ದೇವೀಮಾಹಾತ್ಮ್ಯೇ
ದೇವ್ಯಾ ದೂತಸಂವಾದೋ ನಾಮ ಪಂಚಮೋಽಧ್ಯಾಯಃ

೧೨೧. ಆದುದರಿಂದ ಶುಂಭನಾಗಲಿ ಮಹಾಬಲನಾದ ನಿಶುಂಭನಾಗಲಿ ಇಲ್ಲಿಗೆ ಬರಲಿ. ನನ್ನನ್ನು (ಯುದ್ಧದಲ್ಲಿ) ಗೆದ್ದು ಶೀಘ್ರವಾಗಿಯೇ ನನ್ನ ಪಾಣಿಗ್ರಹಣ ಮಾಡಲಿ. ಅದರಲ್ಲೇಕೆ ವಿಳಂಬ?

೧೨೨-೧೨೩. ದೂತನು ಉತ್ತರಿಸಿದನು: ದೇವಿಯೇ, ನೀನು ದುರಹಂಕಾರದಿಂದ ಕೂಡಿರುವೆ! ನನ್ನ ಮುಂದೆ ಹೀಗೆನ್ನಬೇಡ! ಶುಂಭ ನಿಶುಂಭರ ಮುಂದೆ ನಿಲ್ಲಬಲ್ಲ ಪುರುಷನು ಮೂರು ಲೋಕಗಳಲ್ಲಿಯೂ ಯಾವನಿರುವನು?

೧೨೪. ದೇವತೆಗಳೆಲ್ಲರೂ ಸೇರಿದರೂ, ಯುದ್ಧದಲ್ಲಿ ಇತರ ರಾಕ್ಷಸರ ಮುಂದೆಯೂ ನಿಲ್ಲಲಾರರು! ದೇವಿಯೇ, ಇನ್ನು ಏಕಾಕಿಯೂ, ಸ್ತ್ರೀಯೂ ಆದ ನಿನ್ನ ವಿಷಯದಲ್ಲಿ ಹೇಳುವುದೇನು?

೧೨೫. ಯಾವ ಶುಂಭಾದಿಗಳೊಡನೆ ಸಂಭವಿಸಿದ ಯುದ್ಧದಲ್ಲಿ ಇಂದ್ರಾದಿ ಸಕಲ ದೇವತೆಗಳೂ ನಿಲ್ಲಲಾರದೆ ಹೋದರೋ ಅಂತಹವರನ್ನು ಕೇವಲ ಸ್ತ್ರೀಯಾದ ನೀನು ಹೇಗೆ ತಾನೆ ಬಳಿಸಾರೀಯೆ?

೧೨೬. ಅಂತಹ ನೀನು ನನ್ನ ಮಾತನ್ನು ಕೇಳಿಯೇ ಶುಂಭನಿಶುಂಭರ ಪಾರ್ಶ್ವವನ್ನು ಸೇರು. ಕೂದಲಿನಿಂದ ಸೆಳೆಯಲ್ಪಟ್ಟು ಗೌರವವನ್ನು ಕಳೆದು ಕೊಂಡು ಹೋಗುವಂತಾಗದಿರಲಿ!

೧೨೭-೧೨೮. ದೇವಿಯು ಉತ್ತರಕೊಟ್ಟಳು: ಶುಂಭನು ಬಲಶಾಲಿ ಯೆಂಬುದೂ, ನಿಶುಂಭನೂ ಅಂತಹವನೇ ಎಂಬುದೂ ನೀ ಹೇಳಿದಂತೆಯೇ ಸರಿ. ಆದರೇನು ಮಾಡಲಿ? ಏಕೆಂದರೆ ಹಿಂದೆ ನಾನು ಆಲೋಚನೆ ಮಾಡದೆ ಪ್ರತಿಜ್ಞೆ ಮಾಡಿಬಿಟ್ಟಿರುವೆನಲ್ಲ?

೧೨೯. ನೀನು ಇಲ್ಲಿಂದ ಹೋಗು. ನಿನ್ನನ್ನು ಆದರಿಸಿ ನಾನು ಏನನ್ನು ಹೇಳಿರುವೆನೊ, ಅದೆಲ್ಲವನ್ನೂ ರಾಕ್ಷಸರಾಜನಿಗೆ ಅರುಹು. ಆತನು (ತನಗೆ) ಯೋಗ್ಯವೆಂದು ಕಂಡದ್ದನ್ನು ಮಾಡಲಿ.

ಹೀಗೆ ಸಾವರ್ಣಿಕಮನ್ವಂತರಕ್ಕೆ ಸೇರಿದ ಮಾರ್ಕಂಡೇಯಪುರಾಣದಲ್ಲಿ ದೇವೀಮಾಹಾತ್ಮ್ಯದಲ್ಲಿ 'ದೇವಿಯೊಡನೆ ದೂತನ ಸಂವಾದ' ಎಂಬ ಐದನೆಯ ಅಧ್ಯಾಯವು ಮುಗಿಯಿತು.

## ಷಷ್ಠೋಽಧ್ಯಾಯಃ

### ಧೂಮ್ರಲೋಚನವಧಃ

#### ಧ್ಯಾನಮ್

ಓಂ । ನಾಗಾಧೀಶ್ವರವಿಷ್ಟರಾಂ ಫಣಿಫಣೋತ್ತಂಸೋರುರತ್ನಾವಲೀ-ಭಾಸ್ವದ್ದೇಹಲತಾಂ ದಿವಾಕರನಿಭಾಂ ನೇತ್ರತ್ರಯೋದ್ಭಾಸಿತಾಮ್।
ಮಾಲಾಕುಂಭಕಪಾಲನೀರಜಕರಾಂ ಚಂದ್ರಾರ್ಧಚೂಡಾಂ ಪರಾಂ,
ಸರ್ವಜ್ಞೇಶ್ವರಭೈರವಾಂಕನಿಲಯಾಂ ಪದ್ಮಾವತೀಂ ಚಿಂತಯೇ ॥

ಋಷಿರುವಾಚ ॥ ೧ ॥

ಇತ್ಯಾಕರ್ಣ್ಯ ವಚೋ ದೇವ್ಯಾಃ ಸ ದೂತೋಽಽಮರ್ಷಪೂರಿತಃ ।
ಸಮಾಚಷ್ಟ ಸಮಾಗಮ್ಯ ದೈತ್ಯರಾಜಾಯ ವಿಸ್ತರಾತ್ ॥ ೨ ॥

ತಸ್ಯ ದೂತಸ್ಯ ತದ್ವಾಕ್ಯಮಾಕರ್ಣ್ಯಾಸುರರಾಟ್ ತತಃ ।
ಸಕ್ರೋಧಃ ಪ್ರಾಹ ದೈತ್ಯಾನಾಮಧಿಪಂ ಧೂಮ್ರಲೋಚನಮ್ ॥ ೩ ॥

ಹೇ ಧೂಮ್ರಲೋಚನಾಶು ತ್ವಂ ಸ್ವಸೈನ್ಯಪರಿವಾರಿತಃ ।
ತಾಮಾನಯ ಬಲಾದ್ದುಷ್ಟಾಂ ಕೇಶಾಕರ್ಷಣವಿಹ್ವಲಾಮ್ ॥ ೪ ॥

ತತ್ಪರಿತ್ರಾಣದಃ ಕಶ್ಚಿದ್ಯದಿ ವೋತ್ತಿಷ್ಠತೇಽಪರಃ ।
ಸ ಹಂತವ್ಯೋಽಮರೋ ವಾಽಪಿ ಯಕ್ಷೋ ಗಂಧರ್ವ ಏವ ವಾ ॥ ೫ ॥

ಋಷಿರುವಾಚ ॥ ೬ ॥

ತೇನಾಜ್ಞಪ್ತಸ್ತತಃ ಶೀಘ್ರಂ ಸ ದೈತ್ಯೋ ಧೂಮ್ರಲೋಚನಃ ।
ವೃತಃ ಷಷ್ಟ್ಯಾ ಸಹಸ್ರಾಣಾಮಸುರಾಣಾಂ ದ್ರುತಂ ಯಯೌ ॥ ೭ ॥

# ಆರನೆಯ ಅಧ್ಯಾಯ

## ಧೂಮ್ರಲೋಚನವಧೆ

### ಧ್ಯಾನ

ನಾಗರಾಜನನ್ನು ಆಸನವಾಗಿ ಮಾಡಿಕೊಂಡಿರುವ, ಆ ನಾಗರಾಜನ ಹೆಡೆಗಳಲ್ಲಿರುವ ರತ್ನಗಳಿಂದ ಪ್ರಕಾಶಿಸಲ್ಪಟ್ಟ ಮತ್ತು ಲತಾಸಮಾನವಾದ ದೇಹವನ್ನುಳ್ಳ, ಸೂರ್ಯಸಮವಾದ ಪ್ರಭೆಯನ್ನುಳ್ಳ, ತ್ರಿನೇತ್ರಗಳಿಂದ ಶೋಭಿಸುತ್ತಿರುವ, ಕೈಯಲ್ಲಿ ಮಾಲೆ-ಕುಂಭ-ಕಮಲಗಳನ್ನು ಧರಿಸಿರುವ, ಅರ್ಧಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿರುವ, ಸರ್ವಜ್ಞೇಶ್ವರನಾದ ಭೈರವನ ತೊಡೆಯಲ್ಲಿ ಕುಳಿತಿರುವ, ಪರಮೋತ್ಕೃಷ್ಟಳಾದ, ಪದ್ಮಾವತಿಯನ್ನು ಚಿಂತಿಸುತ್ತೇನೆ.

೧-೨. ಸುಮೇಧ ಋಷಿಯು ಮುಂದುವರಿಸಿದನು: ದೇವಿಯ ಮಾತನ್ನು ಕೇಳಿ ಆ ದೂತನು ಕುಪಿತನಾಗಿ ಹಿಂತಿರುಗಿಬಂದು ದೈತ್ಯರಾಜನಿಗೆ (ವಿಲ್ಲವನ್ನೂ) ವಿಸ್ತಾರವಾಗಿ ತಿಳಿಸಿದನು.

೩. ದೂತನ ಆ ಮಾತನ್ನು ಕೇಳಿದಮೇಲೆ ಅಸುರರಾಜನಾದ ಶುಂಭನು ಕೋಪದಿಂದ ಕೂಡಿ ದೈತ್ಯಾಧಿಪತಿಯಾದ ಧೂಮ್ರಲೋಚನನನ್ನು ಕುರಿತು ಹೀಗೆಂದನು:

೪. ಎಲೈ ಧೂಮ್ರಲೋಚನ, ಕೂಡಲೇ ನೀನು ನಿನ್ನ ಸೈನ್ಯದೊಡನೆ ಹೊರಟು ದುಷ್ಟಳಾದ ಅವಳನ್ನು ಬಲಾತ್ಕಾರವಾಗಿ ಕೂದಲು ಹಿಡಿದೆಳೆದು ಆಳುವಂತೆ ಮಾಡಿ ಕರೆದುಕೊಂಡು ಬಾ.

೫. ಅವಳನ್ನು ಕಾಪಾಡುವುದಕ್ಕಾಗಿ ಮತ್ತಾವನಾದರೂ ಎದ್ದುದಾದರೆ, ಅವನು ದೇವತೆಯಾಗಲಿ, ಗಂಧರ್ವನಾಗಲಿ, ಅವನನ್ನು ಕೊಲ್ಲಬೇಕು.

೬-೭. ಋಷಿಯು ಹೇಳಿದನು: ಅವನಿಂದ ಆಜ್ಞಾಪಿಸಲ್ಪಟ್ಟ ಆ ಧೂಮ್ರಲೋಚನದೈತ್ಯನು ಅನಂತರ ಅರವತ್ತುಸಾವಿರ ಅಸುರರಿಂದ ಪರಿವೃತನಾಗಿ ಶೀಘ್ರವಾಗಿ ಹೊರಟನು.

ಸ ದೃಷ್ಟ್ವಾ ತಾಂ ತತೋ ದೇವೀಂ ತುಹಿನಾಚಲಸಂಸ್ಥಿತಾಮ್ ।
ಜಗಾದೋಚ್ಚೈಃ ಪ್ರಯಾಹೀತಿ ಮೂಲಂ ಶುಂಭನಿಶುಂಭಯೋಃ ॥ ೮ ॥

ನ ಚೇತ್ಪ್ರೀತ್ಯಾऽದ್ಯ ಭವತೀ ಮದ್ಭರ್ತಾರಮುಪೈಷ್ಯತಿ ।
ತತೋ ಬಲಾನ್ನಯಾಮ್ಯೇಷ ಕೇಶಾಕರ್ಷಣವಿಹ್ವಲಾಮ್ ॥ ೯ ॥

ದೇವ್ಯುವಾಚ ॥ ೧೦ ॥

ದೈತ್ಯೇಶ್ವರೇಣ ಪ್ರಹಿತೋ ಬಲವಾನ್ ಬಲಸಂವೃತಃ ।
ಬಲಾನ್ನಯಸಿ ಮಾಮೇವಂ ತತಃ ಕಿಂ ತೇ ಕರೋಮ್ಯಹಮ್ ॥ ೧೦ ॥

ಋಷಿರುವಾಚ ॥ ೧೨ ॥

ಇತ್ಯುಕ್ತಃ ಸೋऽಭ್ಯಧಾವತ್ತಾಮಸುರೋ ಧೂಮ್ರಲೋಚನಃ ।
ಹುಂಕಾರೇಣೈವ ತಂ ಭಸ್ಮ ಸಾ ಚಕಾರಾಂಬಿಕಾ ತತಃ ॥ ೧೩ ॥

ಅಥ ಕ್ರುದ್ಧಂ ಮಹಾಸೈನ್ಯಮಸುರಾಣಾಂ ತಥಾऽಂಬಿಕಾ ।
ವವರ್ಷ ಸಾಯಕೈಸ್ತೀಕ್ಷ್ಣೈಸ್ತಥಾ ಶಕ್ತಿಪರಶ್ವಧೈಃ ॥ ೧೪ ॥

ತತೋ ಧುತಸಟಃ ಕೋಪಾತ್ ಕೃತ್ವಾ ನಾದಂ ಸುಭೈರವಮ್ ।
ಪಪಾತಾಸುರಸೇನಾಯಾಂ ಸಿಂಹೋ ದೇವ್ಯಾಃ ಸ್ವವಾಹನಃ ॥ ೧೫ ॥

ಕಾಂಶ್ಚಿತ್ಕರಪ್ರಹಾರೇಣ ದೈತ್ಯಾನಾಸ್ಯೇನ ಚಾಪರಾನ್ ।
ಆಕ್ರಾಂತ್ಯಾ ಚಾಧರೇಣಾನ್ಯಾನ್ ಜಘಾನ ಸ ಮಹಾಸುರಾನ್ ॥ ೧೬ ॥

ಕೇಷಾಂಚಿತ್ಪಾಟಯಾಮಾಸ ನಖೈಃ ಕೋಷ್ಠಾನಿ ಕೇಸರೀ ।
ತಥಾ ತಲಪ್ರಹಾರೇಣ ಶಿರಾಂಸಿ ಕೃತವಾನ್ ಪೃಥಕ್ ॥ ೧೭ ॥

೮. ಅನಂತರ ಅವನು ಹಿಮಾಚಲದಲ್ಲಿ ನೆಲಸಿದ್ದ ಆ ದೇವಿಯನ್ನು ಕಂಡು 'ನಡೆ, ಶುಂಭನಿಶುಂಭರ ಬಳಿಗೆ!' ಎಂದು ಗಟ್ಟಿಯಾಗಿ ಹೇಳಿದನು.

೯. 'ನೀನು ಪ್ರೀತಿಯಿಂದ ನನ್ನೊಡೆಯನನ್ನು ಬಳಿಸಾರದಿದ್ದರೆ ಬಲಾತ್ಕಾರವಾಗಿ ಕೂದಲನ್ನೆಳೆದು ಆಳುತ್ತಿರುವಂತೆ ಮಾಡಿ ಸೆಳೆದೊಯ್ಯುವೆನು.'

೧೦-೧೧. ದೇವಿಯು ಉತ್ತರಿಸಿದಳು: 'ದೈತ್ಯರಾಜನಿಂದ ಕಳಿಸಲ್ಪಟ್ಟಿರುವ ನೀನು ಸ್ವಯಂ ಬಲವಂತನು. (ಜೊತೆಗೆ) ಸೈನ್ಯದೊಡಗೂಡಿ ಬಂದಿರುವೆ. ನನ್ನನ್ನು ಬಲಾತ್ಕಾರವಾಗಿ ಕರೆದೊಯ್ಯುವುದಾದರೆ ನಿನಗೆ ನಾನೇನು ತಾನೇ ಮಾಡಬಲ್ಲೆ!'

೧೨-೧೩. ಸುಮೇಧ ಋಷಿಯು ಹೇಳಿದನು: ಹೀಗೆ ಹೇಳಲ್ಪಟ್ಟವನಾಗಿ ಅಸುರನಾದ ಆ ಧೂಮ್ರಲೋಚನನು ಆಕೆಯ ಬಳಿಗೆ ನುಗ್ಗಿದನು. ಆಗ ಆ ಅಂಬಿಕೆಯು ಅವನನ್ನು ಕೇವಲ ಹುಂಕಾರದಿಂದಲೇ ಭಸ್ಮ ಮಾಡಿದಳು.

೧೪. ಅನಂತರ ಅಸುರರ ಮಹಾಸೈನ್ಯವು ಕೋಪಗೊಂಡಿತು. ಅಂಬಿಕೆಯೂ ಸಹ (ಕೋಪಗೊಂಡಳು). (ಆ ರಾಕ್ಷಸಸೈನ್ಯವು) ತೀಕ್ಷ್ಣವಾದ ಬಾಣಗಳ ಮತ್ತು ಶಕ್ತಿ-ಪರಶ್ವಾಯುಧಗಳ ಮಳೆಯನ್ನೇ ಸುರಿಸಿತು.

೧೫. ಅನಂತರ ದೇವಿಯ ವಾಹನವಾದ ಸಿಂಹವು ಕೋಪದಿಂದ ಕೆದರಿದ ಕೇಸರವುಳ್ಳದ್ದಾಗಿ, ಭಯಂಕರವಾದ ನಾದವನ್ನು ಮಾಡಿ ಅಸುರ ಸೇನೆಯ ಮೇಲೆ ಬಿದ್ದಿತು.

೧೬. ಕೆಲವರು ದೈತ್ಯರನ್ನು ಮುಂಗಾಲಿನ ಹೊಡೆತದಿಂದಲೂ, ಕೆಲವರನ್ನು ಬಾಯಿಯಿಂದಲೂ, ಮತ್ತೆ ಕೆಲವರು ಮಹಾಸುರರನ್ನು ಹಿಂಗಾಲಿನಿಂದ ಆಕ್ರಮಿಸಿಯೂ ಆ ಸಿಂಹವು ಕೊಂದಿತು.

೧೭. ಈ ಸಿಂಹವು ಕೆಲವರ ಹೊಟ್ಟೆಗಳನ್ನು ಉಗುರುಗಳಿಂದ ಸೀಳಿಹಾಕಿತು. ಪಂಜಗಳಿಂದ ಹೊಡೆದು ಅವರ ಶಿರಸ್ಸುಗಳನ್ನು (ಶರೀರಗಳಿಂದ) ಬೇರ್ಪಡಿಸಿತು.

ವಿಚ್ಛಿನ್ನಬಾಹುಶಿರಸಃ ಕೃತಾಸ್ತೇನ ತಥಾಽಪರೇ ।
ಪಪೌ ಚ ರುಧಿರಂ ಕೋಷ್ಠಾದನ್ಯೇಷಾಂ ಧುತಕೇಸರಃ ॥ ೧೮ ॥

ಕ್ಷಣೇನ ತದ್ಬಲಂ ಸರ್ವಂ ಕ್ಷಯಂ ನೀತಂ ಮಹಾತ್ಮನಾ ।
ತೇನ ಕೇಸರಿಣಾ ದೇವ್ಯಾ ವಾಹನೇನಾತಿಕೋಪಿನಾ ॥ ೧೯ ॥

ಶ್ರುತ್ವಾ ತಮಸುರಂ ದೇವ್ಯಾ ನಿಹತಂ ಧೂಮ್ರಲೋಚನಮ್ ।
ಬಲಂ ಚ ಕ್ಷಯಿತಂ ಕೃತ್ಸ್ನಂ ದೇವೀಕೇಸರಿಣಾ ತತಃ ॥ ೨೦ ॥

ಚುಕೋಪ ದೈತ್ಯಾಧಿಪತಿಃ ಶುಂಭಃ ಪ್ರಸ್ಫುರಿತಾಧರಃ ।
ಆಜ್ಞಾಪಯಾಮಾಸ ಚ ತೌ ಚಂಡಮುಂಡೌ ಮಹಾಽಸುರೌ ॥ ೨೧ ॥

ಹೇ ಚಂಡ ಹೇ ಮುಂಡ ಬಲೈರ್ಬಹುಭಿಃ ಪರಿವಾರಿತೌ ।
ತತ್ರ ಗಚ್ಛತ ಗತ್ವಾ ಚ ಸಾ ಸಮಾನೀಯತಾಂ ಲಘು ॥ ೨೨ ॥

ಕೇಶೇಷ್ವಾಕೃಷ್ಯ ಬದ್ಧ್ವಾ ವಾ ಯದಿ ವಃ ಸಂಶಯೋ ಯುಧಿ ।
ತದಾಽಶೇಷಾಯುಧೈಃ ಸರ್ವೈರಸುರೈರ್ವಿನಿಹನ್ಯತಾಮ್ ॥ ೨೩ ॥

ತಸ್ಯಾಂ ಹತಾಯಾಂ ದುಷ್ಟಾಯಾಂ ಸಿಂಹೇ ಚ ವಿನಿಪಾತಿತೇ ।
ಶೀಘ್ರಮಾಗಮ್ಯತಾಂ ಬದ್ಧ್ವಾ ಗೃಹೀತ್ವಾ ತಾಮಥಾಽಂಬಿಕಾಮ್ ॥ ೨೪ ॥

ಇತಿ ಶ್ರೀಮಾರ್ಕಂಡೇಯಪುರಾಣೇ ಸಾವರ್ಣಿಕೇ ಮನ್ವಂತರೇ ಶ್ರೀದೇವೀಮಾಹಾತ್ಮ್ಯೇ
ಧೂಮ್ರಲೋಚನವಧೋ ನಾಮ ಷಷ್ಠೋಽಧ್ಯಾಯಃ

೧೮. ಕೆದರಿದ ಕೇಸರವುಳ್ಳ (ಆ ಸಿಂಹವು) ಕೆಲವರ ಬಾಹುಗಳನ್ನೂ, ತಲೆಗಳನ್ನೂ ಕತ್ತರಿಸಿಹಾಕಿತು. ಇತರರ ಹೊಟ್ಟೆಯನ್ನು ಬಗಿದು ರಕ್ತವನ್ನು ಕುಡಿಯಿತು.

೧೯. (ಹೀಗೆ) ದೇವಿಯ ವಾಹನವೂ, ಅತಿಕೋಪದಿಂದ ಕೂಡಿದ್ದೂ ಮಹಾತ್ಮವೂ ಆದ ಆ ಸಿಂಹದಿಂದ ಆ ರಾಕ್ಷಸಸೈನ್ಯವೆಲ್ಲವೂ ಕ್ಷಣದಲ್ಲಿಯೇ ನಾಶವಾಯಿತು.

೨೦-೨೧. ಧೂಮ್ರಲೋಚನನೆಂಬ ಅಸುರನು ಆ ದೇವಿಯಿಂದ ಹತನಾದದ್ದನ್ನೂ, (ಅವನ) ಸೈನ್ಯವೆಲ್ಲವೂ ದೇವಿಯ ಸಿಂಹದಿಂದ ನಾಶ ವಾದದ್ದನ್ನೂ ಕೇಳಿ, ದೈತ್ಯಾಧಿಪನಾದ ಶುಂಭನು ಕೋಪಗೊಂಡು ನಡುಗುವ ತುಟಿಗಳಿಂದ ಕೂಡಿ ಚಂಡಮುಂಡರೆಂಬ ಮಹಾಸುರರನ್ನು ಕುರಿತು (ಹೀಗೆ) ಆಜ್ಞಾಪಿಸಿದನು:

೨೨. ಹೇ ಚಂಡ! ಹೇ ಮುಂಡ! ದೊಡ್ಡ ಸೈನ್ಯದಿಂದ ಪರಿವಾರಿತರಾಗಿ ಅಲ್ಲಿಗೆ ಹೋಗಿರಿ! ಹೋಗಿ ಅವಳನ್ನು ಬೇಗ ಕರೆತನ್ನಿರಿ!

೨೩. ಕೂದಲನ್ನು ಹಿಡಿದು ಅಥವಾ ಬಂಧಿಸಿ ಎಳೆದು ತನ್ನಿ! ಒಂದು ವೇಳೆ ಈ ವಿಷಯದಲ್ಲಿ ಸಂಶಯವುಂಟಾದರೆ ಯುದ್ಧಮಾಡಿ ಎಲ್ಲ ಅಸುರರೂ ತಮ್ಮೆಲ್ಲ ಆಯುಧಗಳಿಂದಲೂ (ಅವಳನ್ನು) ಹೊಡೆಯಲಿ!

೨೪. ಆ ದುಷ್ಟೆಯು ಹೊಡೆಯಲ್ಪಟ್ಟು, ಸಿಂಹವು ಪೀಡಿಸಲ್ಪಟ್ಟ ಮೇಲೆ ಆ ಅಂಬಿಕೆಯನ್ನು ಹಿಡಿದು ಕಟ್ಟಿಹಾಕಿ ಶೀಘ್ರವಾಗಿ ತನ್ನಿರಿ.

ಹೀಗೆ ಸಾವರ್ಣಿಕಮನ್ವಂತರಕ್ಕೆ ಸೇರಿದ ಮಾರ್ಕಂಡೇಯಪುರಾಣದ ದೇವೀಮಾಹಾತ್ಮ್ಯದಲ್ಲಿ 'ಧೂಮ್ರಲೋಚನವಧೆ' ಎಂಬ ಆರನೆಯ ಅಧ್ಯಾಯವು ಮುಗಿಯಿತು.

# ಸಪ್ತಮೋಽಧ್ಯಾಯಃ

## ಚಂಡಮುಂಡವಧಃ

### ಧ್ಯಾನಮ್

ಓಮ್। ಧ್ಯಾಯೇಯಂ ರತ್ನಪೀಠೇ ಶುಕಕಲಪಠಿತಂ ಶೃಣ್ವತೀಂ ಶ್ಯಾಮಲಾಂಗೀಂ, ನ್ಯಸ್ತೈಕಾಂಘ್ರಿಂ ಸರೋಜೇ ಶಶಿಶಕಲಧರಾಂ ವಲ್ಲಕೀಂ ವಾದಯಂತೀಮ್। ಕಲ್ಹಾರಾಬದ್ಧಮಾಲಾಂ ನಿಯಮಿತವಿಲಸಚ್ಚೋ-ಲಿಕಾಂ ರಕ್ತವಸ್ತ್ರಾಂ, ಮಾತಂಗೀಂ ಶಂಖಪಾತ್ರಾಂ ಮಧುರಮಧು ಮದಾಂ ಚಿತ್ರಕೋದ್ಭಾಸಿಭಾಲಾಮ್॥

ಋಷಿರುವಾಚ ॥ ೧ ॥

ಆಜ್ಞಪ್ತಾಸ್ತೇ ತತೋ ದೈತ್ಯಾಶ್ಚಂಡಮುಂಡಪುರೋಗಮಾಃ।
ಚತುರಂಗಬಲೋಪೇತಾ ಯಯುರಭ್ಯುದ್ಯತಾಯುಧಾಃ ॥ ೨ ॥

ದದೃಶುಸ್ತೇ ತತೋ ದೇವೀಮೀಷದ್ಧಾಸಾಂ ವ್ಯವಸ್ಥಿತಾಮ್।
ಸಿಂಹಸ್ಯೋಪರಿ ಶೈಲೇಂದ್ರಶೃಂಗೇ ಮಹತಿ ಕಾಂಚನೇ ॥ ೩ ॥

ತೇ ದೃಷ್ಟ್ವಾ ತಾಂ ಸಮಾದಾತುಮುದ್ಯಮಂ ಚಕ್ರುರುದ್ಯತಾಃ।
ಆಕೃಷ್ಟಚಾಪಾಸಿಧರಾಸ್ತಥಾಽನ್ಯೇ ತತ್ಸಮೀಪಗಾಃ ॥ ೪ ॥

ತತಃ ಕೋಪಂ ಚಕಾರೋಚ್ಚೈರಂಬಿಕಾ ತಾನರೀನ್ ಪ್ರತಿ।
ಕೋಪೇನ ಚಾಸ್ಯಾ ವದನಂ ಮಷೀವರ್ಣಮಭೂತ್ತದಾ ॥ ೫ ॥

ಭ್ರುಕುಟೀಕುಟಿಲಾತ್ತಸ್ಯಾ ಲಲಾಟಫಲಕಾದ್ದ್ರುತಮ್।
ಕಾಲೀ ಕರಾಲವದನಾ ವಿನಿಷ್ಕ್ರಾಂತಾಽಸಿಪಾಶಿನೀ ॥ ೬ ॥

# ಏಳನೆಯ ಅಧ್ಯಾಯ

## ಚಂಡಮುಂಡರ ವಧೆ

### ಧ್ಯಾನ

ರತ್ನಪೀಠದಲ್ಲಿ ಕುಳಿತಿರುವ, ಗಿಣಿಯ ಮಧುರನಾದವನ್ನು ಕೇಳುತ್ತಿರುವ, ಶ್ಯಾಮಲವರ್ಣೆಯಾದ, ಪದ್ಮಪೀಠದ ಮೇಲೆ ತನ್ನ ಒಂದು ಪಾದವನ್ನಿಟ್ಟಿರುವ, ಚಂದ್ರಕಲೆಯನ್ನು ಧರಿಸಿರುವ, ವೀಣೆಯನ್ನು ನುಡಿಸುತ್ತಿರುವ, ಕಲ್ಹಾರ ಪುಷ್ಪಮಾಲೆಯನ್ನು ಧರಿಸಿರುವ, ಚೆನ್ನಾಗಿ ಕಟ್ಟಲ್ಪಟ್ಟು ಪ್ರಕಾಶಿಸುತ್ತಿರುವ ಚೋಲಿಕೆಯನ್ನುಳ್ಳ, ರಕ್ತವಸ್ತ್ರಧಾರಿಯಾದ, ಶಂಖವನ್ನೇ ಪಾತ್ರೆಯಾಗಿ ಹೊಂದಿರುವ, ರುಚಿಕರವಾದ ಮಧುಪಾನದಿಂದ ಮತ್ತಳಾದ, ಹಣೆಯಲ್ಲಿ ಕುಂಕುಮವನ್ನು ಧರಿಸಿರುವ, ಮಾತಂಗಿಯನ್ನು ಧ್ಯಾನಿಸುತ್ತೇನೆ.

೧-೨. ಋಷಿಯಿಂತೆಂದನು: ಅನಂತರ (ಹೀಗೆ) ಆಜ್ಞಾಪಿಸಲ್ಪಟ್ಟ ಆ ದೈತ್ಯರು ಚಂಡಮುಂಡರನ್ನು ಮುಂದಿಟ್ಟುಕೊಂಡು, (ರಥವೇ ಮೊದಲಾದ) ಚತುರಂಗಸೈನ್ಯದಿಂದ ಕೂಡಿ, ಆಯುಧಗಳನ್ನು ಎತ್ತಿಹಿಡಿದವರಾಗಿ ಹೊರಟರು.

೩. ಮಹತ್ತಾದ ಮತ್ತು ಚಿನ್ನದ ಬಣ್ಣವುಳ್ಳ ಹಿಮವತ್ಪರ್ವತದ ಶಿಖರದಲ್ಲಿ ಸಿಂಹದ ಮೇಲೆ ಕುಳಿತು ಮಂದಹಾಸವನ್ನು ಬೀರುತ್ತಿದ್ದ ದೇವಿಯನ್ನು ಅವರು ಕಂಡರು.

೪. ಅವರು ಆಕೆಯನ್ನು ನೋಡಿ ಕರೆದೊಯ್ಯಲು ಉದ್ಯುಕ್ತರಾದರು. ಹೆದೆಯೇರಿಸಿದ ಬಿಲ್ಲನ್ನೂ, ಕತ್ತಿಯನ್ನೂ ಮೇಲಕ್ಕೆತ್ತಿ ಇತರರು ಆಕೆಯನ್ನು ಸಮೀಪಿಸಿದರು.

೫. ಅನಂತರ ಆ ಶತ್ರುಗಳ ವಿಷಯದಲ್ಲಿ ಅಂಬಿಕೆಯು ಅತ್ಯಂತ ಕೋಪವನ್ನು ತಾಳಿದಳು. ಆಗ ಕೋಪದಿಂದ ಆಕೆಯ ವದನವು ಕಪ್ಪಾಯಿತು.

೬. ಹುಬ್ಬುಗಂಟಿಕ್ಕಿದ್ದ ಆಕೆಯ ಹಣೆಯಿಂದ ಕತ್ತಿಯನ್ನೂ, ಪಾಶವನ್ನೂ ಧರಿಸಿದ ಕರಾಲವದನೆಯಾದ ಕಾಳಿಯು ಕೂಡಲೇ ಹೊರಬಂದಳು.

ವಿಚಿತ್ರಖಟ್ವಾಂಗಧರಾ ನರಮಾಲಾವಿಭೂಷಣಾ ।
ದ್ವೀಪಿಚರ್ಮಪರೀಧಾನಾ ಶುಷ್ಕಮಾಂಸಾಽತಿಭೈರವಾ ॥ ೭ ॥

ಅತಿವಿಸ್ತಾರವದನಾ ಜಿಹ್ವಾಲಲನಭೀಷಣಾ ।
ನಿಮಗ್ನಾ ರಕ್ತನಯನಾ ನಾದಾಪೂರಿತದಿಙ್ಮುಖಾ ॥ ೮ ॥

ಸಾ ವೇಗೇನಾಭಿಪತಿತಾ ಘಾತಯಂತೀ ಮಹಾಽಸುರಾನ್ ।
ಸೈನ್ಯೇ ತತ್ರ ಸುರಾರೀಣಾಮಭಕ್ಷಯತ ತದ್ಬಲಮ್ ॥ ೯ ॥

ಪಾರ್ಷ್ಣಿಗ್ರಾಹಾಂಕುಶಗ್ರಾಹಿಯೋಧಘಂಟಾಸಮನ್ವಿತಾನ್ ।
ಸಮಾದಾಯೈಕಹಸ್ತೇನ ಮುಖೇ ಚಿಕ್ಷೇಪ ವಾರಣಾನ್ ॥ ೧೦ ॥

ತಥೈವ ಯೋಧಂ ತುರಗೈ ರಥಂ ಸಾರಥಿನಾ ಸಹ ।
ನಿಕ್ಷಿಪ್ಯ ವಕ್ತ್ರೇ ದಶನೈಶ್ಚರ್ವಯಂತ್ಯತಿಭೈರವಮ್ ॥ ೧೧ ॥

ಏಕಂ ಜಗ್ರಾಹ ಕೇಶೇಷು ಗ್ರೀವಾಯಾಮಥ ಚಾಪರಮ್ ।
ಪಾದೇನಾಕ್ರಮ್ಯ ಚೈವಾನ್ಯಮುರಸಾಽನ್ಯಮಪೋಥಯತ್ ॥ ೧೨ ॥

ತೈರ್ಮುಕ್ತಾನಿ ಚ ಶಸ್ತ್ರಾಣಿ ಮಹಾಽಸ್ತ್ರಾಣಿ ತಥಾಽಸುರೈಃ ।
ಮುಖೇನ ಜಗ್ರಾಹ ರುಷಾ ದಶನೈರ್ಮಥಿತಾನ್ಯಪಿ ॥ ೧೩ ॥

ಬಲಿನಾಂ ತದ್ಬಲಂ ಸರ್ವಮಸುರಾಣಾಂ ದುರಾತ್ಮನಾಮ್ ।
ಮಮರ್ದಾಭಕ್ಷಯಚ್ಚಾನ್ಯಾನನ್ಯಾಂಶ್ಚಾತಾಡಯತ್ತದಾ ॥ ೧೪ ॥

ಅಸಿನಾ ನಿಹತಾಃ ಕೇಚಿತ್ ಕೇಚಿತ್ಖಟ್ವಾಂಗತಾಡಿತಾಃ ।
ಜಗ್ಮುರ್ವಿನಾಶಮಸುರಾ ದಂತಾಗ್ರಾಭಿಹತಾಸ್ತಥಾ ॥ ೧೫ ॥

೭. (ಆ ಕಾಳಿಯು) ವಿಚಿತ್ರವಾದ ಖಟ್ವಾಂಗವನ್ನು ಧರಿಸಿದ್ದಳು. ಮನುಷ್ಯರುಂಡಗಳ ಮಾಲೆಯಿಂದ ಭೂಷಿತಳಾಗಿದ್ದಳು. ಚಿರತೆಯ ಚರ್ಮವನ್ನು ಹೊದ್ದುಕೊಂಡಿದ್ದ ಆಕೆಯ ಶರೀರವು ಅತಿ ಶುಷ್ಕವಾಗಿದ್ದಿತು. (ಆದ್ದರಿಂದ ಆಕೆಯು) ಅತಿ ಭಯಂಕರಳಾಗಿದ್ದಳು.

೮. ಅತ್ಯಂತ ವಿಸ್ತಾರವಾದ ಬಾಯನ್ನು ಹೊಂದಿ, ನಾಲಿಗೆಯನ್ನು ಆಲ್ಲಾಡಿಸುತ್ತಾ ಭೀಕರಳಾಗಿ, ಗುಳಿಯಲ್ಲಿಳಿದಿರುವ ಕೆಂಪುಕಣ್ಣುಗಳನ್ನುಳ್ಳ (ಆಕೆಯು) ಗರ್ಜನಧ್ವನಿಯಿಂದ ದಿಕ್ಕುಗಳೆಲ್ಲವನ್ನೂ ಮೊಳಗಿಸಿದಳು.

೯. ಅವಳು ವೇಗದಿಂದ (ಅವರ ಮೇಲೆ) ಬಿದ್ದು ಆ ಮಹಾಸುರರನ್ನು ಕೊಲ್ಲುತ್ತಿದ್ದಳು. ದೇವಶತ್ರುಗಳಾದ ಅವರ ಸೈನ್ಯದಲ್ಲಿದ್ದ ಸೇನಾಬಲವನ್ನೆಲ್ಲ ತಿನ್ನುತ್ತಿದ್ದಳು.

೧೦. ಪಾರ್ಶ್ವರಕ್ಷಕರು, ಅಂಕುಶಧಾರಿಗಳು, ಯೋಧರು, ಗಂಟೆಗಳು, ಇವುಗಳಿಂದ ಕೂಡಿದ ಆನೆಗಳನ್ನು ಒಂದೇ ಕೈಯಿಂದ ತೆಗೆದುಕೊಂಡು ಬಾಯಲ್ಲಿ ಹಾಕಿಕೊಂಡಳು.

೧೧. ಹಾಗೆಯೇ ಕುದುರೆಗಳಿಂದ ಕೂಡಿದ ಯೋಧನನ್ನೂ, ಸಾರಥಿಯಿಂದೊಡಗೂಡಿದ ರಥವನ್ನೂ ಬಾಯಲ್ಲಿಟ್ಟುಕೊಂಡು ಹಲ್ಲುಗಳಿಂದ ಅತಿ ಭಯಂಕರವಾಗಿ ಆಗಿಯುತ್ತಿದ್ದಳು.

೧೨. (ಆ ಕಾಳಿಯು) ಒಬ್ಬನನ್ನು ಕೂದಲಿನಿಂದ ಹಿಡಿದು ಜಗ್ಗಿದಳು. ಮತ್ತೊಬ್ಬನನ್ನು ಕತ್ತುಹಿಡಿದೆಳೆದಳು. ಇನ್ನೊಬ್ಬನನ್ನು ಪಾದಗಳಿಂದ ತುಳಿದು ಮಗದೊಬ್ಬನನ್ನು ಎದೆಯಲ್ಲಿ (ಗುದ್ದಿ) ಕೊಂದುಹಾಕಿದಳು.

೧೩. ಆ ಅಸುರರಿಂದ ಪ್ರಯೋಗಿಸಲ್ಪಟ್ಟ ಶಸ್ತ್ರಗಳನ್ನೂ, ಮಹಾಸ್ತ್ರಗಳನ್ನೂ ಬಾಯಲ್ಲಿ ಹಿಡಿದು ಕೋಪದಿಂದ ಹಲ್ಲುಗಳ ಮೂಲಕ ಜಗಿದು ಹಾಕಿದಳು.

೧೪. ದುರಾತ್ಮರೂ, ಬಲಶಾಲಿಗಳೂ ಆದ ಆ ಅಸುರರ ಬಲದಲ್ಲಿ ಕೆಲವರನ್ನು ತಿಂದುಹಾಕಿದಳು. (ಹೀಗೆ) ಅವರೆಲ್ಲರನ್ನೂ ನಾಶಮಾಡಿದಳು.

೧೫. ಕೆಲವರು ಕತ್ತಿಯಿಂದ ಕೊಲ್ಲಲ್ಪಟ್ಟರು. ಕೆಲವರು ಖಟ್ವಾಂಗದಿಂದ ಹೊಡೆಯಲ್ಪಟ್ಟು (ಸತ್ತರು). ಇತರರು ಹಲ್ಲುಗಳ ತುದಿಯಿಂದ ಸಾಯಿಸಲ್ಪಟ್ಟರು. (ಹೀಗೆ) ಅಸುರರು ವಿನಾಶವನ್ನು ಹೊಂದಿದರು.

ಕ್ಷಣೇನ ತದ್ಬಲಂ ಸರ್ವಮಸುರಾಣಾಂ ನಿಪಾತಿತಮ್ ।
ದೃಷ್ಟ್ವೈವ ಚಂಡೋಽಭಿದುದ್ರಾವ ತಾಂ
ಕಾಲೀಮತಿಭೀಷಣಾಮ್ ॥ ೧೬ ॥

ಶರವರ್ಷೈರ್ಮಹಾಭೀಮೈರ್ಭೀಮಾಕ್ಷೀಂ ತಾಂ ಮಹಾಽಸುರಃ ।
ಛಾದಯಾಮಾಸ ಚಕ್ರೈಶ್ಚ ಮುಂಡಃ ಕ್ಷಿಪ್ತೈಃ ಸಹಸ್ರಶಃ ॥ ೧೭ ॥

ತಾನಿ ಚಕ್ರಾಣ್ಯನೇಕಾನಿ ವಿಶಮಾನಾನಿ ತನ್ಮುಖಮ್ ।
ಬಭುರ್ಯಥಾಽರ್ಕಬಿಂಬಾನಿ ಸುಬಹೂನಿ ಘನೋದರಮ್ ॥ ೧೮ ॥

ತತೋ ಜಹಾಸಾತಿರುಷಾ ಭೀಮಂ ಭೈರವನಾದಿನೀ ।
ಕಾಲೀ ಕರಾಲವದನಾ ದುರ್ದರ್ಶದಶನೋಜ್ಜ್ವಲಾ ॥ ೧೯ ॥

ಉತ್ಥಾಯ ಚ ಮಹಾಽಸಿಂಹಂ ದೇವೀ ಚಂಡಮಧಾವತ ।
ಗೃಹೀತ್ವಾ ಚಾಸ್ಯ ಕೇಶೇಷು ಶಿರಸ್ತೇನಾಸಿನಾಽಚ್ಛಿನತ್ ॥ ೨೦ ॥

ಅಥ ಮುಂಡೋಽಭ್ಯಧಾವತ್ ತಾಂ ದೃಷ್ಟ್ವಾ ಚಂಡಂ ನಿಪಾತಿತಮ್ ।
ತಮಪ್ಯಪಾತಯದ್ಭೂಮೌ ಸಾ ಖಡ್ಗಾಭಿಹತಂ ರುಷಾ ॥ ೨೧ ॥

ಹತಶೇಷಂ ತತಃ ಸೈನ್ಯಂ ದೃಷ್ಟ್ವಾ ಚಂಡಂ ನಿಪಾತಿತಮ್ ।
ಮುಂಡಂ ಚ ಸುಮಹಾವೀರ್ಯಂ ದಿಶೋ ಭೇಜೇ
ಭಯಾತುರಮ್ ॥ ೨೨ ॥

ಶಿರಶ್ಚಂಡಸ್ಯ ಕಾಲೀ ಚ ಗೃಹೀತ್ವಾ ಮುಂಡಮೇವ ಚ ।
ಪ್ರಾಹ ಪ್ರಚಂಡಾಟ್ಟಹಾಸಮಿಶ್ರಮಭ್ಯೇತ್ಯ ಚಂಡಿಕಾಮ್ ॥ ೨೩ ॥

ಮಯಾ ತವಾತ್ರೋಪಹೃತೌ ಚಂಡಮುಂಡೌ ಮಹಾಪಶೂ ।
ಯುದ್ಧಯಜ್ಞೇ ಸ್ವಯಂ ಶುಂಭಂ ನಿಶುಂಭಂ ಚ ಹನಿಷ್ಯಸಿ ॥ ೨೪ ॥

೧೬. ಅಸುರರ ಆ ಸೈನ್ಯವೆಲ್ಲವೂ ಕ್ಷಣದಲ್ಲಿಯೇ ಕೆಡವಲ್ಪಟ್ಟದ್ದನ್ನು ಕಂಡು ಚಂಡನು ಅತಿ ಭಯಂಕರಳಾದ ಆ ಕಾಳಿಯ ಬಳಿಗೆ ನುಗ್ಗಿದನು.

೧೭. ಮಹಾಸುರನಾದ (ಚಂಡನು), ಭಯಂಕರನಯನಳಾದ ಆ ಕಾಳಿಯನ್ನು ಬಾಣಗಳ ಸುರಿಮಳೆಯಿಂದಲೂ, ಮುಂಡನು ಸಾವಿರಾರು ಚಕ್ರಗಳನ್ನು ಎಸೆಯುವುದರ ಮೂಲಕವೂ ಮುಚ್ಚಿಬಿಟ್ಟರು.

೧೮. ಆಕೆಯ ಮುಖವನ್ನು ಪ್ರವೇಶಿಸುತ್ತಿದ್ದ ಆ ಅನೇಕ ಚಕ್ರಗಳು ಮೋಡಗಳನ್ನು ಪ್ರವೇಶಿಸುವ ಅನೇಕ ಸೂರ್ಯಬಿಂಬಗಳಂತೆ ಪ್ರಕಾಶಿಸುತ್ತಿದ್ದುವು.

೧೯. ಅನಂತರ ಭಯಂಕರ ಗರ್ಜನ-ಶಕ್ತಿಯುಳ್ಳವಳೂ, ಕರಾಲ ಮುಖವುಳ್ಳವಳೂ, ನೋಡಲಸಾಧ್ಯವಾದ ಭೀಕರಕಾಂತಿಯ ಕೋರೆದಾಡೆಯುಳ್ಳವಳೂ ಆದ ಕಾಳಿಯು ಅತ್ಯಂತ ಕೋಪದಿಂದ ಭಯಂಕರವಾಗಿ ಅಟ್ಟಹಾಸವನ್ನು ಮಾಡಿದಳು.

೨೦. (ಅನಂತರ) ದೇವಿಯು ಮಹಾಖಡ್ಗವನ್ನು ಎತ್ತಿಹಿಡಿದು ಕೋಪದಿಂದ ಚಂಡನ ಬಳಿಗೆ ನುಗ್ಗಿದಳು. ಅವನನ್ನು ಕೂದಲಿನಿಂದ ಹಿಡಿದು, ಕತ್ತಿಯಿಂದ ಅವನ ಶಿರಸ್ಸನ್ನು ಕತ್ತರಿಸಿದಳು.

೨೧. ಚಂಡನು ಸತ್ತುಬಿದ್ದದ್ದನ್ನು ನೋಡಿ ಮುಂಡನು ಆಕೆಯ ಬಳಿಗೆ ನುಗ್ಗಿದನು. ಆಕೆಯು ರೋಷದಿಂದ ಅವನನ್ನು ಕೂಡ ಕತ್ತಿಯಿಂದ ಹೊಡೆದು ನೆಲಕ್ಕೆ ಕೆಡವಿದಳು.

೨೨. ಚಂಡನೂ, ಮಹಾವೀರ್ಯಶಾಲಿಯಾದ ಮುಂಡನೂ ಬಿದ್ದದ್ದನ್ನು ನೋಡಿ ಉಳಿದ ಸೈನ್ಯವು ಭಯಾತುರವಾಗಿ ದಿಕ್ಕುದಿಕ್ಕುಗಳಿಗೆ ಓಡಿಹೋಯಿತು.

೨೩. ಕಾಳಿಯು ಚಂಡನ ಶಿರವನ್ನೂ ಮತ್ತು ಮುಂಡವನ್ನೂ ತೆಗೆದುಕೊಂಡು ಚಂಡಿಕೆಯನ್ನು ಬಳಿಸಾರಿ ಪ್ರಚಂಡ ಅಟ್ಟಹಾಸದಿಂದ ಒಡಗೂಡಿದ (ಈ ಮಾತುಗಳನ್ನು) ಹೇಳಿದಳು:

೨೪. ಯುದ್ಧಯಜ್ಞದಲ್ಲಿ ಬಲಿ ಕೊಟ್ಟಂತಹ ಚಂಡಮುಂಡರೆಂಬ (ಈ) ಎರಡು ಮಹಾಪಶುಗಳನ್ನು ನಿನ್ನ ಬಳಿಗೆ ತಂದಿರುತ್ತೇನೆ! ಶುಂಭ ನಿಶುಂಭರನ್ನಾದರೋ ನೀನೇ ಕೊಲ್ಲುತ್ತೀಯೆ!

ಋಷಿರುವಾಚ ॥ ೨೫ ॥

ತಾವಾನೀತೌ ತತೋ ದೃಷ್ಟ್ವಾ ಚಂಡಮುಂಡೌ ಮಹಾಽಸುರೌ ।
ಉವಾಚ ಕಾಲೀಂ ಕಲ್ಯಾಣೀ ಲಲಿತಂ ಚಂಡಿಕಾ ವಚಃ ॥ ೨೬ ॥

ಯಸ್ಮಾಚ್ಚಂಡಂ ಚ ಮುಂಡಂ ಚ ಗೃಹೀತ್ವಾ ತ್ವಮುಪಾಗತಾ ।
ಚಾಮುಂಡೇತಿ ತತೋ ಲೋಕೇ ಖ್ಯಾತಾ ದೇವಿ ಭವಿಷ್ಯಸಿ ॥ ೨೭ ॥

ಇತಿ ಶ್ರೀಮಾರ್ಕಂಡೇಯಪುರಾಣೇ ಸಾವರ್ಣಿಕೇ ಮನ್ವಂತರೇ ದೇವೀಮಾಹಾತ್ಮ್ಯೇ
ಚಂಡಮುಂಡವಧೋ ನಾಮ ಸಪ್ತಮೋಽಧ್ಯಾಯಃ

೨೫-೨೬. ಋಷಿಯಿಂತೆಂದನು: ಮಹಾಸುರರಾದ ಚಂಡಮುಂಡರು (ಹೀಗೆ) ತರಲ್ಪಟ್ಟಿದ್ದನ್ನು ನೋಡಿ ಕಲ್ಯಾಣಸ್ವರೂಪಳಾದ ಚಂಡಿಕಾದೇವಿಯು ಕಾಳಿಯನ್ನು ಕುರಿತು ಮಧುರವಾದ ಈ ಮಾತನ್ನು ಹೇಳಿದಳು:

೨೭. ದೇವಿಯೇ, ಚಂಡಮುಂಡರನ್ನು ಹಿಡಿದುಕೊಂಡು (ನನ್ನನ್ನು) ಬಳಿಸಾರಿದ್ದರಿಂದ ನೀನು ಲೋಕದಲ್ಲಿ 'ಚಾಮುಂಡಾ' ಎಂದು ಪ್ರಖ್ಯಾತಿಯನ್ನು ಹೊಂದುವೆ !

ಹೀಗೆ ಸಾವರ್ಣಿಕಮನ್ವಂತರಕ್ಕೆ ಸೇರಿದ ಮಾರ್ಕಂಡೇಯಪುರಾಣದ ದೇವೀಮಾಹಾತ್ಮ್ಯದಲ್ಲಿ 'ಚಂಡಮುಂಡರ ವಧೆ' ಎಂಬ ಏಳನೆಯ ಅಧ್ಯಾಯವು ಮುಗಿಯಿತು.

# ಅಷ್ಟಮೋಽಧ್ಯಾಯಃ

## ರಕ್ತಬೀಜವಧಃ

### ಧ್ಯಾನಮ್

ಓಮ್ । ಅರುಣಾಂ ಕರುಣಾತರಂಗಿತಾಕ್ಷೀಂ ಧೃತಪಾಶಾಂಕುಶ-ಬಾಣಚಾಪಹಸ್ತಾಮ್ । ಅಣಿಮಾದಿಭಿರಾವೃತಾಂ ಮಯೂಖೈರಹಮಿತ್ಯೇವ ವಿಭಾವಯೇ ಭವಾನೀಮ್ ॥

ಋಷಿರುವಾಚ ॥ ೧ ॥

ಚಂಡೇ ಚ ನಿಹತೇ ದೈತ್ಯೇ ಮುಂಡೇ ಚ ವಿನಿಪಾತಿತೇ ।
ಬಹುಲೇಷು ಚ ಸೈನ್ಯೇಷು ಕ್ಷಯಿತೇಷ್ವಸುರೇಶ್ವರಃ ॥ ೨ ॥

ತತಃ ಕೋಪಪರಾಧೀನಚೇತಾಃ ಶುಂಭಃ ಪ್ರತಾಪವಾನ್ ।
ಉದ್ಯೋಗಂ ಸರ್ವಸೈನ್ಯಾನಾಂ ದೈತ್ಯಾನಾಮಾದಿದೇಶ ಹ ॥ ೩ ॥

ಅದ್ಯ ಸರ್ವಬಲೈರ್ದೈತ್ಯಾಃ ಷಡಶೀತಿರುದಾಯುಧಾಃ ।
ಕಂಬೂನಾಂ ಚತುರಶೀತಿರ್ನಿರ್ಯಾಂತು ಸ್ವಬಲೈರ್ವೃತಾಃ ॥ ೪ ॥

ಕೋಟಿವೀರ್ಯಾಣಿ ಪಂಚಾಶದಸುರಾಣಾಂ ಕುಲಾನಿ ವೈ ।
ಶತಂ ಕುಲಾನಿ ಧೌಮ್ರಾಣಾಂ ನಿರ್ಗಚ್ಛಂತು ಮಮಾಜ್ಞಯಾ ॥ ೫ ॥

ಕಾಲಕಾ ದೌರ್ಹೃದಾ ಮೌರ್ಯಾಃ ಕಾಲಕೇಯಾಸ್ತಥಾಽಸುರಾಃ ।
ಯುದ್ಧಾಯ ಸಜ್ಜಾ ನಿರ್ಯಾಂತು ಆಜ್ಞಯಾ ತ್ವರಿತಾ ಮಮ ॥ ೬ ॥

ಇತ್ಯಾಜ್ಞಾಪ್ಯಾಸುರಪತಿಃ ಶುಂಭೋ ಭೈರವಶಾಸನಃ ।
ನಿರ್ಜಗಾಮ ಮಹಾಸೈನ್ಯಸಹಸ್ರೈರ್ಬಹುಭಿರ್ವೃತಃ ॥ ೭ ॥

# ಎಂಟನೆಯ ಅಧ್ಯಾಯ

## ರಕ್ತಬೀಜವಧೆ

### ಧ್ಯಾನ

ಅರುಣನಂತೆ ಕೆಂಪು ಬಣ್ಣವುಳ್ಳ, ಕರುಣಾಲಹರಿಯಿಂದ ಕೂಡಿದ ಕಣ್ಣುಳ್ಳ, ಪಾಶ-ಅಂಕುಶ-ಬಾಣ-ಬಿಲ್ಲುಗಳನ್ನು ಕರದಲ್ಲಿ ಧರಿಸಿರುವ, ಅಣಿಮಾದಿಸಿದ್ಧಿಗಳೆಂಬ ಕಿರಣಗಳಿಂದ ಆವೃತಳಾದ, ಭವಾನಿಯನ್ನು ನಾನು ಧ್ಯಾನಿಸುತ್ತೇನೆ.

೧-೩. ಸುಮೇಧ ಋಷಿಯು ಮುಂದುವರಿಸಿದನು: (ಹೀಗೆ) ಚಂಡನು ಕೊಲ್ಲಲ್ಪಟ್ಟು ಮುಂಡಾಸುರನು ಸತ್ತುಬೀಳಲು ಮತ್ತು ಬಹು ಸಂಖ್ಯೆಯಲ್ಲಿ ಸೈನ್ಯವು ನಾಶವಾಗಲು ಅಸುರೇಶ್ವರನೂ ಪ್ರತಾಪಶಾಲಿಯೂ ಆದ ಶುಂಭನು ಕೋಪಾಧೀನವಾದ ಮನಸ್ಸುಳ್ಳವನಾಗಿ ದೈತ್ಯರ ಸರ್ವಸೈನ್ಯವೂ ಸನ್ನದ್ಧವಾಗುವಂತೆ ಆಜ್ಞೆಮಾಡಿದನು.

೪. 'ಈಗಲೇ ಎಂಬತ್ತಾರು ದೈತ್ಯವಂಶದವರೂ (ತಮ್ಮ ತಮ್ಮ) ಎಲ್ಲ ಸೈನ್ಯಬಲಗಳೊಂದಿಗೆ, ಎತ್ತಿದ ಆಯುಧವುಳ್ಳವರಾಗಿ ಹೊರಡಲಿ! ಎಂಬತ್ತನಾಲ್ಕು ಬಗೆಯ ಕಂಬು (ಎಂಬ ರಾಕ್ಷಸರೂ ಕೂಡ) ತಮ್ಮ ಸೈನ್ಯಗಳಿಂದ ಆವೃತರಾಗಿ ಹೊರಡಲಿ !

೫. 'ವೀರರಾದ ರಾಕ್ಷಸರ ಐವತ್ತುಕೋಟಿ ಪಡೆಗಳೂ ಧೂಮ್ರರ ನೂರು ಪಂಗಡಗಳ ಯೋಧರೂ ನನ್ನ ಅಪ್ಪಣೆಯಂತೆ (ಈಗಲೇ ಯುದ್ಧಕ್ಕೆ) ಹೊರಡಲಿ!

೬. 'ಕಾಲಕರು, ದೌರ್ಹೃದರು, ಮೌರ್ಯರು, ಕಾಲಿಕೇಯರು (ಎಂಬ ಪ್ರಸಿದ್ಧ ವಂಶದವರಾದ ರಾಕ್ಷಸರೂ) ಯುದ್ಧಕ್ಕೆ ಸಿದ್ಧರಾಗಿ ನನ್ನ ಅಪ್ಪಣೆಯಂತೆ ಶೀಘ್ರವಾಗಿ ಹೊರಡಲಿ!'

೭. ಉಗ್ರವಾದ ಆಜ್ಞೆಗಳನ್ನು ಮಾಡುವ ಅಸುರಪತಿಯಾದ ಶುಂಭನು ಹೀಗೆ ಅಪ್ಪಣೆಮಾಡಿ ಸಾವಿರಸಂಖ್ಯೆಯ ಅನೇಕ ಸೈನ್ಯಗಳಿಂದ ಕೂಡಿದವನಾಗಿ (ತಾನೂ ಕೂಡ) ಯುದ್ಧಕ್ಕೆ ಹೊರಟನು.

ಆಯಾಂತಂ ಚಂಡಿಕಾ ದೃಷ್ಟ್ವಾ ತತ್ಸೈನ್ಯಮತಿಭೀಷಣಮ್ ।
ಜ್ಯಾಸ್ವನೈಃ ಪೂರಯಾಮಾಸ ಧರಣೀಗಗನಾಂತರಮ್ ॥ ೮ ॥

ತತಃ ಸಿಂಹೋ ಮಹಾನಾದಮತೀವ ಕೃತವಾನ್ ನೃಪ ।
ಘಂಟಾಸ್ವನೇನ ತನ್ನಾದಮಂಬಿಕಾ ಚೋಪಬೃಂಹಯತ್ ॥ ೯ ॥

ಧನುರ್ಜ್ಯಾಸಿಂಹಘಂಟಾನಾಂ ನಾದಾಪೂರಿತದಿಙ್ಮುಖಾ ।
ನಿನಾದೈರ್ಭೀಷಣೈಃ ಕಾಲೀ ಜಿಗ್ಯೇ ವಿಸ್ತಾರಿತಾನನಾ ॥ ೧೦ ॥

ತಂ ನಿನಾದಮುಪಶ್ರುತ್ಯ ದೈತ್ಯಸೈನ್ಯೈಶ್ಚತುರ್ದಿಶಮ್ ।
ದೇವೀ ಸಿಂಹಸ್ತಥಾ ಕಾಲೀ ಸರೋಷೈಃ ಪರಿವಾರಿತಾಃ ॥ ೧೧ ॥

ಏತಸ್ಮಿನ್ನಂತರೇ ಭೂಪ ವಿನಾಶಾಯ ಸುರದ್ವಿಷಾಮ್ ।
ಭವಾಯಾಮರಸಿಂಹಾನಾಮತಿವೀರ್ಯಬಲಾನ್ವಿತಾಃ ॥ ೧೨ ॥

ಬ್ರಹ್ಮೇಶಗುಹವಿಷ್ಣೂನಾಂ ತಥೇಂದ್ರಸ್ಯ ಚ ಶಕ್ತಯಃ ।
ಶರೀರೇಭ್ಯೋ ವಿನಿಷ್ಕ್ರಮ್ಯ ತದ್ರೂಪೈಶ್ಚಂಡಿಕಾಂ ಯಯುಃ ॥ ೧೩ ॥

ಯಸ್ಯ ದೇವಸ್ಯ ಯದ್ರೂಪಂ ಯಥಾ ಭೂಷಣವಾಹನಮ್ ।
ತದ್ವದೇವ ಹಿ ತಚ್ಛಕ್ತಿರಸುರಾನ್ ಯೋದ್ಧುಮಾಯಯೌ ॥ ೧೪ ॥

ಹಂಸಯುಕ್ತವಿಮಾನಾಗ್ರೇ ಸಾಕ್ಷಸೂತ್ರಕಮಂಡಲುಃ ।
ಆಯಾತಾ ಬ್ರಹ್ಮಣಶ್ಶಕ್ತಿರ್ಬ್ರಹ್ಮಾಣೀ ಸಾಽಭಿಧೀಯತೇ ॥ ೧೫ ॥

ಮಾಹೇಶ್ವರೀ ವೃಷಾರೂಢಾ ತ್ರಿಶೂಲವರಧಾರಿಣೀ ।
ಮಹಾಹಿವಲಯಾ ಪ್ರಾಪ್ತಾ ಚಂದ್ರರೇಖಾ ವಿಭೂಷಣಾ ॥ ೧೬ ॥

೮. ಅತಿ ಭಯಂಕರವಾದ ಆ ಸೈನ್ಯವು ಬರುತ್ತಿದ್ದುದನ್ನು ನೋಡಿ ಚಂಡಿಕಾದೇವಿಯು ಭೂಮಿ-ಆಕಾಶಗಳ ಮಧ್ಯಭಾಗವನ್ನೆಲ್ಲ ತನ್ನ ಧನುಸ್ಸಿನ ಟಂಕಾರಗಳಿಂದ ತುಂಬಿಸಿದಳು.

೯. ಅನಂತರ - ಎಲೈ ರಾಜನೆ, (ದೇವಿಯ ವಾಹನವಾದ) ಸಿಂಹವು - ಅತ್ಯಂತ ಮಹತ್ತಾದ ಗರ್ಜನೆಯನ್ನು ಮಾಡಿತು. ಅಂಬಿಕೆಯಾದರೋ ಆ ನಾದವನ್ನು ತನ್ನ ಘಂಟಾನಾದದಿಂದ ಹೆಚ್ಚುವಂತೆ ಮಾಡಿದಳು.

೧೦. (ಹೀಗೆ) ಧನುಸ್ಸಿನ ಹೆದೆಯ ಟಂಕಾರ, ಸಿಂಹದ ಗರ್ಜನೆ, ಘಂಟಾನಾದ – ಇವುಗಳಿಂದ ಎಲ್ಲ ದಿಕ್ಕುಗಳನ್ನೂ ತುಂಬಿದ ಕಾಳಿಯು ದೊಡ್ಡದಾಗಿ ಬಾಯನ್ನು ತೆರೆದವಳಾಗಿ ಭಯಂಕರವಾದ ಧ್ವನಿಯನ್ನು ಮಾಡುತ್ತ ಜಯಿಸಿದಳು.

೧೧. ಆ ಧ್ವನಿಯನ್ನು ಕೇಳಿ ದೈತ್ಯಸೈನ್ಯಗಳು ನಾಲ್ಕೂ ದಿಕ್ಕುಗಳಲ್ಲಿ ದೇವಿಯನ್ನೂ, ಸಿಂಹವನ್ನೂ, ಕಾಳಿಯನ್ನೂ ಬಾಣಗಳಿಂದ ಸುತ್ತುವರಿದುವು.

೧೨-೧೩. ಎಲೈ ಭೂಪತಿಯೆ, ಈ ಮಧ್ಯೆ ದೇವಶತ್ರುಗಳ ಅಳಿವಿಗಾಗಿಯೂ ದೇವಶ್ರೇಷ್ಠರ ಉಳಿವಿಗಾಗಿಯೂ, ಬ್ರಹ್ಮ, ಈಶ್ವರ, ಸ್ಕಂದ, ವಿಷ್ಣು, ಇಂದ್ರ–ಇವರ ಅತ್ಯಂತ ವೀರ್ಯಬಲಯುಕ್ತವಾದ ಶಕ್ತಿಗಳು ಅವರವರ ದೇಹದಿಂದ ಹೊರಬಂದು ಆಯಾ ರೂಪದಿಂದಲೇ ಚಂಡಿಕೆಯನ್ನು ಸೇರಿದವು.

೧೪. ಯಾವ ದೇವತೆಗೆ ಯಾವ ರೂಪವಿತ್ತೋ, ಯಾವ ಭೂಷಣ - ವಾಹನಗಳಿದ್ದುವೋ ಅವುಗಳ ಆಕಾರವನ್ನೇ ಹೊಂದಿ ಆಯಾಶಕ್ತಿಯು ಅಸುರರೊಡನೆ ಯುದ್ಧಮಾಡಲು ಬಂದಿತು.

೧೫. ಬ್ರಹ್ಮನ ಶಕ್ತಿಯು ಹಂಸದಿಂದ ಕೂಡಿದ ವಿಮಾನದಲ್ಲಿ ಕುಳಿತು ಜಪಮಾಲಿಕೆ - ಕಮಂಡಲುಗಳನ್ನುಳ್ಳವಳಾಗಿ ಬಂದಳು; ಅವಳು ಬ್ರಹ್ಮಾಣಿಯೆಂದು ಹೇಳಲ್ಪಡುತ್ತಾಳೆ.

೧೬. ಮಾಹೇಶ್ವರಿಯು ವೃಷಭವಾಹನಳಾಗಿ ಶ್ರೇಷ್ಠವಾದ ತ್ರಿಶೂಲವನ್ನು ಧರಿಸಿ ದೊಡ್ಡ ಸರ್ಪಗಳನ್ನೇ ಆಭರಣಗಳನ್ನಾಗಿ ಹೊಂದಿ ಚಂದ್ರಕಲೆಯನ್ನೇ (ಶಿರೋಭೂಷಣವಾಗಿಸಿಕೊಂಡು) ಬಂದು ಸೇರಿದಳು.

ಕೌಮಾರೀ ಶಕ್ತಿಹಸ್ತಾ ಚ ಮಯೂರವರವಾಹನಾ ।
ಯೋದ್ಧುಮಭ್ಯಾಯಯೌ ದೈತ್ಯಾನಂಬಿಕಾ ಗುಹರೂಪಿಣೀ ॥ ೧೭ ॥

ತಥೈವ ವೈಷ್ಣವೀಶಕ್ತಿರ್ಗರುಡೋಪರಿ ಸಂಸ್ಥಿತಾ ।
ಶಂಖಚಕ್ರಗದಾಶಾರ್ಙ್ಗಖಡ್ಗಹಸ್ತಾಽಭ್ಯುಪಾಯಯೌ ॥ ೧೮ ॥

ಯಜ್ಞವಾರಾಹಮತುಲಂ ರೂಪಂ ಯಾ ಬಿಭ್ರತೋ ಹರೇಃ ।
ಶಕ್ತಿಸ್ಸಾಽಪ್ಯಾಯಯೌ ತತ್ರ ವಾರಾಹೀಂ ಬಿಭ್ರತೀ ತನುಮ್ ॥ ೧೯ ॥

ನಾರಸಿಂಹೀ ನೃಸಿಂಹಸ್ಯ ಬಿಭ್ರತೀ ಸದೃಶಂ ವಪುಃ ।
ಪ್ರಾಪ್ತಾ ತತ್ರ ಸಟಾಕ್ಷೇಪಕ್ಷಿಪ್ತನಕ್ಷತ್ರಸಂಹತಿಃ ॥ ೨೦ ॥

ವಜ್ರಹಸ್ತಾ ತಥೈವೈಂದ್ರೀ ಗಜರಾಜೋಪರಿ ಸ್ಥಿತಾ ।
ಪ್ರಾಪ್ತಾ ಸಹಸ್ರನಯನಾ ಯಥಾ ಶಕ್ರಸ್ತಥೈವ ಸಾ ॥ ೨೧ ॥

ತತಃ ಪರಿವೃತಸ್ತಾಭಿರೀಶಾನೋ ದೇವಶಕ್ತಿಭಿಃ ।
ಹನ್ಯಂತಾಮಸುರಾಃ ಶೀಘ್ರಂ ಮಮ ಪ್ರೀತ್ಯಾಽಹ ಚಂಡಿಕಾಮ್ ॥ ೨೨ ॥

ತತೋ ದೇವೀಶರೀರಾತ್ತು ವಿನಿಷ್ಕ್ರಾಂತಾಽತಿಭೀಷಣಾ ।
ಚಂಡಿಕಾಶಕ್ತಿರತ್ಯುಗ್ರಾ ಶಿವಾಶತನಿನಾದಿನೀ ॥ ೨೩ ॥

ಸಾ ಚಾಹ ಧೂಮ್ರಜಟಿಲಮೀಶಾನಮಪರಾಜಿತಾ ।
ದೂತ ತ್ವಂ ಗಚ್ಛ ಭಗವನ್ ಪಾರ್ಶ್ವಂ ಶುಂಭನಿಶುಂಭಯೋಃ ॥ ೨೪ ॥

ಬ್ರೂಹಿ ಶುಂಭಂ ನಿಶುಂಭಂ ಚ ದಾನವಾವತಿಗರ್ವಿತೌ ।
ಯೇ ಚಾನ್ಯೇ ದಾನವಾಸ್ತತ್ರ ಯುದ್ಧಾಯ ಸಮುಪಸ್ಥಿತಾಃ ॥ ೨೫ ॥

೧೭. ಶಕ್ತ್ಯಾಯುಧವನ್ನು ಕರದಲ್ಲಿ ಧರಿಸಿರುವ, ಶ್ರೇಷ್ಠವಾದ ನವಿಲನ್ನು ವಾಹನವಾಗಿ ಹೊಂದಿರುವ, ಕುಮಾರಸ್ವಾಮಿಯ ರೂಪವನ್ನುಳ್ಳ ಕೌಮಾರಿಯೂ ರಾಕ್ಷಸರೊಡನೆ ಯುದ್ಧಮಾಡಲು ಬಂದಳು.

೧೮. ಹಾಗೆಯೇ ವೈಷ್ಣವೀಶಕ್ತಿಯೂ ಗರುಡನ ಮೇಲೆ ಕುಳಿತು ಶಂಖ, ಚಕ್ರ, ಗದೆ, ಶಾರ್ಙ್ಗ, (ಧನುಸ್ಸು) ಖಡ್ಗ–ಇವುಗಳನ್ನು ಕೈಯಲ್ಲಿ ಧರಿಸಿ ಬಂದಳು.

೧೯. ಅತುಲವಾದ ಯಜ್ಞವರಾಹರೂಪವನ್ನು ಪಡೆದಂಥ ಶ್ರೀಹರಿಯ ಯಾವ ಶಕ್ತಿಯಿತ್ತೋ, ಅವಳು ಕೂಡ ವಾರಾಹೀಶರೀರವನ್ನು ಪಡೆದು ಬಂದಳು.

೨೦. ನರಸಿಂಹನ ಶರೀರಕ್ಕೆ ಸದೃಶವಾದ ಶರೀರವನ್ನು ಧರಿಸಿದ ನಾರಸಿಂಹಿಯು ತನ್ನ ಕೇಸರಗಳನ್ನು ಕೊಡವಿ ನಕ್ಷತ್ರಸಮೂಹಗಳನ್ನು ಚಿಮ್ಮಿಸುತ್ತ ಅಲ್ಲಿಗೆ ಬಂದಳು.

೨೧. ಹಾಗೆಯೇ ಸಾವಿರ ಕಣ್ಣುಳ್ಳ ಐಂದ್ರಿಯೂ ಕೂಡ ಆನೆಯ ಮೇಲೆ ಕುಳಿತು ಕೈಯಲ್ಲಿ ವಜ್ರಾಯುಧವನ್ನು ಹಿಡಿದು ಬಂದಳು. ಅವಳು ಇಂದ್ರನು ಹೇಗಿರುವನೋ ಹಾಗೆಯೇ ಇದ್ದಳು.

೨೨. ಅನಂತರ ಆ ದೇವಶಕ್ತಿಯರಿಂದ ಪರಿವೃತನಾದ ಮಹೇಶ್ವರನು ಚಂಡಿಕೆಯನ್ನು ಕುರಿತು, 'ನನ್ನಲ್ಲಿರುವ ಪ್ರೀತಿಯಿಂದ ಶೀಘ್ರವಾಗಿ ಈ ಅಸುರರನ್ನು ಕೊಲ್ಲು!' ಎಂದು ಹೇಳಿದನು.

೨೩. ಅನಂತರ ದೇವಿಯ ಶರೀರದಿಂದ ಅತ್ಯುಗ್ರಳೂ, ಅತಿ ಭಯಂಕರಳೂ ಆದ, ನೂರಾರು ನರಿಗಳ ನಾದದಿಂದ ಕೂಡಿದ ಚಂಡಿಕಾ ಶಕ್ತಿಯು ಹೊರಬಂದಳು.

೨೪. ಅಪರಾಜಿತಳಾದ ಆಕೆಯು, ಧೂಮ್ರವರ್ಣದ ಜಡೆಯನ್ನುಳ್ಳ ಈಶ್ವರನನ್ನು ಕುರಿತು, 'ಹೇ ಭಗವಂತನೇ, ನೀನು ದೂತನಂತೆ ಶುಂಭ ನಿಶುಂಭರ ಬಳಿಗೆ ಹೋಗು' ಎಂದು ಅರಿಕೆಮಾಡಿದಳು.

೨೫. 'ಅತಿ ಗರ್ವವನ್ನುಳ್ಳ ಶುಂಭನಿಶುಂಭರನ್ನು ಕುರಿತು ಮತ್ತು ಯುದ್ಧಕ್ಕಾಗಿ ನಿಂತಿರುವ ಇತರ ದಾನವರನ್ನು ಕುರಿತು ಹೇಳು.'

ತ್ರೈಲೋಕ್ಯಮಿಂದ್ರೋ ಲಭತಾಂ ದೇವಾಸ್ಸಂತು ಹವಿರ್ಭುಜಃ ।
ಯೂಯಂ ಪ್ರಯಾತ ಪಾತಾಲಂ ಯದಿ ಜೀವಿತುಮಿಚ್ಛಥ ॥ ೨೬ ॥

ಬಲಾವಲೇಪಾದಥ ಚೇದ್ಭವಂತೋ ಯುದ್ಧಕಾಂಕ್ಷಿಣಃ ।
ತದಾಗಚ್ಛತ ತೃಪ್ಯಂತು ಮಚ್ಛಿವಾಃ ಪಿಶಿತೇನ ವಃ ॥ ೨೭ ॥

ಯತೋ ನಿಯುಕ್ತೋ ದೌತ್ಯೇನ ತಯಾ ದೇವ್ಯಾ ಶಿವಃ ಸ್ವಯಮ್ ।
ಶಿವದೂತೀತಿ ಲೋಕೇಽಸ್ಮಿಂಸ್ತತಃ ಸಾ ಖ್ಯಾತಿಮಾಗತಾ ॥ ೨೮ ॥

ತೇಽಪಿ ಶ್ರುತ್ವಾ ವಚೋ ದೇವ್ಯಾಃ ಶರ್ವಾಖ್ಯಾತಂ ಮಹಾಸುರಾಃ ।
ಅಮರ್ಷಾಪೂರಿತಾ ಜಗ್ಮುರ್ಯತ್ರ ಕಾತ್ಯಾಯನೀ ಸ್ಥಿತಾ ॥ ೨೯ ॥

ತತಃ ಪ್ರಥಮಮೇವಾಗ್ರೇ ಶರಶಕ್ತ್ಯೃಷ್ಟಿವೃಷ್ಟಿಭಿಃ ।
ವವರ್ಷುರುದ್ಧತಾಮರ್ಷಾಸ್ತಾಂ ದೇವೀಮಮರಾರಯಃ ॥ ೩೦ ॥

ಸಾ ಚ ತಾನ್ಪ್ರಹಿತಾನ್ಬಾಣಾನ್ ಶೂಲಶಕ್ತಿಪರಶ್ವಧಾನ್ ।
ಚಿಚ್ಛೇದ ಲೀಲಯಾಽಽಧ್ಮಾತಧನುರ್ಮುಕ್ತೈರ್ಮಹೇಷುಭಿಃ ॥ ೩೧ ॥

ತಸ್ಯಾಗ್ರತಸ್ತಥಾ ಕಾಲೀ ಶೂಲಪಾತವಿದಾರಿತಾನ್ ।
ಖಟ್ವಾಂಗಪೋಥಿತಾಂಶ್ಚಾರೀನ್ ಕುರ್ವತೀ ವ್ಯಚರತ್ತದಾ ॥ ೩೨ ॥

ಕಮಂಡಲುಜಲಾಕ್ಷೇಪಹತವೀರ್ಯಾನ್ ಹತೌಜಸಃ ।
ಬ್ರಹ್ಮಾಣೀ ಚಾಕರೋಚ್ಛತ್ರೂನ್ ಯೇನ ಯೇನ ಸ್ಮ ಧಾವತಿ ॥ ೩೩ ॥

ಮಾಹೇಶ್ವರೀ ತ್ರಿಶೂಲೇನ ತಥಾ ಚಕ್ರೇಣ ವೈಷ್ಣವೀ ।
ದೈತ್ಯಾನ್ ಜಘಾನ ಕೌಮಾರೀ ತಥಾ ಶಕ್ತ್ಯಾಽತಿಕೋಪನಾ ॥ ೩೪ ॥

೨೬. "ಇಂದ್ರನು ಮೂರು ಲೋಕಗಳನ್ನೂ ಪಡೆಯಲಿ! ದೇವತೆಗಳಿಗೆ (ಎಂದಿನಂತೆ) ಹವಿಸ್ಸು ಸಿಕ್ಕಲಿ! ನಿಮಗೆ ಜೀವಿಸುವ ಆಸೆಯಿದ್ದರೆ ಪಾತಾಳವನ್ನು ಸೇರಿರಿ!"

೨೭. "ಹಾಗಲ್ಲದೆ ನಿಮ್ಮ ಬಾಹುಬಲದ ಅಹಂಕಾರದಿಂದ ಯುದ್ಧವನ್ನೇ ಅಪೇಕ್ಷಿಸುವಿರಾದರೆ ಬನ್ನಿರಿ! ನಿಮ್ಮ ಮಾಂಸಗಳಿಂದ ನನ್ನ ನರಿಗಳು ತೃಪ್ತಿಯನ್ನು ಹೊಂದಲಿ!"

೨೮. ಆ ದೇವಿಯಿಂದ ಸ್ವಯಂ ಶಿವನೇ ದೂತನಾಗಿ ನಿಯೋಜಲ್ಪಟ್ಟ ಕಾರಣ ಅವಳು ಶಿವದೂತಿಯೆಂದು ಈ ಲೋಕದಲ್ಲಿ ಪ್ರಸಿದ್ಧಳಾಗಿದ್ದಾಳೆ.

೨೯. ಆ ಮಹಾಸುರರು ಕೂಡ ಶಿವನು ಹೇಳಿದ ದೇವೀವಚನವನ್ನು ಕೇಳಿ ಕೋಪಪೂರಿತರಾಗಿ ಕಾತ್ಯಾಯನಿಯಿದ್ದಲ್ಲಿಗೆ ಹೋದರು.

೩೦. ಅನಂತರದಲ್ಲಿಯೇ ಅತ್ಯಂತ ಕೋಪವುಳ್ಳವರಾದ (ಆ) ದೇವಶತ್ರುಗಳು (ತಾವೇ) ಮೊದಲು ಆ ದೇವಿಯ ಮೇಲೆ ಬಾಣ, ಶಕ್ತ್ಯಾಯುಧ, ಋಷ್ಟಿ – ಈ ಶಸ್ತ್ರಗಳ ಮಳೆಯನ್ನೇ ಸುರಿಸಿದರು.

೩೧. ಆ ಚಂಡಿಕಾದೇವಿಯು (ಆ ರಾಕ್ಷಸರು ಬಿಟ್ಟ) ಬಾಣಗಳನ್ನೂ, ಶೂಲ, ಶಕ್ತಿ, ಪರಶು ಮುಂತಾದ ಆಯುಧಗಳನ್ನೂ, ಹೆದೆಯೇರಿಸಿದ ತನ್ನ ಧನುಸ್ಸಿನಿಂದ ಬಿಟ್ಟ ಬಾಣಗಳಿಂದ ಅನಾಯಾಸವಾಗಿಯೇ ಕತ್ತರಿಸಿ ಹಾಕಿದಳು.

೩೨. ಹಾಗೆಯೇ ಆಕೆಯ ಮುಂದುಗಡೆಯಿದ್ದ ಕಾಳಿಯೂ ಶತ್ರುಗಳನ್ನು ಶೂಲದಿಂದ ಸೀಳುತ್ತಲೂ ಖಟ್ವಾಂಗದಿಂದ ಚುಚ್ಚುತ್ತಲೂ ತಿರುಗಾಡುತ್ತಿದ್ದಳು.

೩೩. ಬ್ರಹ್ಮಾಣಿಯು ತಾನು ಓಡಾಡಿದ ಕಡೆಯಲ್ಲಿದ್ದ ಶತ್ರುಗಳನ್ನೆಲ್ಲ ತನ್ನ ಕಮಂಡಲುವಿನ ನೀರನ್ನು ಚಿಮುಕಿಸುವುದರ ಮೂಲಕ ಹತವೀರ್ಯರನ್ನಾಗಿಯೂ, ಹತತೇಜಸ್ಕರನ್ನಾಗಿಯೂ ಮಾಡುತ್ತಿದ್ದಳು.

೩೪. ಮಾಹೇಶ್ವರಿಯು ತ್ರಿಶೂಲದಿಂದಲೂ, ವೈಷ್ಣವಿಯು ಚಕ್ರದಿಂದಲೂ, ಅತ್ಯಂತ ಕೋಪಯುಕ್ತಳಾದ ಕೌಮಾರಿಯು ಶಕ್ತ್ಯಾಯುಧದಿಂದಲೂ ದೈತ್ಯರನ್ನು ಕೊಲ್ಲುತ್ತಿದ್ದರು.

ಐಂದ್ರೀ ಕುಲಿಶಪಾತೇನ ಶತಶೋ ದೈತ್ಯದಾನವಾಃ ।
ಪೇತುರ್ವಿದಾರಿತಾಃ ಪೃಥ್ವ್ಯಾಂ ರುಧಿರೌಘಪ್ರವರ್ಷಿಣಃ ॥ ೩೫ ॥

ತುಂಡಪ್ರಹಾರವಿಧ್ವಸ್ತಾ ದಂಷ್ಟ್ರಾಗ್ರಕ್ಷತವಕ್ಷಸಃ ।
ವಾರಾಹಮೂರ್ತ್ಯಾ ನ್ಯಪತಂಶ್ಚಕ್ರೇಣ ಚ ವಿದಾರಿತಾಃ ॥ ೩೬ ॥

ನಖೈರ್ವಿದಾರಿತಾಂಶ್ಚಾನ್ಯಾನ್ ಭಕ್ಷಯಂತೀ ಮಹಾಽಸುರಾನ್ ।
ನಾರಸಿಂಹೀ ಚಚಾರಾಜೌ ನಾದಾಪೂರ್ಣದಿಗಂಬರಾ ॥ ೩೭ ॥

ಚಂಡಾಟ್ಟಹಾಸೈರಸುರಾಃ ಶಿವದೂತ್ಯಭಿದೂಷಿತಾಃ ।
ಪೇತುಃ ಪೃಥಿವ್ಯಾಂ ಪತಿತಾಸ್ತಾಂಶ್ಚಖಾದಾಥ ಸಾ ತದಾ ॥ ೩೮ ॥

ಇತಿ ಮಾತೃಗಣಂ ಕ್ರುದ್ಧಂ ಮರ್ದಯಂತಂ ಮಹಾಽಸುರಾನ್ ।
ದೃಷ್ಟ್ವಾಽಭ್ಯುಪಾಯೈರ್ವಿವಿಧೈರ್ನೇಶುರ್ದೇವಾರಿಸೈನಿಕಾಃ ॥ ೩೯ ॥

ಪಲಾಯನಪರಾನ್ ದೃಷ್ಟ್ವಾ ದೈತ್ಯಾನ್ಮಾತೃಗಣಾರ್ದಿತಾನ್ ।
ಯೋದ್ಧುಮಭ್ಯಾಯಯೌ ಕ್ರುದ್ಧೋ ರಕ್ತಬೀಜೋ
ಮಹಾಽಸುರಃ ॥ ೪೦ ॥

ರಕ್ತಬಿಂದುರ್ಯದಾ ಭೂಮೌ ಪತತ್ಯಸ್ಯ ಶರೀರತಃ ।
ಸಮುತ್ಪತತಿ ಮೇದಿನ್ಯಾಂ ತತ್ಪ್ರಮಾಣೋ ಮಹಾಽಸುರಃ ॥ ೪೧ ॥

ಯುಯುಧೇ ಸ ಗದಾಪಾಣಿರಿಂದ್ರಶಕ್ತ್ಯಾ ಮಹಾಽಸುರಃ ।
ತತಶ್ಚೈಂದ್ರೀ ಸ್ವವಜ್ರೇಣ ರಕ್ತಬೀಜಮತಾಡಯತ್ ॥ ೪೨ ॥

೩೫. ಇಂದ್ರಾಣಿಯ ವಜ್ರಾಯುಧದ ಪೆಟ್ಟಿನಿಂದ ದೈತ್ಯದಾನವರು ನೂರಾರು ಸಂಖ್ಯೆಯಲ್ಲಿ ಸೀಳಲ್ಪಟ್ಟು ರಕ್ತಪ್ರವಾಹವನ್ನೇ ಹರಿಯಿಸುತ್ತಾ ಭೂಮಿಯಲ್ಲಿ ಬಿದ್ದಿದ್ದರು.

೩೬. ವಾರಾಹಿಯ ಮುಸುಡಿಯ ಏಟಿನಿಂದ (ಕೆಲವರು ರಾಕ್ಷಸರು) ನಾಶವಾದರು. (ಇನ್ನು ಕೆಲವರು) ಕೋರೆದಾಡೆಯ ತುದಿಯಿಂದ ಎದೆಯಲ್ಲಿ ಗಾಯ ಹೊಂದಿದರು. (ಮತ್ತೆ ಕೆಲವರು) ಚಕ್ರದಿಂದ ಸೀಳಲ್ಪಟ್ಟು ಕೆಳಗೆ ಬಿದ್ದರು.

೩೭. ನಾರಸಿಂಹಿಯ ಉಗುರುಗಳಿಂದ ಸೀಳುತ್ತ, ಇತರ ಮಹಾಸುರರನ್ನು ಭಕ್ಷಿಸುತ್ತ, ದಿಗಂತರಗಳನ್ನು ತನ್ನ ಸಿಂಹನಾದದಿಂದ ತುಂಬಿಸುತ್ತ (ಆ) ಯುದ್ಧಭೂಮಿಯಲ್ಲಿ ಸಂಚರಿಸುತ್ತಿದ್ದಳು.

೩೮. ಶಿವದೂತಿಯ ಪ್ರಚಂಡಾಹಾಟ್ಟಹಾಸದಿಂದ ಅಸುರರು ಭಯ ಭೀತರಾಗಿ ಭೂಮಿಯಲ್ಲಿ ಬಿದ್ದರು. ಹೀಗೆ ಬಿದ್ದ ಅವರನ್ನು ಅವಳು ಆಗಲೇ ತಿಂದುಹಾಕಿದಳು.

೩೯. ಹೀಗೆ ಕೋಪಗೊಂಡಿರುವ ಮಾತೃಗಣವು ಮಹಾಸುರರನ್ನು ಬೇರೆ ಬೇರೆ ಉಪಾಯದಿಂದ ಮರ್ದಿಸುತ್ತಿರುವುದನ್ನು ಕಂಡು ರಾಕ್ಷಸಸೈನಿಕರು (ದಿಕ್ಕಾಪಾಲಾಗಿ) ವಿನಾಶಹೊಂದಿದರು.

೪೦. ಮಾತೃಗಣದಿಂದ ನಾಶವಾಗುತ್ತಿದ್ದ ಮತ್ತು ಓಡಿಹೋಗುತ್ತಿದ್ದ ದೈತ್ಯರನ್ನು ನೋಡಿ ಕೋಪಗೊಂಡ ರಕ್ತಬೀಜನೆಂಬ ಮಹಾಸುರನು ಯುದ್ಧ ಮಾಡಲು ಎದುರು ಬಂದನು.

೪೧. ಇವನ ಶರೀರದಿಂದ ಭೂಮಿಯಲ್ಲಿ ಒಂದು ರಕ್ತಬಿಂದುವು ಬಿದ್ದರೆ ಭೂಮಿಯ ಆ ಜಾಗದಿಂದ ಅವನಷ್ಟೇ ಬಲಶಾಲಿಯಾದ ಮಹಾ ಸುರನೊಬ್ಬನು ಮೇಲೇಳುವನು.

೪೨. ಆ ಮಹಾರಾಕ್ಷಸನು ಗದಾಪಾಣಿಯಾಗಿ ಇಂದ್ರಾಣಿಯೊಡನೆ ಯುದ್ಧಮಾಡಿದನು. ಆಗ ಇಂದ್ರಾಣಿಯು ತನ್ನ ವಜ್ರಾಯುಧದಿಂದ ರಕ್ತ ಬೀಜನನ್ನು ಹೊಡೆದಳು.

ಕುಲಿಶೇನಾಹತಸ್ಯಾಶು ಬಹು ಸುಸ್ರಾವ ಶೋಣಿತಮ್ ।
ಸಮುತ್ತಸ್ಥುಸ್ತತೋ ಯೋಧಾಸ್ತದ್ರೂಪಾಸ್ತತ್ಪರಾಕ್ರಮಾಃ ॥ ೪೩ ॥

ಯಾವಂತಃ ಪತಿತಾಸ್ತಸ್ಯ ಶರೀರಾದ್ರಕ್ತಬಿಂದವಃ ।
ತಾವಂತಃ ಪುರುಷಾ ಜಾತಾಸ್ತದ್ವೀರ್ಯಬಲವಿಕ್ರಮಾಃ ॥ ೪೪ ॥

ತೇ ಚಾಪಿ ಯುಯುಧುಸ್ತತ್ರ ಪುರುಷಾ ರಕ್ತಸಂಭವಾಃ ।
ಸಮಂ ಮಾತೃಭಿರತ್ಯುಗ್ರಶಸ್ತ್ರಪಾತಾತಿಭೀಷಣಮ್ ॥ ೪೫ ॥

ಪುನಶ್ಚ ವಜ್ರಪಾತೇನ ಕ್ಷತಮಸ್ಯ ಶಿರೋ ಯದಾ ।
ವವಾಹ ರಕ್ತಂ ಪುರುಷಾಸ್ತತೋ ಜಾತಾಸ್ಸಹಸ್ರಶಃ ॥ ೪೬ ॥

ವೈಷ್ಣವೀ ಸಮರೇ ಚೈನಂ ಚಕ್ರೇಣಾಭಿಜಘಾನ ಹ ।
ಗದಯಾ ತಾಡಯಾಮಾಸ ಐಂದ್ರೀ ತಮಸುರೇಶ್ವರಮ್ ॥ ೪೭ ॥

ವೈಷ್ಣವೀಚಕ್ರಭಿನ್ನಸ್ಯ ರುಧಿರಸ್ರಾವಸಂಭವೈಃ ।
ಸಹಸ್ರಶೋ ಜಗದ್ವ್ಯಾಪ್ತಂ ತತ್ಪ್ರಮಾಣೈರ್ಮಹಾಽಸುರೈಃ ॥ ೪೮ ॥

ಶಕ್ತ್ಯಾ ಜಘಾನ ಕೌಮಾರೀ ವಾರಾಹೀ ಚ ತಥಾಽಸಿನಾ ।
ಮಾಹೇಶ್ವರೀ ತ್ರಿಶೂಲೇನ ರಕ್ತಬೀಜಂ ಮಹಾಸುರಮ್ ॥ ೪೯ ॥

ಸ ಚಾಪಿ ಗದಯಾ ದೈತ್ಯಃ ಸರ್ವಾ ಏವಾಹನತ್ ಪೃಥಕ್ ।
ಮಾತ್ೃಃ ಕೋಪಸಮಾವಿಷ್ಟೋ ರಕ್ತಬೀಜೋ ಮಹಾಽಸುರಃ ॥ ೫೦ ॥

ತಸ್ಯಾಹತಸ್ಯ ಬಹುಧಾ ಶಕ್ತಿಶೂಲಾದಿಭಿರ್ಭುವಿ ।
ಪಪಾತ ಯೋ ವೈ ರಕ್ತೌಘಸ್ತೇನಾಸಂಛತಶೋಽಸುರಾಃ ॥ ೫೧ ॥

೪೨. ವಜ್ರಾಯುಧದಿಂದ ಹೊಡೆಯಲ್ಪಟ್ಟ (ಇವನ ದೇಹದಿಂದ) ಶೀಘ್ರವಾಗಿ ಬಹುವಾಗಿ ರಕ್ತವು ಸೋರಿತು. ಆದರಿಂದ ಅವನಂತೆಯೇ ರೂಪಪರಾಕ್ರಮಗಳುಳ್ಳ ಯೋಧರು ಎದ್ದು ಬಂದರು.

೪೪. ಅವನ ಶರೀರದಿಂದ ರಕ್ತದ ಎಷ್ಟು ತೊಟ್ಟುಗಳು ಸುರಿದವೋ ಅಷ್ಟು ಜನ ರಾಕ್ಷಸರು ಅವನಷ್ಟೇ ಕಾರ್ಯಶಕ್ತಿ, ಪ್ರಾಣಶಕ್ತಿ, ದೇಹಶಕ್ತಿ ಉಳ್ಳವರಾಗಿ ಹುಟ್ಟಿದರು.

೪೫. ರಕ್ತಬಿಂದುಗಳಿಂದ ಹುಟ್ಟಿದ ಆ ರಾಕ್ಷಸರೂ ಕೂಡ ಆ ಯುದ್ಧ ಭೂಮಿಯಲ್ಲಿ ಮಾತೃಗಣಗಳೊಂದಿಗೆ ಆಯುಧಪ್ರಹಾರಗಳಿಂದ ಅತ್ಯಂತ ಭಯಂಕರವಾಗುವಂತೆ ಘೋರವಾಗಿ ಯುದ್ಧಮಾಡಿದರು.

೪೬. ಅವನ ಶಿರಸ್ಸನ್ನು ಪುನಃ ವಜ್ರದಿಂದ (ಐಂದ್ರಿಯು) ಹೊಡೆದಾಗ ರಕ್ತವು ಹರಿದು ಅದರಿಂದ ಸಾವಿರಾರು ರಾಕ್ಷಸರು ಹುಟ್ಟಿದರು.

೪೭. ಯುದ್ಧದಲ್ಲಿ ವೈಷ್ಣವಿಯು ಇವನನ್ನು ಚಕ್ರದಿಂದ ಹೊಡೆದಳು. ಐಂದ್ರಿಯೂ ಈ ಅಸುರೇಶ್ವರನನ್ನು ಗದೆಯಿಂದ ಹೊಡೆದಳು.

೪೮. ವೈಷ್ಣವಿಯ ಚಕ್ರಾಯುಧದಿಂದ ಗಾಯಗೊಂಡ (ರಕ್ತಬೀಜಾ ಸುರನ) ರಕ್ತದ ಸುರಿಯುವಿಕೆಯಿಂದ ಸಾವಿರಗಟ್ಟಲೆಯಲ್ಲಿ ಉಂಟಾದ, ಅವನಂತೆಯೇ ಶಕ್ತ್ಯಾದಿಗಳನ್ನುಳ್ಳ ಮಹಾರಾಕ್ಷಸರಿಂದ ಜಗತ್ತು ತುಂಬಿ ಹೋಯಿತು.

೪೯. ಕೌಮಾರಿಯು ಅವನನ್ನು ಶಕ್ತ್ಯಾಯುಧದಿಂದ ಹೊಡೆದಳು. ಹಾಗೆಯೇ ವಾರಾಹಿಯು ಕತ್ತಿಯಿಂದಲೂ, ಮಾಹೇಶ್ವರಿಯು ತ್ರಿಶೂಲ ದಿಂದಲೂ ರಕ್ತಬೀಜಾಸುರನನ್ನು ಹೊಡೆದರು.

೫೦. ರಕ್ತಬೀಜನೆಂಬ ಆ ಮಹಾಸುರನು ಕೂಡ ಕೋಪಗೊಂಡು ಗದೆಯಿಂದ ಆ ಮಾತೃಕೆಯರೆಲ್ಲರನ್ನೂ ಹೊಡೆಯುತ್ತಿದ್ದನು.

೫೧. ಶಕ್ತಿ, ಶೂಲ ಮೊದಲಾದವುಗಳಿಂದ ಬಹುವಿಧವಾಗಿ ಹೊಡೆ ಯಲ್ಪಟ್ಟ ಅವನ (ದೇಹದಿಂದ) ಭೂಮಿಯಲ್ಲಿ ಯಾವ ರಕ್ತಪ್ರವಾಹವು (ಹರಿಯಿತೋ) ಅದರಿಂದ ನೂರಾರು ಅಸುರರು ಉಂಟಾದರು.

ತೈಶ್ಚಾಸುರಾಸೃಕ್ಸಂಭೂತೈರಸುರೈಃ ಸಕಲಂ ಜಗತ್ ।
ವ್ಯಾಪ್ತಮಾಸೀತ್ತತೋ ದೇವಾ ಭಯಮಾಜಗ್ಮುರುತ್ತಮಮ್ ॥ ೫೨ ॥

ತಾನ್ ವಿಷಣ್ಣಾನ್ ಸುರಾನ್ ದೃಷ್ಟ್ವಾ ಚಂಡಿಕಾ ಪ್ರಾಹ ಸತ್ವರಮ್ ।
ಉವಾಚ ಕಾಲೀಂ ಚಾಮುಂಡೇ ವಿಸ್ತೀರ್ಣಂ ವದನಂ ಕುರು ॥ ೫೩ ॥

ಮಚ್ಛಸ್ತ್ರಪಾತಸಂಭೂತಾನ್ ರಕ್ತಬಿಂದೂನ್ಮಹಾಽಸುರಾನ್ ।
ರಕ್ತಬಿಂದೋಃ ಪ್ರತೀಚ್ಛ ತ್ವಂ ವಕ್ತ್ರೇಣಾನೇನ ವೇಗಿನಾ ॥ ೫೪ ॥

ಭಕ್ಷಯಂತೀ ಚರ ರಣೇ ತದುತ್ಪನ್ನಾನ್ ಮಹಾಽಸುರಾನ್ ।
ಏವಮೇಷ ಕ್ಷಯಂ ದೈತ್ಯಃ ಕ್ಷೀಣರಕ್ತೋ ಗಮಿಷ್ಯತಿ ॥ ೫೫ ॥

ಭಕ್ಷ್ಯಮಾಣಾಸ್ತ್ವಯಾ ಚೋಗ್ರಾ ನ ಚೋತ್ಪತ್ಸ್ಯಂತಿ ಚಾಪರೇ ।
ಇತ್ಯುಕ್ತ್ವಾ ತಾಂ ತತೋ ದೇವೀ ಶೂಲೇನಾಭಿಜಘಾನ ತಮ್ ॥ ೫೬ ॥

ಮುಖೇನ ಕಾಲೀ ಜಗೃಹೇ ರಕ್ತಬೀಜಸ್ಯ ಶೋಣಿತಮ್ ॥ ೫೭ ॥

ತತೋಽಸಾವಾಜಘಾನಾಥ ಗದಯಾ ತತ್ರ ಚಂಡಿಕಾಮ್ ।
ನ ಚಾಸ್ಯಾ ವೇದನಾಂ ಚಕ್ರೇ ಗದಾಪಾತೋಽಲ್ಪಿಕಾಮಪಿ ॥ ೫೮ ॥

ತಸ್ಯಾಹತಸ್ಯ ದೇಹಾತ್ತು ಬಹು ಸುಸ್ರಾವ ಶೋಣಿತಮ್ ।
ಯತಸ್ತತಸ್ತದ್ವಕ್ತ್ರೇಣ ಚಾಮುಂಡಾ ಸಂಪ್ರತೀಚ್ಛತಿ ॥ ೫೯ ॥

ಮುಖೇ ಸಮುದ್ಗತಾ ಯೇಽಸ್ಯಾ ರಕ್ತಪಾತಾನ್ಮಹಾಽಸುರಾಃ ।
ತಾಂಶ್ಚಖಾದಾಥ ಚಾಮುಂಡಾ ಪಪೌ ತಸ್ಯ ಚ ಶೋಣಿತಮ್ ॥ ೬೦ ॥

೫೨. ರಕ್ತಬೀಜಾಸುರನ ರಕ್ತದಿಂದ ಹುಟ್ಟಿದ ಆ ರಾಕ್ಷಸರಿಂದ ಜಗತ್ತೆಲ್ಲವೂ ತುಂಬಿಹೋಯಿತು. ಅನಂತರ ದೇವತೆಗಳು ಅತ್ಯಂತವಾಗಿ ಭಯವನ್ನು ಹೊಂದಿದರು.

೫೩. ಗಾಬರಿಯಿಂದ ದುಃಖಿತರಾಗಿದ್ದ ದೇವತೆಗಳನ್ನು ನೋಡಿ ಚಂಡಿಕೆಯು ಜಾಗ್ರತೆಯಾಗಿ ಕಾಳಿಯನ್ನು ಕುರಿತು ಹೀಗೆಂದಳು: 'ಹೇ ಚಾಮುಂಡಿ, ನಿನ್ನ ಬಾಯನ್ನು ವಿಸ್ತರಿಸು !'

೫೪. 'ನನ್ನ ಶಸ್ತ್ರಗಳ ಏಟಿನಿಂದ ಉಂಟಾಗುವ ರಕ್ತದ ಹನಿಗಳನ್ನೂ, ರಕ್ತಬಿಂದುವಿನಿಂದ ಹುಟ್ಟುವ ಮಹಾಸುರರನ್ನೂ, ವೇಗಶಾಲಿಯಾದ ಈ (ನಿನ್ನ) ಬಾಯಿಂದ ಹೀರಿಬಿಡು.'

೫೫. 'ಆದರಿಂದುಂಟಾಗುವ ಮಹಾಸುರರನ್ನು ತಿನ್ನುತ್ತ ರಣಭೂಮಿಯಲ್ಲಿ ಸಂಚರಿಸುತ್ತಿರು ! ಹೀಗೆ ಈ ರಾಕ್ಷಸನು ರಕ್ತವನ್ನು ಕಳೆದುಕೊಂಡು ನಾಶ ಹೊಂದುತ್ತಾನೆ !'

೫೬. 'ನೀನು ಉಗ್ರರಾದ ಅವರನ್ನು ತಿನ್ನುತ್ತಿದ್ದರೆ ಅಂಥ ಇತರ ರಾಕ್ಷಸರು ಪುನಃ ಉಂಟಾಗುವುದಿಲ್ಲ.' ಹೀಗೆ ಅವಳಿಗೆ ಹೇಳಿ ಅನಂತರ ದೇವಿಯು ಅವನನ್ನು ಶೂಲದಿಂದ ಹೊಡೆದಳು.

೫೭. ರಕ್ತಬೀಜನ ರಕ್ತವನ್ನು ಕಾಳಿಯು (ತನ್ನ) ಬಾಯಿಂದ ನುಂಗಿದಳು.

೫೮. ಅನಂತರ ಅವನು ಆ ರಣಭೂಮಿಯಲ್ಲಿ ಚಂಡಿಕೆಯನ್ನು ಗದೆಯಿಂದ ಹೊಡೆದನು. ಆ ಗದಾಪಾತವು ಅವಳಿಗೆ ಸ್ವಲ್ಪವಾದರೂ ನೋವನ್ನುಂಟುಮಾಡಲಿಲ್ಲ.

೫೯. (ದೇವಿಯಿಂದ) ಹೊಡೆಯಲ್ಪಟ್ಟ ಅವನ ದೇಹದಿಂದ ರಕ್ತವು ಬಹುವಾಗಿ ಸೋರಿತು. ಎಲ್ಲೆಲ್ಲಿ (ರಕ್ತವು ಸೋರಿತೋ) ಅಲ್ಲಲ್ಲಿಯೇ ಚಾಮುಂಡಿಯು (ತನ್ನ) ಬಾಯಿಂದ (ಅದನ್ನು) ಹೀರುತ್ತಿದ್ದಳು.

೬೦. ಇವಳ ಬಾಯಲ್ಲಿ ರಕ್ತವು ಬೀಳುವುದರಿಂದ ಯಾವ ರಾಕ್ಷಸರು ಎದ್ದು ಬರುತ್ತಿದ್ದರೋ, ಅವರೆಲ್ಲರನ್ನೂ ಚಾಮುಂಡಿಯು ತಿನ್ನುತ್ತಿದ್ದಳು ಮತ್ತು ರಕ್ತಬೀಜನ (ದೇಹದಿಂದ ಬೀಳುತ್ತಿದ್ದ) ರಕ್ತವನ್ನೂ ಕುಡಿಯುತ್ತಿದ್ದಳು.

ದೇವೀ ಶೂಲೇನ ವಜ್ರೇಣ ಬಾಣೈರಸಿಭಿರ್ಋಷ್ಟಿಭಿಃ ।
ಜಘಾನ ರಕ್ತಬೀಜಂ ತಂ ಚಾಮುಂಡಾ ಪೀತಶೋಣಿತಮ್ ॥ ೬೧ ॥

ಸ ಪಪಾತ ಮಹೀಪೃಷ್ಠೇ ಶಸ್ತ್ರಸಂಘಸಮಾಹತಃ ।
ನೀರಕ್ತಶ್ಚ ಮಹೀಪಾಲ ರಕ್ತಬೀಜೋ ಮಹಾಽಸುರಃ ॥ ೬೨ ॥

ತತಸ್ತೇ ಹರ್ಷಮತುಲಮವಾಪುಸ್ತ್ರಿದಶಾ ನೃಪ ।
ತೇಷಾಂ ಮಾತೃಗಣೋ ಜಾತೋ ನನರ್ತಾಸೃಙ್ಮದೋದ್ಧತಃ ॥ ೬೩ ॥

ಇತಿ ಶ್ರೀಮಾರ್ಕಂಡೇಯಪುರಾಣೇ ಸಾವರ್ಣಿಕೇ ಮನ್ವಂತರೇ ದೇವೀಮಾಹಾತ್ಮ್ಯೇ
ರಕ್ತಬೀಜವಧೋ ನಾಮ ಅಷ್ಟಮೋಽಧ್ಯಾಯಃ

೬೧. ಚಂಡಿಕಾದೇವಿಯು ಆ ರಕ್ತಬೀಜನನ್ನು ಶೂಲ, ವಜ್ರಾಯುಧ, ಬಾಣಗಳು, ಕತ್ತಿ, ಋಷ್ಟಿ– ಇವುಗಳಿಂದ ಹೊಡೆಯುತ್ತಿದ್ದಳು. ಚಾಮುಂಡಿಯು (ಅವನ) ರಕ್ತವನ್ನು ಹೀರುತ್ತಿದ್ದಳು.

೬೨. ಎಲೈ ಸುರಥರಾಜನೆ, (ಹೀಗೆ) ರಕ್ತಬೀಜನೆಂಬ ಆ ಮಹಾ ರಾಕ್ಷಸನು ಶಸ್ತ್ರಸಮೂಹಗಳಿಂದ ಹೊಡೆಯಲ್ಪಟ್ಟವನಾಗಿ ರಕ್ತಹೀನನಾಗಿ ಭೂತಲದಲ್ಲಿ ಬಿದ್ದನು.

೬೩. ಎಲೈ ರಾಜನೆ, ಆಗ ಆ ದೇವತೆಗಳೆಲ್ಲ ಸಂತೋಷಗೊಂಡರು. ಅವರ (ಶಕ್ತಿಗಳಿಂದ) ಉದ್ಭವಿಸಿದ್ದ ಮಾತೃಗಣದ ದೇವಿಯರು ರಕ್ತದ ಮದದಿಂದ ಉಬ್ಬಿ ಕುಣಿದಾಡಿದರು.

ಹೀಗೆ ಸಾವರ್ಣಿಕಮನ್ವಂತರಕ್ಕೆ ಸೇರಿದ ಮಾರ್ಕಂಡೇಯಪುರಾಣದ ದೇವೀಮಾಹಾತ್ಮ್ಯದಲ್ಲಿ 'ರಕ್ತಬೀಜವಧೆ' ಎಂಬ ಎಂಟನೆಯ ಅಧ್ಯಾಯವು ಮುಗಿಯಿತು.

# ನವಮೋಽಧ್ಯಾಯಃ

## ನಿಶುಂಭವಧಃ

### ಧ್ಯಾನಮ್

ಓಮ್ । ಬಂಧೂಕಕಾಂಚನನಿಭಂ ರುಚಿರಾಕ್ಷಮಾಲಾಂ, ಪಾಶಾಂ-ಕುಶೌ ಚ ವರದಾಂ ನಿಜಬಾಹುದಂಡೈಃ ಬಿಭ್ರಾಣಮಿಂದುಶಕಲಾಭರಣಂ ತ್ರಿನೇತ್ರಮರ್ಧಾಂಬಿಕೇಶಮನಿಶಂ ವಪುರಾಶ್ರಯಾಮಿ ॥

ರಾಜೋವಾಚ ॥ ೧ ॥

ವಿಚಿತ್ರಮಿದಮಾಖ್ಯಾತಂ ಭಗವನ್ ಭವತಾ ಮಮ ।
ದೇವ್ಯಾಶ್ಚರಿತಮಾಹಾತ್ಮ್ಯಂ ರಕ್ತಬೀಜವಧಾಶ್ರಿತಮ್ ॥ ೨ ॥

ಭೂಯಶ್ಚೇಚ್ಛಾಮ್ಯಹಂ ಶ್ರೋತುಂ ರಕ್ತಬೀಜೇ ನಿಪಾತಿತೇ ।
ಚಕಾರ ಶುಂಭೋ ಯತ್ಕರ್ಮ ನಿಶುಂಭಶ್ಚಾತಿಕೋಪನಃ ॥ ೩ ॥

ಋಷಿರುವಾಚ ॥ ೪ ॥

ಚಕಾರ ಕೋಪಮತುಲಂ ರಕ್ತಬೀಜೇ ನಿಪಾತಿತೇ ।
ಶುಂಭಾಸುರೋ ನಿಶುಂಭಶ್ಚ ಹತೇಷ್ವನ್ಯೇಷು ಚಾಹವೇ ॥ ೫ ॥

ಹನ್ಯಮಾನಂ ಮಹಾಸೈನ್ಯಂ ವಿಲೋಕ್ಯಾಮರ್ಷಮುದ್ವಹನ್ ।
ಅಭ್ಯಧಾವನ್ನಿಶುಂಭೋಽಥ ಮುಖ್ಯಯಾಽಸುರಸೇನಯಾ ॥ ೬ ॥

ತಸ್ಯಾಗ್ರತಸ್ತಥಾ ಪೃಷ್ಠೇ ಪಾರ್ಶ್ವಯೋಶ್ಚ ಮಹಾಽಸುರಾಃ ।
ಸಂದಷ್ಟೌಷ್ಠಪುಟಾಃ ಕ್ರುದ್ಧಾ ಹಂತುಂ ದೇವೀಮುಪಾಯಯುಃ ॥ ೭ ॥

ಆಜಗಾಮ ಮಹಾವೀರ್ಯಃ ಶುಂಭೋಽಪಿ ಸ್ವಬಲೈರ್ವೃತಃ ।
ನಿಹಂತುಂ ಚಂಡಿಕಾಂ ಕೋಪಾತ್ ಕೃತ್ವಾ ಯುದ್ಧಂ ತು ಮಾತೃಭಿಃ ॥ ೮ ॥

# ಒಂಬತ್ತನೆಯ ಅಧ್ಯಾಯ

## ನಿಶುಂಭವಧೆ

### ಧ್ಯಾನ

ಕೆಂಪು ದಾಸವಾಳಪುಷ್ಪದ ಮತ್ತು ಕಾಂಚನದ ಹೊಳಪನ್ನುಳ್ಳ, ಸುಂದರವಾದ ಅಕ್ಷಮಾಲೆ, ಪಾಶಾಂಕುಶಗಳು, ವರದಮುದ್ರೆ – ಇವುಗಳನ್ನು ತನ್ನ (ನಾಲ್ಕು) ಬಾಹುಗಳಿಂದ ಧರಿಸಿರುವ, ಚಂದ್ರಕಲೆಯನ್ನು ಆಭರಣವಾಗಿ ಹೊಂದಿರುವ, ತ್ರಿಲೋಚನೆಯಾದ ಅರ್ಧನಾರೀಶ್ವರನ ಶ್ರೀವಿಗ್ರಹವನ್ನು ಸದಾ ಆಶ್ರಯಿಸುತ್ತೇನೆ.

೧-೨. ರಾಜನಿಂತೆಂದನು: ಭಗವಂತನ, ಆಶ್ಚರ್ಯಕರವಾದ ರಕ್ತಬೀಜನ ವಧೆಯನ್ನವಲಂಬಿಸಿರುವ ದೇವಿಯ ಚರಿತ್ರೆಯ ಮಹಿಮೆಯನ್ನು ನೀನು ನನಗೆ ಹೇಳಿರುತ್ತೀಯೆ.

೩. ರಕ್ತಬೀಜನು ಸತ್ತುಬಿದ್ದಮೇಲೆ ಶುಂಭನೂ, ಅತಿಕೋಪದಿಂದ ಕೂಡಿದ ನಿಶುಂಭನೂ ಏನು ಕಾರ್ಯವನ್ನು ಮಾಡಿದರೆಂಬುದನ್ನು ಕೇಳಲು ಪುನಃ ಇಚ್ಛಿಸುತ್ತೇನೆ.

೪-೫. ಸುಮೇಧ ಋಷಿಯು ಮುಂದುವರಿಸಿದನು: ರಕ್ತಬೀಜನು ಬಿದ್ದ ಮೇಲೆ ಮತ್ತು ಇತರರು ಯುದ್ಧದಲ್ಲಿ ಸತ್ತಮೇಲೆ ಶುಂಭಾಸುರನೂ ಮತ್ತು ನಿಶುಂಭನೂ ಅತ್ಯಂತ ಕೋಪವನ್ನು ಹೊಂದಿದರು.

೬. ಆನಂತರ ದೊಡ್ಡ ಸೈನ್ಯವು (ಹೀಗೆ) ನಾಶವಾಗುತ್ತಿರುವುದನ್ನು ನೋಡಿ ನಿಶುಂಭನು ಕೋಪಗೊಂಡು ಮುಖ್ಯವಾದ ರಾಕ್ಷಸಸೈನ್ಯ ದಿಂದೊಡಗೂಡಿ (ದೇವಿಯನ್ನು) ಎದುರಿಸಿ ಬಂದನು.

೭. ಆವನ ಮುಂದುಗಡೆ, ಹಿಂದುಗಡೆ ಮತ್ತು ಪಕ್ಕಗಳಲ್ಲಿ ಮಹಾ ರಾಕ್ಷಸರು ಕೋಪದಿಂದ ಅವಡುಗಚ್ಚಿದವರಾಗಿ ದೇವಿಯನ್ನು ಕೊಲ್ಲಲು ಬಳಿ ಸಾರಿದರು.

೮. ಮಹಾಬಲಶಾಲಿಯಾದ ಶುಂಭನೂ ಕೂಡ ತನ್ನ ಸೇನೆಯಿಂದ ಪರಿವೃತನಾಗಿ, ಮಾತೃಗಣದೊಡನೆ ಯುದ್ಧವನ್ನು ಮಾಡಿ, ಕೋಪದಿಂದ ಚಂಡಿಕೆಯನ್ನು ಸಂಹರಿಸುವುದಕ್ಕಾಗಿ ಬಂದನು.

ತತೋ ಯುದ್ಧಮತೀವಾಸೀದ್ದೇವ್ಯಾಃ ಶುಂಭನಿಶುಂಭಯೋಃ ।
ಶರವರ್ಷಮತೀವೋಗ್ರಂ ಮೇಘಯೋರಿವ ವರ್ಷತೋಃ ॥ ೯ ॥

ಚಿಚ್ಛೇದಾಸ್ತಾಂಛರಾಂಸ್ತಾಭ್ಯಾಂ ಚಂಡಿಕಾ ಸ್ವಶರೋತ್ಕರೈಃ ।
ತಾಡಯಾಮಾಸ ಚಾಂಗೇಷು ಶಸ್ತ್ರೌಘೈರಸುರೇಶ್ವರೌ ॥ ೧೦ ॥

ನಿಶುಂಭೋ ನಿಶಿತಂ ಖಡ್ಗಂ ಚರ್ಮ ಚಾದಾಯ ಸುಪ್ರಭಮ್ ।
ಅತಾಡಯನ್ಮೂರ್ಧ್ನಿ ಸಿಂಹಂ ದೇವ್ಯಾ ವಾಹನಮುತ್ತಮಮ್ ॥ ೧೧ ॥

ತಾಡಿತೇ ವಾಹನೇ ದೇವೀ ಕ್ಷುರಪ್ರೇಣಾಸಿಮುತ್ತಮಮ್ ।
ನಿಶುಂಭಸ್ಯಾಶು ಚಿಚ್ಛೇದ ಚರ್ಮ ಚಾಪ್ಯಷ್ಟಚಂದ್ರಕಮ್ ॥ ೧೨ ॥

ಛಿನ್ನೇ ಚರ್ಮಣಿ ಖಡ್ಗೇ ಚ ಶಕ್ತಿಂ ಚಿಕ್ಷೇಪ ಸೋಽಸುರಃ ।
ತಾಮಪ್ಯಸ್ಯ ದ್ವಿಧಾ ಚಕ್ರೇ ಚಕ್ರೇಣಾಭಿಮುಖಾಗತಾಮ್ ॥ ೧೩ ॥

ಕೋಪಾಧ್ಮಾತೋ ನಿಶುಂಭೋಽಥ ಶೂಲಂ ಜಗ್ರಾಹ ದಾನವಃ ।
ಆಯಾಂತಂ ಮುಷ್ಟಿಪಾತೇನ ದೇವೀ ತಚ್ಚಾಪ್ಯಚೂರ್ಣಯತ್ ॥ ೧೪ ॥

ಆವಿದ್ಧ್ಯಾಥ ಗದಾಂ ಸೋಽಪಿ ಚಿಕ್ಷೇಪ ಚಂಡಿಕಾಂ ಪ್ರತಿ ।
ಸಾಽಪಿ ದೇವ್ಯಾಸ್ತ್ರಿಶೂಲೇನ ಭಿನ್ನಾ ಭಸ್ಮತ್ವಮಾಗತಾ ॥ ೧೫ ॥

ತತಃ ಪರಶುಹಸ್ತಂ ತಮಾಯಾಂತಂ ದೈತ್ಯಪುಂಗವಮ್ ।
ಆಹತ್ಯ ದೇವೀ ಬಾಣೌಘೈರಪಾತಯತ ಭೂತಲೇ ॥ ೧೬ ॥

೯. ಆಮೇಲೆ ಮಳೆಗರೆಯುತ್ತಿರುವ ಮೋಡಗಳ ಹಾಗೆ ಬಾಣಗಳ ಸುರಿಮಳೆಯನ್ನೇ ಸುರಿಸುತ್ತಿದ್ದ ಶುಂಭನಿಶುಂಭರಿಗೂ, ದೇವಿಗೂ ಅತ್ಯುಗ್ರವಾದ ಯುದ್ಧವುಂಟಾಯಿತು.

೧೦. ಅವರಿಬ್ಬರಿಂದ ಪ್ರಯೋಗಿಸಲ್ಪಟ್ಟ ಬಾಣಗಳನ್ನು ಚಂಡಿಕೆಯು ತನ್ನ ಬಾಣಗಳ ಸಮೂಹದಿಂದ ಕತ್ತರಿಸಿದಳು. ಹಾಗೆಯೇ ಆ ಅಸುರರಾಜರನ್ನು ಅವರ ಅಂಗಗಳಲ್ಲಿ ಶಸ್ತ್ರಸಮೂಹಗಳಿಂದ ಹೊಡೆದಳು.

೧೧. ನಿಶುಂಭಾಸುರನು ಹರಿತವಾದ ಮತ್ತು ಹೊಳೆಯುತ್ತಿರುವ ಖಡ್ಗವನ್ನೂ, ಗುರಾಣಿಯನ್ನೂ ತೆಗೆದುಕೊಂಡು ದೇವಿಯ ಉತ್ತಮ ವಾಹನವಾದ ಸಿಂಹವನ್ನು ತಲೆಯಲ್ಲಿ ಹೊಡೆದನು.

೧೨. (ಹೀಗೆ ಅವನು) ದೇವಿಯ ವಾಹನವನ್ನು ಹೊಡೆಯಲಾಗಿ (ದೇವಿಯು) ಕ್ಷುರಪ್ರವೆಂಬ ಆಯುಧದಿಂದ ನಿಶುಂಭನ ಉತ್ತಮವಾದ ಕತ್ತಿಯನ್ನು ಕೂಡಲೇ ಕತ್ತರಿಸಿಹಾಕಿದಳು. ಹಾಗೆಯೇ ಅಷ್ಟಚಂದ್ರರ ಚಿತ್ರವನ್ನುಳ್ಳ ಗುರಾಣಿಯನ್ನು ಕೂಡ (ಕತ್ತರಿಸಿದಳು).

೧೩. (ತನ್ನ) ಖಡ್ಗವೂ, ಗುರಾಣಿಯೂ ಹೀಗೆ ಕತ್ತರಿಸಲ್ಪಡಲು ಆ ರಾಕ್ಷಸನು ಶಕ್ತ್ಯಾಯುಧವನ್ನು ಎಸೆದನು. (ದೇವಿಯು) ತನಗೆದುರಾಗಿ ಬರುತ್ತಿದ್ದ ಅದನ್ನು ಕೂಡ ಚಕ್ರದಿಂದ ಎರಡಾಗಿ ಸೀಳಿದಳು.

೧೪. ಅನಂತರ ದಾನವ ನಿಶುಂಭನು ಕೋಪದಿಂದ ಉಬ್ಬಿದವನಾಗಿ ಶೂಲವನ್ನು ತೆಗೆದುಕೊಂಡನು. ದೇವಿಯು ಮುಂದುವರಿದು ಬರುತ್ತಿದ್ದ ಅದನ್ನು ಕೂಡ ತನ್ನ ಮುಷ್ಟಿಯ ಗುದ್ದಿನಿಂದಲೇ ಪುಡಿಮಾಡಿದಳು.

೧೫. ಅನಂತರ ಅವನು ಕೂಡ ಗದೆಯನ್ನು ಬೀಸುತ್ತ ಚಂಡಿಕೆಯನ್ನು ಕುರಿತು (ಅದನ್ನು) ಪ್ರಯೋಗಿಸಿದನು. ಆ ಗದೆಯೂ ಕೂಡ ದೇವಿಯ ತ್ರಿಶೂಲದಿಂದ ಕತ್ತರಿಸಲ್ಪಟ್ಟು ಸುಟ್ಟುಹೋಯಿತು.

೧೬. ಆಮೇಲೆ ಕೈಯಲ್ಲಿ ಕೊಡಲಿಯನ್ನು ಹಿಡಿದು ಎದುರಿಸಿ ಬರುತ್ತಿದ್ದ ದೈತ್ಯಶ್ರೇಷ್ಠನನ್ನು ದೇವಿಯು ಶರವರ್ಷದಿಂದ ಹೊಡೆದು ನೆಲಕ್ಕೆ ಬೀಳಿಸಿದಳು.

ತಸ್ಮಿನ್ನಿಪತಿತೇ ಭೂಮೌ ನಿಶುಂಭೇ ಭೀಮವಿಕ್ರಮೇ ।
ಭ್ರಾತರ್ಯತೀವ ಸಂಕ್ರುದ್ಧಃ ಪ್ರಯಯೌ
ಹಂತುಮಂಬಿಕಾಮ್ ॥ ೧೭ ॥

ಸ ರಥಸ್ಥಸ್ತಥಾಽತ್ಯುಚ್ಚೈರ್ಗೃಹೀತಪರಮಾಯುಧೈಃ ।
ಭುಜೈರಷ್ಟಾಭಿರತುಲೈರ್ವ್ಯಾಪ್ಯಾಶೇಷಂ ಬಭೌ ನಭಃ ॥ ೧೮ ॥

ತಮಾಯಾಂತಂ ಸಮಾಲೋಕ್ಯ ದೇವೀ ಶಂಖಮವಾದಯತ್ ।
ಜ್ಯಾಶಬ್ದಂ ಚಾಪಿ ಧನುಷಶ್ಚಕಾರಾತೀವ ದುಸ್ಸಹಮ್ ॥ ೧೯ ॥

ಪೂರಯಾಮಾಸ ಕಕುಭೋ ನಿಜಘಂಟಾಸ್ವನೇನ ಚ ।
ಸಮಸ್ತದೈತ್ಯಸೈನ್ಯಾನಾಂ ತೇಜೋವಧವಿಧಾಯಿನಾ ॥ ೨೦ ॥

ತತಃ ಸಿಂಹೋ ಮಹಾನಾದೈಸ್ತ್ಯಾಜಿತೇಭಮಹಾಮದೈಃ ।
ಪೂರಯಾಮಾಸ ಗಗನಂ ಗಾಂ ತಥೈವ ದಿಶೋ ದಶ ॥ ೨೧ ॥

ತತಃ ಕಾಲೀ ಸಮುತ್ಪತ್ಯ ಗಗನಂ ಕ್ಷ್ಮಾಮತಾಡಯತ್ ।
ಕರಾಭ್ಯಾಂ ತನ್ನಿನಾದೇನ ಪ್ರಾಕ್ಸ್ವನಾಸ್ತೇ ತಿರೋಹಿತಾಃ ॥ ೨೨ ॥

ಅಟ್ಟಾಟ್ಟಹಾಸಮಶಿವಂ ಶಿವದೂತೀ ಚಕಾರ ಹ ।
ತೈಶ್ಶಬ್ದೈರಸುರಾಸ್ತ್ರೇಸುಃ ಶುಂಭಃ ಕೋಪಂ ಪರಂ ಯಯೌ ॥ ೨೩ ॥

ದುರಾತ್ಮಂಸ್ತಿಷ್ಠ ತಿಷ್ಠೇತಿ ವ್ಯಾಜಹಾರಾಂಬಿಕಾ ಯದಾ ।
ತದಾ ಜಯೇತ್ಯಭಿಹಿತಂ ದೇವೈರಾಕಾಶಸಂಸ್ಥಿತೈ : ॥ ೨೪ ॥

ಶುಂಭೇನಾಗತ್ಯ ಯಾ ಶಕ್ತಿರ್ಮುಕ್ತಾ ಜ್ವಾಲಾಽತಿಭೀಷಣಾ ।
ಆಯಾಂತೀ ವಹ್ನಿಕೂಟಾಭಾ ಸಾ ನಿರಸ್ತಾ ಮಹೋಲ್ಕಯಾ ॥ ೨೫ ॥

೧೭. ಭಯಂಕರ ಪರಾಕ್ರಮವುಳ್ಳ ತನ್ನ ಸಹೋದರನಾದ ನಿಶುಂಭನು ಭೂಮಿಯಲ್ಲಿ (ಮೂರ್ಛಿತನಾಗಿ) ಬೀಳಲು (ಶುಂಭಾಸುರನು) ಅತ್ಯಂತ ಕ್ರುದ್ಧನಾಗಿ ಅಂಬಿಕೆಯನ್ನು ಕೊಲ್ಲಲು ಬಂದನು.

೧೮. ಆ ಶುಂಭಾಸುರನು ರಥದಲ್ಲಿದ್ದುಕೊಂಡು, ಶ್ರೇಷ್ಠವಾದ ಆಯುಧಗಳನ್ನು ಉದ್ದವಾಗಿರುವ ಮತ್ತು ಎಣೆಯಿಲ್ಲದ ತನ್ನ ಎಂಟುಬಾಹುಗಳಿಂದ ಧರಿಸಿ, ಆಕಾಶವೆಲ್ಲವನ್ನೂ ವ್ಯಾಪಿಸಿಕೊಂಡು ಪ್ರಕಾಶಿಸುತ್ತಿದ್ದನು!

೧೯. ಹೀಗೆ ಎದುರಿಸಿ ಬರುತ್ತಿದ್ದ ಅವನನ್ನು ನೋಡಿ ದೇವಿಯು ಶಂಖವನ್ನು ಊದಿದಳು; ಮತ್ತು (ಶತ್ರುಗಳಿಗೆ) ಅತ್ಯಂತವಾಗಿ ಸಹಿಸಲಸಾಧ್ಯವಾಗುವಂತೆ ಧನುಸ್ಸಿನ ಹೆದೆಯ ಟಂಕಾರವನ್ನು ಮಾಡಿದಳು.

೨೦. ಹಾಗೆಯೇ ದೈತ್ಯಸೈನ್ಯವೆಲ್ಲವನ್ನೂ ನಿಸ್ತೇಜವನ್ನಾಗಿ ಮಾಡಬಲ್ಲ ತನ್ನ ಘಂಟಾಶಬ್ದದಿಂದ ದಿಕ್ಕುಗಳನ್ನೆಲ್ಲ ತುಂಬಿದಳು.

೨೧. ಈ ನಡುವೆ (ದೇವಿಯ) ಸಿಂಹವೂ (ಕೂಡ) ಆನೆಗಳ ಮಹಾಮದವನ್ನೂ ಹೋಗಲಾಡಿಸಬಲ್ಲ ಮಹಾಗರ್ಜನೆಗಳಿಂದ ಆಕಾಶವನ್ನೂ ಭೂಮಿಯನ್ನೂ ಮತ್ತು ಹತ್ತು ದಿಕ್ಕುಗಳನ್ನೂ ತುಂಬಿಹಾಕಿತು.

೨೨. ಇಷ್ಟರಲ್ಲಿ ಕಾಳಿಯು ಆಕಾಶಕ್ಕೆ ನೆಗೆದು ತನ್ನೆರಡೂ ಕೈಗಳಿಂದ ಭೂಮಿಯನ್ನು ಹೊಡೆದಳು. ಆದರಿಂದುಂಟಾದ ಶಬ್ದದಿಂದ ಹಿಂದಿನ ಶಬ್ದಗಳೆಲ್ಲವೂ ಅಡಗಿಹೋದವು.

೨೩. ಶಿವದೂತಿಯು (ರಾಕ್ಷಸರಿಗೆ) ಅಮಂಗಲಕರವಾದ, ಮಿತಿ ಮೀರಿದ, ಅಟ್ಟಹಾಸವನ್ನು ಮಾಡಿದಳು. ಆ ಶಬ್ದಗಳಿಂದ ರಾಕ್ಷಸರು ನಡುಗಿಹೋದರು. ಶುಂಭನಾದರೋ ಅತ್ಯಂತ ಕೋಪವನ್ನು ಹೊಂದಿದನು.

೨೪. ಅಂಬಿಕೆಯು ಯಾವಾಗ 'ಎಲೈ ದುರಾತ್ಮನೆ ! ನಿಲ್ಲು! ನಿಲ್ಲು!' ಎಂದು ಗರ್ಜಿಸಿ ಹೇಳಿದಳೋ ಆಗ ಆಕಾಶದಲ್ಲಿದ್ದ ದೇವತೆಗಳೆಲ್ಲ ಜಯಕಾರವನ್ನು ಮಾಡಿದರು.

೨೫. ಅತಿಭಯಂಕರವಾದ ಜ್ವಾಲೆಯನ್ನು ಕಾರುತ್ತಿರುವ ಯಾವ ಶಕ್ತ್ಯಾಯುಧವನ್ನು ಶುಂಭನು ಪ್ರಯೋಗಿಸಿದನೋ, ಬೆಂಕಿಯ ಬೆಟ್ಟದಂತೆ ತೋರುತ್ತ ಬರುತ್ತಿದ್ದ ಅದನ್ನು (ಅವಳು) ಮಹೋಲ್ಕವೆಂಬ (ಶಕ್ತಿಯಿಂದ) ನಿವಾರಿಸಿದಳು.

ಸಿಂಹನಾದೇನ ಶುಂಭಸ್ಯ ವ್ಯಾಪ್ತಂ ಲೋಕತ್ರಯಾಂತರಮ್ ।
ನಿರ್ಘಾತನಿಸ್ಸ್ವನೋ ಘೋರೋ ಜಿತವಾನವನೀಪತೇ ॥ ೨೬ ॥

ಶುಂಭಮುಕ್ತಾಂಛರಾನ್ ದೇವೀ ಶುಂಭಸ್ತತ್ಪ್ರಹಿತಾಂಛರಾನ್ ।
ಚಿಚ್ಛೇದ ಸ್ವಶರೈರುಗ್ರೈಃ ಶತಶೋಽಥ ಸಹಸ್ರಶಃ ॥ ೨೭ ॥

ತತಃ ಸಾ ಚಂಡಿಕಾ ಕ್ರುದ್ಧಾ ಶೂಲೇನಾಭಿಜಘಾನ ತಮ್ ।
ಸ ತದಾಽಭಿಹತೋ ಭೂಮೌ ಮೂರ್ಛಿತೋ ನಿಪಪಾತ ಹ ॥ ೨೮ ॥

ತತೋ ನಿಶುಂಭಃ ಸಂಪ್ರಾಪ್ಯ ಚೇತನಾಮಾತ್ತಕಾರ್ಮುಕಃ ।
ಆಜಘಾನ ಶರೈರ್ದೇವೀಂ ಕಾಲೀಂ ಕೇಸರಿಣಂ ತಥಾ ॥ ೨೯ ॥

ಪುನಶ್ಚ ಕೃತ್ವಾ ಬಾಹೂನಾಮಯುತಂ ದನುಜೇಶ್ವರಃ ।
ಚಕ್ರಾಯುತೇನ ದಿತಿಜಶ್ಛಾದಯಾಮಾಸ ಚಂಡಿಕಾಮ್ ॥ ೩೦ ॥

ತತೋ ಭಗವತೀ ಕ್ರುದ್ಧಾ ದುರ್ಗಾ ದುರ್ಗಾರ್ತಿನಾಶಿನೀ ।
ಚಿಚ್ಛೇದ ತಾನಿ ಚಕ್ರಾಣಿ ಸ್ವಶರೈಸ್ಸಾಯಕಾಂಶ್ಚ ತಾನ್ ॥ ೩೧ ॥

ತತೋ ನಿಶುಂಭೋ ವೇಗೇನ ಗದಾಮಾದಾಯ ಚಂಡಿಕಾಮ್ ।
ಅಭ್ಯಧಾವತ ವೈ ಹಂತುಂ ದೈತ್ಯಸೈನ್ಯಸಮಾವೃತಃ ॥ ೩೨ ॥

ತಸ್ಯಾಪತತ ಏವಾಶು ಗದಾಂ ಚಿಚ್ಛೇದ ಚಂಡಿಕಾ ।
ಖಡ್ಗೇನ ಶಿತಧಾರೇಣ ಸ ಚ ಶೂಲಂ ಸಮಾದದೇ ॥ ೩೩ ॥

ಶೂಲಹಸ್ತಂ ಸಮಾಯಾಂತಂ ನಿಶುಂಭಮಮರಾರ್ದನಮ್ ।
ಹೃದಿ ವಿವ್ಯಾಧ ಶೂಲೇನ ವೇಗಾವಿದ್ಧೇನ ಚಂಡಿಕಾ ॥ ೩೪ ॥

೨೬. ಶುಂಭನ ಸಿಂಹನಾದದಿಂದ ಮೂರು ಲೋಕಗಳ ಮಧ್ಯಭಾಗವೆಲ್ಲವೂ ತುಂಬಿಹೋಯಿತು. (ಆದರೆ) ಎಲೈ ರಾಜನೆ, (ದೇವಿಯ) ಭಯಂಕರವಾದ ಸಿಡಿಲಿನಂತಹ ಧ್ವನಿಯು ಆ ಸಿಂಹನಾದವನ್ನೂ ಮೀರಿಸಿತು.

೨೭. ಶುಂಭನು ಬಿಟ್ಟ ಬಾಣಗಳನ್ನು ದೇವಿಯೂ, ದೇವಿಯು ಪ್ರಯೋಗಿಸಿದ ಬಾಣಗಳನ್ನು ಶುಂಭನೂ, ತಮ್ಮ ತಮ್ಮ ಉಗ್ರವಾದ ಬಾಣಗಳಿಂದ ನೂರುಗಟ್ಟಲೆಯಾಗಿಯೂ, ಸಾವಿರಗಟ್ಟಲೆಯಾಗಿಯೂ ಕತ್ತರಿಸಿ ಹಾಕಿದರು.

೨೮. ಅನಂತರ ಆ ಚಂಡಿಕೆಯು ಕೋಪಗೊಂಡು ಅವನನ್ನು ಶೂಲದಿಂದ ಹೊಡೆದಳು. ಹೀಗೆ ಹೊಡೆಯಲ್ಪಟ್ಟ ಅವನು ಆಗಲೇ ಮೂರ್ಛಿತನಾಗಿ ಭೂಮಿಯಲ್ಲಿ ಬಿದ್ದನು.

೨೯. ಆಮೇಲೆ ನಿಶುಂಭನು ಸ್ಮೃತಿಯನ್ನು ಹೊಂದಿ ಬಿಲ್ಲನ್ನು ಧರಿಸಿ ಬಂದು ತನ್ನ ಬಾಣಗಳಿಂದ ದೇವಿಯನ್ನೂ, ಕಾಳಿಯನ್ನೂ ಮತ್ತು ಸಿಂಹವನ್ನೂ ಹೊಡೆದನು.

೩೦. ಪುನಃ ದನುಜನಿಗೆ ಒಡೆಯನಾದ ದಿತಿಯ ವಂಶದಲ್ಲಿ ಹುಟ್ಟಿದ-ನಿಶುಂಭಾಸುರನು (ಮಾಯೆಯಿಂದ) ಹತ್ತುಸಾವಿರ ತೋಳುಗಳುಳ್ಳವನಾಗಿ ಸಾವಿರ ಚಕ್ರಗಳಿಂದ ಚಂಡಿಕಾದೇವಿಯನ್ನು ಮುಚ್ಚಿಹಾಕಿದನು.

೩೧. ಆಗ, ನಿವಾರಿಸಲು ಕಷ್ಟವಾದ ದುಃಖಗಳನ್ನೂ ಪರಿಹರಿಸಬಲ್ಲ ದುರ್ಗಾಭಗವತಿಯು, ಕೋಪಗೊಂಡವಳಾಗಿ ತನ್ನ ಬಾಣಗಳಿಂದ ಆ ಚಕ್ರಗಳೆಲ್ಲವನ್ನೂ ಮತ್ತು ಬಾಣಗಳನ್ನೂ ಕತ್ತರಿಸಿದಳು.

೩೨. ಆಮೇಲೆ ನಿಶುಂಭನು ರಾಕ್ಷಸಸೈನ್ಯದಿಂದ ಕೂಡಿದವನಾಗಿ ಗದೆಯನ್ನು ತೆಗೆದುಕೊಂಡು (ಅವಳನ್ನು) ಹೊಡೆಯಲು ಮುಂದೆ ಬಂದನು.

೩೩. ಅವನು ಮೇಲೆ ಬೀಳುವಷ್ಟರಲ್ಲೇ ಚಂಡಿಕೆಯು ಶೀಘ್ರವಾಗಿ ಆ ಗದೆಯನ್ನು ಹರಿತವಾದ ಖಡ್ಗದಿಂದ ಕತ್ತರಿಸಿದಳು. ಅನಂತರ ಅವನು ಶೂಲವನ್ನು ತೆಗೆದುಕೊಂಡನು.

೩೪. ದೇವತೆಗಳನ್ನು ಪೀಡಿಸುವ, ಶೂಲವನ್ನು ಕೈಯಲ್ಲಿ ಧರಿಸಿ ಮುಂಬರುತ್ತಿರುವ, ನಿಶುಂಭನನ್ನು ಚಂಡಿಕೆಯು ವೇಗಯುಕ್ತವಾದ ತ್ರಿಶೂಲದಿಂದ ಎದೆಯಲ್ಲಿ ಇರಿದಳು.

ಭಿನ್ನಸ್ಯ ತಸ್ಯ ಶೂಲೇನ ಹೃದಯಾನ್ನಿಸ್ಸೃತೋಽಪರಃ ।
ಮಹಾಬಲೋ ಮಹಾವೀರ್ಯಸ್ತಿಷ್ಠೇತಿ ಪುರುಷೋ ವದನ್ ॥ ೩೫ ॥

ತಸ್ಯ ನಿಷ್ಕ್ರಾಮತೋ ದೇವೀ ಪ್ರಹಸ್ಯ ಸ್ವನವತ್ತತಃ ।
ಶಿರಶ್ಚಿಚ್ಛೇದ ಖಡ್ಗೇನ ತತೋಽಸಾವಪತದ್ಭುವಿ ॥ ೩೬ ॥

ತತಃ ಸಿಂಹಶ್ಚಖಾದೋಗ್ರದಂಷ್ಟ್ರಾಕ್ಷುಣ್ಣಶಿರೋಧರಾನ್ ।
ಅಸುರಾಂಸ್ತಾಂಸ್ತಥಾ ಕಾಲೀ ಶಿವದೂತೀ ತಥಾಽಪರಾನ್ ॥ ೩೭ ॥

ಕೌಮಾರೀಶಕ್ತಿನಿರ್ಭಿನ್ನಾಃ ಕೇಚಿನ್ನೇಶುರ್ಮಹಾಽಸುರಾಃ ।
ಬ್ರಹ್ಮಾಣೀಮಂತ್ರಪೂತೇನ ತೋಯೇನಾನ್ಯೇ ನಿರಾಕೃತಾಃ ॥ ೩೮ ॥

ಮಾಹೇಶ್ವರೀತ್ರಿಶೂಲೇನ ಭಿನ್ನಾಃ ಪೇತುಸ್ತಥಾಽಪರೇ ।
ವಾರಾಹೀತುಂಡಘಾತೇನ ಕೇಚಿಚ್ಚೂರ್ಣೀಕೃತಾ ಭುವಿ ॥ ೩೯ ॥

ಖಂಡಂ ಖಂಡಂ ಚ ಚಕ್ರೇಣ ವೈಷ್ಣವ್ಯಾ ದಾನವಾಃ ಕೃತಾಃ ।
ವಜ್ರೇಣ ಚೈಂದ್ರೀಹಸ್ತಾಗ್ರಮುಕ್ತೇನ ಚ ತಥಾಪರೇ ॥ ೪೦ ॥

ಕೇಚಿದ್ವಿನೇಶುರಸುರಾಃ ಕೇಚಿನ್ನಷ್ಟಾ ಮಹಾಽಽಹವಾತ್ ।
ಭಕ್ಷಿತಾಶ್ಚಾಪರೇ ಕಾಲೀಶಿವದೂತೀಮೃಗಾಧಿಪೈಃ ॥ ೪೧ ॥

ಇತಿ ಶ್ರೀಮಾರ್ಕಂಡೇಯಪುರಾಣೇ ಸಾವರ್ಣಿಕೇ ಮನ್ವಂತರೇ ದೇವೀಮಾಹಾತ್ಮ್ಯೇ
ನಿಶುಂಭವಧೋ ನಾಮ ನವಮೋಽಧ್ಯಾಯಃ

೩೫. ಶೂಲದಿಂದ ಇರಿಯಲ್ಪಟ್ಟ ಆವನ ಎದೆಯಿಂದ ಮಹಾಬಲ ವಂತನೂ ಪರಾಕ್ರಮಶಾಲಿಯೂ ಆದ ಮತ್ತೊಬ್ಬ ಪುರುಷನು 'ನಿಲ್ಲು!' ಎಂದು ಹೇಳುತ್ತಾ ಹೊರಬಂದನು.

೩೬. ಆನಂತರ ದೇವಿಯು ನಗುತ್ತ ಆವನು ಹೊರಬರುತ್ತಿದ್ದಂತೆಯೇ ಆವನ ಶಿರಸ್ಸನ್ನು ಕತ್ತಿಯಿಂದ ಕತ್ತರಿಸಿದಳು. ಆಗ ಆವನು ನೆಲದಲ್ಲಿ ಬಿದ್ದನು.

೩೭. ಆಮೇಲೆ (ದೇವಿಯ ವಾಹನವಾದ) ಸಿಂಹವು ತನ್ನ ಕೋರೆ ದಾಡೆಗಳಿಂದ ಆಸುರರ ಕತ್ತುಗಳನ್ನು ಕಡಿದು ತಿನ್ನಲಾರಂಭಿಸಿತು. ಹಾಗೆಯೇ ಕಾಳಿಯು ಕೆಲವರನ್ನೂ, ಶಿವದೂತಿಯು ಇನ್ನು ಕೆಲವರನ್ನೂ (ತಿಂದರು).

೩೮. ಕೆಲವರು ಮಹಾರಾಕ್ಷಸರು ಕೌಮಾರೀಶಕ್ತಿಯಿಂದ ಹೊಡೆಯಲ್ಪಟ್ಟು ಸತ್ತರು. ಬ್ರಹ್ಮಾಣಿಯು ಪ್ರಯೋಗಿಸಿದ ಮಂತ್ರಪೂತಜಲದಿಂದ ಇತರರು ನಿವಾರಿಸಲ್ಪಟ್ಟರು.

೩೯. ಕೆಲವರು ಮಾಹೇಶ್ವರಿಯ ತ್ರಿಶೂಲದಿಂದ ತುಂಡಾಗಿ ಬಿದ್ದರು. ಹಾಗಯೇ ಮತ್ತೆ ಕೆಲವರು ವಾರಾಹಿಯ ಮುಸುಡಿಯ ಏಟಿನಿಂದ ಪುಡಿಯಾಗಿ ಭೂಮಿಯಲ್ಲಿ ಬಿದ್ದರು.

೪೦. (ಕೆಲವರು) ದಾನವರು ವೈಷ್ಣವಿಯ ಚಕ್ರದಿಂದ ತುಂಡು ತುಂಡಾಗಿ ಮಾಡಲ್ಪಟ್ಟರು. ಹಾಗೆಯೇ ಇತರರು ಐಂದ್ರಿಯ ಕೈಯಿಂದ ಬಿಟ್ಟ ವಜ್ರಾಯುಧದಿಂದ (ತುಂಡಾಗಿ ಸತ್ತರು).

೪೧. ಕೆಲವರು ರಾಕ್ಷಸರು ನಾಶವಾದರು. ಆ ಮಹಾಯುದ್ಧದಿಂದ (ಓಡಿ) ಕೆಲವರು ಕಣ್ಮರೆಯಾದರು. ಇತರರು ಕಾಳೀ, ಶಿವದೂತೀ, ಸಿಂಹ – ಇವರಿಂದ ತಿಂದುಹಾಕಲ್ಪಟ್ಟರು.

ಹೀಗೆ ಸಾವರ್ಣಿಕಮನ್ವಂತರಕ್ಕೆ ಸೇರಿದ ಮಾರ್ಕಂಡೇಯಪುರಾಣದ ದೇವೀಮಾಹಾತ್ಮ್ಯೆಯಲ್ಲಿ 'ನಿಶುಂಭವಧೆ' ಎಂಬ ಒಂಭತ್ತನೆಯ ಅಧ್ಯಾಯವು ಮುಗಿಯಿತು.

# ದಶಮೋಽಧ್ಯಾಯಃ

## ಶುಂಭವಧಃ

### ಧ್ಯಾನಮ್

ಓಮ್ । ಉತ್ತಪ್ತಹೇಮರುಚಿರಾಂ ರವಿಚಂದ್ರವಹ್ನಿನೇತ್ರಾಂ ಧನು ಶ್ಶರಯುತಾಂಕುಶಪಾಶಶೂಲಮ್ । ರಮ್ಯೈರ್ಭುಜೈಶ್ಚ ದಧತೀಂ ಶಿವಶಕ್ತಿರೂಪಾಂ ಕಾಮೇಶ್ವರೀಂ ಹೃದಿ ಭಜಾಮಿ ಧೃತೇಂದುಲೇಖಾಮ್ ॥

ಋಷಿರುವಾಚ ॥ ೧ ॥

ನಿಶುಂಭಂ ನಿಹತಂ ದೃಷ್ಟ್ವಾ ಭ್ರಾತರಂ ಪ್ರಾಣಸಮ್ಮಿತಮ್ ।
ಹನ್ಯಮಾನಂ ಬಲಂ ಚೈವ ಶುಂಭಃ ಕ್ರುದ್ಧೋಽಬ್ರವೀದ್ವಚಃ ॥ ೨ ॥

ಬಲಾವಲೇಪದುಷ್ಟೇ ತ್ವಂ ಮಾ ದುರ್ಗೇ ಗರ್ವಮಾವಹ ।
ಅನ್ಯಾಸಾಂ ಬಲಮಾಶ್ರಿತ್ಯ ಯುದ್ಧ್ಯಸೇ ಚಾತಿಮಾನಿನೀ ॥ ೩ ॥

ದೇವ್ಯುವಾಚ ॥ ೪ ॥

ಏಕೈವಾಹಂ ಜಗತ್ಯತ್ರ ದ್ವಿತೀಯಾ ಕಾ ಮಮಾಪರಾ ।
ಪಶ್ಯೈತಾ ದುಷ್ಟ ಮಯ್ಯೇವ ವಿಶಂತ್ಯೋ ಮದ್ವಿಭೂತಯಃ ॥ ೫ ॥

ತತಸ್ಸಮಸ್ತಾಸ್ತಾ ದೇವ್ಯೋ ಬ್ರಹ್ಮಾಣೀಪ್ರಮುಖಾ ಲಯಮ್ ।
ತಸ್ಯಾ ದೇವ್ಯಾಸ್ತನೌ ಜಗ್ಮುರೇಕೈವಾಸೀತ್ತದಾಽಂಬಿಕಾ ॥ ೬ ॥

ದೇವ್ಯುವಾಚ ॥ ೭ ॥

ಅಹಂ ವಿಭೂತ್ಯಾ ಬಹುಭಿರಿಹ ರೂಪೈರ್ಯದಾ ಸ್ಥಿತಾ ।
ತತ್ಸಂಹೃತಂ ಮಯೈಕೈವ ತಿಷ್ಠಾಮ್ಯಾಜೌ ಸ್ಥಿರೋ ಭವ ॥ ೮ ॥

ಋಷಿರುವಾಚ ॥ ೯ ॥

ತತಃ ಪ್ರವವೃತೇ ಯುದ್ಧಂ ದೇವ್ಯಾಃ ಶುಂಭಸ್ಯ ಚೋಭಯೋಃ ।
ಪಶ್ಯತಾಂ ಸರ್ವದೇವಾನಾಮಸುರಾಣಾಂ ಚ ದಾರುಣಮ್ ॥ ೧೦ ॥

# ಹತ್ತನೆಯ ಅಧ್ಯಾಯ

## ಶುಂಭವಧೆ

### ಧ್ಯಾನ

ಚೆನ್ನಾಗಿ ಸುಡಲ್ಪಟ್ಟ ಚಿನ್ನದ ಕಾಂತಿಯಂತಹ ಕಾಂತಿಯನ್ನುಳ್ಳ, ಸೂರ್ಯ-ಚಂದ್ರ-ಅಗ್ನಿಗಳನ್ನೇ ಕಣ್ಣುಗಳನ್ನಾಗಿ ಹೊಂದಿರುವ, ಧನುಸ್ಸು ,ಬಾಣ, ಅಂಕುಶ, ಪಾಶ, ಶೂಲ – ಇವುಗಳನ್ನು ರಮ್ಯವಾದ ಭುಜಗಳಿಂದ ಧರಿಸಿರುವ, ಶಿವಶಕ್ತಿಯ ರೂಪಳಾದ, ಚಂದ್ರಕಲೆಯನ್ನು (ಮಸ್ತಕದಲ್ಲಿ) ಧರಿಸಿರುವ ಕಾಮೇಶ್ವರಿಯನ್ನು ಹೃದಯದಲ್ಲಿ ಸೇವಿಸುತ್ತೇನೆ.

೧-೨. ಸುಮೇಧ ಋಷಿಯು ಇಂತೆಂದನು: ತನ್ನ ಪ್ರಾಣಕ್ಕೆ ಸಮನಾಗಿದ್ದ ಸೋದರನಾದ ನಿಶುಂಭನು ಸತ್ತದ್ದನ್ನೂ, ಸೈನ್ಯವು ಕೊಲ್ಲಲ್ಪಟ್ಟದ್ದನ್ನೂ ನೋಡಿ ಶುಂಭನು ಕೋಪಗೊಂಡು ಈ ಮಾತನ್ನು ಹೇಳಿದನು:

೩. 'ಬಲದಿಂದ ಮದಿಸಿರುವ ದುಷ್ಟೆಯಾದ ದುರ್ಗೆಯೇ! ಗರ್ವವನ್ನು ಹೊಂದದಿರು! ನೀನು ಅತಿಯಾದ ಅಭಿಮಾನವುಳ್ಳವಳು! (ಆದರೂ) ಇತರರ ಬಲವನ್ನಾಶ್ರಯಿಸಿ ಯುದ್ಧಮಾಡುತ್ತಿರುವೆ!'

೪-೫. ದೇವಿಯು ಉತ್ತರವಿತ್ತಳು: 'ಈ ಜಗತ್ತಿನಲ್ಲಿ ನಾನೊಬ್ಬಳೇ ಇರುತ್ತೇನೆ; ನನಗೆ ಎರಡನೆಯದಾಗಿ ಯಾರಿದ್ದಾರೆ? ಎಲೈ ದುಷ್ಟನೆ! ನನ್ನ ಈ ಮಹಿಮಾಶಕ್ತಿಗಳೆಲ್ಲವೂ ನನ್ನಲ್ಲಿಯೇ ಪ್ರವೇಶಿಸುವುದನ್ನು ನೋಡು!'

೬. ಅನಂತರ ಬ್ರಹ್ಮಾಣಿಯೇ ಮೊದಲಾದ ಆ ದೇವಿಯರೆಲ್ಲರೂ ದೇವೀಶರೀರವನ್ನು ಪ್ರವೇಶಿಸಿಬಿಟ್ಟರು. ಆಗ ಅಂಬಿಕೆಯೊಬ್ಬಳೇ ಉಳಿದಳು.

೭-೮. ದೇವಿಯಿಂತೆಂದಳು: 'ನಾನು ನನ್ನ ಮಹಿಮೆಯಿಂದ ಅನೇಕ ರೂಪಗಳಿಂದ ತೋರುತ್ತಿದ್ದೆನು. (ಈಗ) ಅವು ನನ್ನಿಂದಲೇ ಉಪಸಂಹರಿಸಲ್ಪಟ್ಟಿವೆ. ಏಕೈಕಳಾಗಿಯೇ ನಿಂತಿರುತ್ತೇನೆ. ಯುದ್ಧದಲ್ಲಿ ಸ್ಥಿರನಾಗು!'

೯-೧೦. ಸುಮೇಧ ಋಷಿಯು ಹೇಳಿದನು: ಅನಂತರ ಎಲ್ಲ ದೇವತೆಗಳೂ ರಾಕ್ಷಸರೂ ನೋಡುತ್ತಿದ್ದಂತೆಯೇ ದೇವಿಗೂ ಶುಂಭನಿಗೂ ಭಯಂಕರವಾದ ಯುದ್ಧವು ಪ್ರಾರಂಭವಾಯಿತು.

ಶರವರ್ಷೈಃ ಶಿತೈಃ ಶಸ್ತ್ರೈಸ್ತಥಾಸ್ತ್ರೈಶ್ಚೈವ ದಾರುಣೈಃ ।
ತಯೋರ್ಯುದ್ಧಮಭೂದ್ಭೂಯಃ ಸರ್ವಲೋಕಭಯಂಕರಮ್ ॥ ೧೧ ॥

ದಿವ್ಯಾನ್ಯಸ್ತ್ರಾಣಿ ಶತಶೋ ಮುಮುಚೇ ಯಾನ್ಯಥಾಽಂಬಿಕಾ ।
ಬಭಂಜ ತಾನಿ ದೈತ್ಯೇಂದ್ರಸ್ತತ್ಪ್ರತೀಘಾತಕರ್ತೃಭಿಃ ॥ ೧೨ ॥

ಮುಕ್ತಾನಿ ತೇನ ಚಾಸ್ತ್ರಾಣಿ ದಿವ್ಯಾನಿ ಪರಮೇಶ್ವರೀ ।
ಬಭಂಜ ಲೀಲಯೈವೋಗ್ರಹುಂಕಾರೋಚ್ಚಾರಣಾದಿಭಿಃ ॥ ೧೩ ॥

ತತಃ ಶರಶತೈರ್ದೇವೀಮಾಚ್ಛಾದಯತ ಸೋಽಸುರಃ ।
ಸಾಽಪಿ ತತ್ಕುಪಿತಾ ದೇವೀ ಧನುಶ್ಚಿಚ್ಛೇದ ಚೇಷುಭಿಃ ॥ ೧೪ ॥

ಛಿನ್ನೇ ಧನುಷಿ ದೈತ್ಯೇಂದ್ರಸ್ತಥಾ ಶಕ್ತಿಮಥಾದದೇ ।
ಚಿಚ್ಛೇದ ದೇವೀ ಚಕ್ರೇಣ ತಾಮಪ್ಯಸ್ಯ ಕರೇ ಸ್ಥಿತಾಮ್ ॥ ೧೫ ॥

ತತಃ ಖಡ್ಗಮುಪಾದಾಯ ಶತಚಂದ್ರಂ ಚ ಭಾನುಮತ್ ।
ಅಭ್ಯಧಾವತ ತಾಂ ದೇವೀಂ ದೈತ್ಯಾನಾಮಧಿಪೇಶ್ವರಃ ॥ ೧೬ ॥

ತಸ್ಯಾಪತತ ಏವಾಶು ಖಡ್ಗಂ ಚಿಚ್ಛೇದ ಚಂಡಿಕಾ ।
ಧನುರ್ಮುಕ್ತೈಃ ಶಿತೈರ್ಬಾಣೈಶ್ಚರ್ಮ ಚಾರ್ಕಕರಾಮಲಮ್ ॥ ೧೭ ॥

ಅಶ್ವಾಂಶ್ಚ ಪಾತಯಾಮಾಸ ರಥಂ ಸಾರಥಿನಾ ಸಹ ।
ಹತಾಶ್ವಃ ಸ ತದಾ ದೈತ್ಯಶ್ಛಿನ್ನಧನ್ವಾ ವಿಸಾರಥಿಃ ।
ಜಗ್ರಾಹ ಮುದ್ಗರಂ ಘೋರಮಂಬಿಕಾನಿಧನೋದ್ಯತಃ ॥ ೧೮ ॥

೧೧. ಅವರಿಬ್ಬರ ನಡುವೆ ಪುನಃ ಪುನಃ ಆಗುತ್ತಿದ್ದ ಯುದ್ಧವು ಹರಿತವಾದ ಬಾಣಗಳ ಮಳೆಯಿಂದಲೂ, ದಾರುಣವಾದ ಅಸ್ತ್ರಗಳಿಂದಲೂ ಕೂಡಿ ಸರ್ವಲೋಕಗಳಿಗೂ ಭಯವನ್ನು ಹುಟ್ಟಿಸುತ್ತಿತ್ತು.

೧೨. ಅಂಬಿಕೆಯು ಯಾವ ಯಾವ ಉತ್ತಮಾಸ್ತ್ರಗಳನ್ನು ನೂರುಗಟ್ಟಲೆ ಪ್ರಯೋಗಿಸಿದಳೋ, ಅವುಗಳೆಲ್ಲವನ್ನೂ ಪ್ರತ್ಯಸ್ತ್ರಗಳಿಂದ ದೈತ್ಯೇಂದ್ರನು ನಾಶಮಾಡಿದನು.

೧೩. ಅವನಿಂದ ಯಾವ ದಿವ್ಯಾಸ್ತ್ರಗಳು ಪ್ರಯೋಗಿಸಲ್ಪಟ್ಟವೋ ಪರಮೇಶ್ವರಿಯು ಅವೆಲ್ಲವನ್ನೂ ಲೀಲೆಯಿಂದಲೇ ಉಗ್ರವಾದ ಹುಂಕಾರವನ್ನುಚ್ಚರಿಸುವುದರ ಮೂಲಕ ನಾಶಪಡಿಸಿದಳು.

೧೪. ಅನಂತರ ಆ ರಾಕ್ಷಸನು ದೇವಿಯನ್ನು ನೂರುಬಾಣಗಳಿಂದ ಮುಚ್ಚಿಹಾಕಿದನು. ಆದರಿಂದ ಕುಪಿತಳಾದ ಆ ದೇವಿಯೂ ಕೂಡ ಬಾಣಗಳಿಂದ (ಅವನ) ಧನುಸ್ಸನ್ನು ಕತ್ತರಿಸಿಹಾಕಿದಳು.

೧೫. (ಹೀಗೆ) ಧನುಸ್ಸು ಕತ್ತರಿಸಲ್ಪಡಲು ದೈತ್ಯರಾಜನು ಶಕ್ತಿಯನ್ನು (ಕೈಗೆ) ತೆಗೆದುಕೊಂಡನು. ಅವನ ಕೈಯಲ್ಲಿ ಅದಿರುವಾಗಲೇ ದೇವಿಯು ಚಕ್ರಾಯುಧದಿಂದ ಅದನ್ನೂ ಕತ್ತರಿಸಿದಳು.

೧೬. ಅನಂತರ ಖಡ್ಗವನ್ನೂ, ನೂರು ಚಂದ್ರರ ಚಿತ್ರಗಳಿಂದ ಹೊಳೆಯುತ್ತಿದ್ದ ಗುರಾಣಿಯನ್ನೂ ತೆಗೆದುಕೊಂಡು ದೈತ್ಯರ ಅಧಿಪತಿಗಳಿಗೆ ಒಡೆಯನಾದ (ಆ ಶುಂಭನು) ದೇವಿಯ ಬಳಿಗೆ ಮುನ್ನುಗ್ಗಿದನು.

೧೭. ಅವನು ಮೇಲೆ ಬೀಳುತ್ತಿರುವಂತೆಯೇ ಚಂಡಿಕೆಯು ಶೀಘ್ರ ವಾಗಿ ಧನುಸ್ಸಿನಿಂದ ಬಿಡಲ್ಪಟ್ಟ ಹರಿತವಾದ ಬಾಣಗಳಿಂದ, ಖಡ್ಗವನ್ನೂ, ಸೂರ್ಯಕಿರಣದಂತೆ ಬೆಳಗುತ್ತಿದ್ದ ಗುರಾಣಿಯನ್ನೂ ಕತ್ತರಿಸಿಹಾಕಿದಳು.

೧೮. ಮತ್ತು (ಅವಳು ಅವನ) ಅಶ್ವಗಳನ್ನೂ, ಸಾರಥಿಯೊಂದಿಗೇ ರಥವನ್ನೂ (ಹೊಡೆದು) ಬೀಳಿಸಿದಳು. ಆಗ ಕುದುರೆ-ಬಿಲ್ಲು-ಸಾರಥಿಗಳನ್ನು ಕಳೆದುಕೊಂಡ ಆ ರಾಕ್ಷಸನು ಅಂಬಿಕೆಯನ್ನು ಕೊಲ್ಲಲುದ್ಯುಕ್ತನಾಗಿ ಘೋರವಾದ ಮುದ್ಗರವನ್ನು ತೆಗೆದುಕೊಂಡನು.

ಚಿಚ್ಛೇದಾಪತತಸ್ತಸ್ಯ ಮುದ್ಗರಂ ನಿಶಿತೈಶ್ಶರೈಃ ।
ತಥಾಽಪಿ ಸೋಽಭ್ಯಧಾವತ್ತಾಂ ಮುಷ್ಟಿಮುದ್ಯಮ್ಯ ವೇಗವಾನ್ ॥ ೧೯ ॥

ಸ ಮುಷ್ಟಿಂ ಪಾತಯಾಮಾಸ ಹೃದಯೇ ದೈತ್ಯಪುಂಗವಃ ।
ದೇವ್ಯಾಸ್ತಂ ಚಾಪಿ ಸಾ ದೇವೀ ತಲೇನೋರಸ್ಯತಾಡಯತ್ ॥ ೨೦ ॥

ತಲಪ್ರಹಾರಾಭಿಹತೋ ನಿಪಪಾತ ಮಹೀತಲೇ ।
ಸ ದೈತ್ಯರಾಜಸ್ಸಹಸಾ ಪುನರೇವ ತಥೋತ್ಥಿತಃ ॥ ೨೧ ॥

ಉತ್ಪತ್ಯ ಚ ಪ್ರಗೃಹ್ಯೋಚ್ಚೈರ್ದೇವೀಂ ಗಗನಮಾಸ್ಥಿತಃ ।
ತತ್ರಾಪಿ ಸಾ ನಿರಾಧಾರಾ ಯುಯುಧೇ ತೇನ ಚಂಡಿಕಾ ॥ ೨೨ ॥

ನಿಯುದ್ಧಂ ಖೇ ತದಾ ದೈತ್ಯಶ್ಚಂಡಿಕಾ ಚ ಪರಸ್ಪರಮ್ ।
ಚಕ್ರತುಃ ಪ್ರಥಮಂ ಸಿದ್ಧಮುನಿವಿಸ್ಮಯಕಾರಕಮ್ ॥ ೨೩ ॥

ತತೋ ನಿಯುದ್ಧಂ ಸುಚಿರಂ ಕೃತ್ವಾ ತೇನಾಂಬಿಕಾ ಸಹ ।
ಉತ್ಪಾಟ್ಯ ಭ್ರಾಮಯಾಮಾಸ ಚಿಕ್ಷೇಪ ಧರಣೀತಲೇ ॥ ೨೪ ॥

ಸ ಕ್ಷಿಪ್ತೋ ಧರಣೀಂ ಪ್ರಾಪ್ಯ ಮುಷ್ಟಿಮುದ್ಯಮ್ಯ ವೇಗತಃ ।
ಅಭ್ಯಧಾವತ ದುಷ್ಟಾತ್ಮಾ ಚಂಡಿಕಾನಿಧನೇಚ್ಛಯಾ ॥ ೨೫ ॥

ತಮಾಯಾಂತಂ ತತೋ ದೇವೀ ಸರ್ವದೈತ್ಯಜನೇಶ್ವರಮ್ ।
ಜಗತ್ಯಾಂ ಪಾತಯಾಮಾಸ ಭಿತ್ವಾ ಶೂಲೇನ ವಕ್ಷಸಿ ॥ ೨೬ ॥

ಸ ಗತಾಸುಃ ಪಪಾತೋರ್ವ್ಯಾಂ ದೇವೀಶೂಲಾಗ್ರವಿಕ್ಷತಃ ।
ಚಾಲಯನ್ ಸಕಲಾಂ ಪೃಥ್ವೀಂ ಸಾಬ್ಧಿದ್ವೀಪಾಂ ಸಪರ್ವತಾಮ್ ॥ ೨೭ ॥

೧೯. ಅವನು ಮುನ್ನುಗ್ಗುತ್ತಿರುವಷ್ಟರಲ್ಲಿಯೇ ಹರಿತವಾದ ಬಾಣಗಳಿಂದ (ದೇವಿಯು) ಅವನ ಮುದ್ಗರವನ್ನು ಕತ್ತರಿಸಿಹಾಕಿದಳು. ಹಾಗಾದರೂ ಅವನು ವೇಗದಿಂದ ಕೂಡಿ ಮುಷ್ಟಿಯನ್ನೆತ್ತಿ ಅವಳ ಕಡೆಗೆ ನುಗ್ಗಿ ಬಂದನು.

೨೦. ಆ ದೈತ್ಯಶ್ರೇಷ್ಠನು ದೇವಿಯ ಹೃದಯಕ್ಕೆ ಮುಷ್ಟಿಯಿಂದ ಗುದ್ದಿದನು. ಆ ದೇವಿಯೂ ಕೂಡ ಅವನ ಎದೆಗೆ ಕೈಯಿಂದ ಹೊಡೆದಳು.

೨೧. ಆ ದೈತ್ಯರಾಜನು (ದೇವಿಯ) ಕರತಲಾಭಿಘಾತದಿಂದ ಭೂಮಿಯಲ್ಲಿ ಬಿದ್ದನು. ಪುನಃ ಕೂಡಲೇ ಮೇಲಕ್ಕೆದ್ದನು.

೨೨. (ಅವನು) ಮೇಲಕ್ಕೆದ್ದು ದೇವಿಯನ್ನು ಹಿಡಿದುಕೊಂಡೇ ಮೇಲಕ್ಕೆ ಹಾರಿ ಆಕಾಶವನ್ನೇರಿದನು. ಅಲ್ಲಿಯೂ ಆ ಚಂಡಿಕೆಯು ಯಾವ ಆಧಾರವೂ ಇಲ್ಲದಿದ್ದರೂ ಅವನೊಡನೆ ಯುದ್ಧ ಮಾಡಿದಳು.

೨೩. ಆಗ ಆಕಾಶದಲ್ಲಿ ದೈತ್ಯನಾದ ಶುಂಭನೂ, ಚಂಡಿಕೆಯೂ ಪರಸ್ಪರ ಅಪೂರ್ವವಾದ ಯುದ್ಧವನ್ನು ಮಾಡಿದರು. (ಇದು) ಸಿದ್ಧರಿಗೂ, ಮುನಿಗಳಿಗೂ ವಿಸ್ಮಯವನ್ನುಂಟುಮಾಡುವಂತಿತ್ತು.

೨೪. ಅನಂತರ ಅಂಬಿಕೆಯು ಅವನೊಂದಿಗೆ ಬಹುಕಾಲ ಯುದ್ಧವನ್ನು ಮಾಡಿ ಅವನನ್ನು ಮೇಲಕ್ಕೆತ್ತಿ ಗಿರ್ರನೆ ತಿರುಗಿಸಿ ಭೂತಲಕ್ಕೆಸೆದುಬಿಟ್ಟಳು.

೨೫. ಹೀಗೆ ಎಸೆಯಲ್ಪಟ್ಟ ಆ ದುರಾತ್ಮನು ನೆಲಕ್ಕೆ ಬಿದ್ದ ಕೂಡಲೇ ಕೈಮುಷ್ಟಿಯನ್ನೆತ್ತಿ ಚಂಡಿಕೆಯನ್ನು ಕೊಲ್ಲುವ ಇಚ್ಛೆಯಿಂದ ವೇಗವಾಗಿ ಓಡಿಬಂದನು.

೨೬. ಆಮೇಲೆ (ಹೀಗೆ) ನುಗ್ಗಿ ಬರುತ್ತಿದ್ದ, ಸಕಲ ರಾಕ್ಷಸರಿಗೂ ಒಡೆಯನಾದ, ಶುಂಭನನ್ನು ದೇವಿಯು ಶೂಲದಿಂದ ಎದೆಯಲ್ಲಿ ಚುಚ್ಚಿ ಭೂಮಿಯಲ್ಲಿ ಬೀಳಿಸಿದಳು.

೨೭. ಚಂಡಿಕಾದೇವಿಯ ಶೂಲಾಗ್ರದಿಂದ ತಿವಿಯಲ್ಪಟ್ಟ ಅವನು ಗತಪ್ರಾಣನಾಗಿ, ಸಮುದ್ರಗಳು, ದ್ವೀಪಗಳು, ಪರ್ವತಗಳು—ಇವುಗಳಿಂದ ಕೂಡಿರುವ ಇಡೀ ಭೂಮಂಡಲವನ್ನೇ ಅಲ್ಲಾಡಿಸುತ್ತ ಭೂಮಿಯಲ್ಲಿ ಬಿದ್ದನು.

ತತಃ ಪ್ರಸನ್ನಮಖಿಲಂ ಹತೇ ತಸ್ಮಿನ್ ದುರಾತ್ಮನಿ ।
ಜಗತ್ ಸ್ವಾಸ್ಥ್ಯಮತೀವಾಪ ನಿರ್ಮಲಂ ಚಾಭವನ್ನಭಃ ॥ ೨೮ ॥

ಉತ್ಪಾತಮೇಘಾಸ್ಸೋಲ್ಕಾ ಯೇ ಪ್ರಾಗಾಸಂಸ್ತೇ ಶಮಂ ಯಯುಃ ।
ಸರಿತೋ ಮಾರ್ಗವಾಹಿನ್ಯಸ್ತಥಾಸಂಸ್ತತ್ರ ಪಾತಿತೇ ॥ ೨೯ ॥

ತತೋ ದೇವಗಣಾಸ್ಸರ್ವೇ ಹರ್ಷನಿರ್ಭರಮಾನಸಾಃ ।
ಬಭೂವುರ್ನಿಹತೇ ತಸ್ಮಿನ್ ಗಂಧರ್ವಾ ಲಲಿತಂ ಜಗುಃ ॥ ೩೦ ॥

ಅವಾದಯಂಸ್ತಥೈವಾನ್ಯೇ ನನೃತುಶ್ಚಾಪ್ಸರೋಗಣಾಃ ।
ವವುಃ ಪುಣ್ಯಾಸ್ತಥಾ ವಾತಾಸ್ಸುಪ್ರಭೋಽಭೂದ್ದಿವಾಕರಃ ॥ ೩೧ ॥

ಜಜ್ವಲುಶ್ಚಾಗ್ನಯಶ್ಶಾಂತಾಶ್ಶಾಂತಾ ದಿಗ್ಜನಿತಸ್ವನಾಃ ॥ ೩೨ ॥

ಇತಿ ಶ್ರೀಮಾರ್ಕಂಡೇಯಪುರಾಣೇ ಸಾವರ್ಣಿಕೇ ಮನ್ವಂತರೇ ದೇವೀಮಹಾತ್ಮ್ಯೇ
ಶುಂಭವಧೋ ನಾಮ ದಶಮೋಽಧ್ಯಾಯಃ ॥

೨೮. ಆಗ ಆ ದುರಾತ್ಮನು ಹೀಗೆ ಸಾಯಲಾಗಿ, ಸಮಸ್ತವೂ ಶಾಂತಿಯನ್ನು ಹೊಂದಿತು. ಜಗತ್ತು ಅತ್ಯಂತ ಸ್ವಾಸ್ಥ್ಯವನ್ನು ಹೊಂದಿತು. ಆಕಾಶವು ನಿರ್ಮಲವಾಯಿತು.

೨೯. ಉಲ್ಕಾಸಹಿತವಾದ, ವಿಪತ್ತನ್ನು ಸೂಚಿಸುವ ಯಾವ ಮೋಡಗಳು ಮೊದಲು ಉಂಟಾಗಿದ್ದವೋ ಅವು-ಶುಂಭನು ಬೀಳಲಾಗಿ-ಶಾಂತವಾದುವು. ಹಾಗೆಯೇ (ಮೇರೆಮೀರಿ ಹರಿಯುತ್ತಿದ್ದ) ನದಿಗಳು ಕೂಡ ತಮ್ಮ ಮಾರ್ಗಗಳಲ್ಲಿ (ಮುಂಚಿನಂತೆಯೇ ಹರಿಯತೊಡಗಿದವು).

೩೦. ಆ ಶುಂಭನು ಸತ್ತಮೇಲೆ ದೇವತಾಗಣಗಳೆಲ್ಲವೂ ಹರ್ಷದಿಂದ ತುಂಬಿದ ಮನಸ್ಸುಳ್ಳವುಗಳಾದವು. ಗಂಧರ್ವರು ಮಧುರವಾಗಿ ಗಾಯನ ಮಾಡಿದರು.

೩೧. ಹಾಗೆಯೇ (ಕಿನ್ನರಾದಿ) ಇತರರು (ವಾದ್ಯಗಳನ್ನು) ನುಡಿಸಿದರು. ಅಪ್ಸರಗಣಗಳು ನಾಟ್ಯವಾಡಿದರು. ಗಾಳಿಗಳು ಪುಣ್ಯಕರವಾಗಿ ಬೀಸಿದುವು. ಸೂರ್ಯನು ಹೆಚ್ಚು ಪ್ರಕಾಶದಿಂದ ಬೆಳಗಿದನು.

೩೨. ಅಗ್ನಿಗಳು ಶಾಂತವಾಗಿ ಜ್ವಲಿಸಿದುವು. ದಿಗಂತಗಳಲ್ಲಿ (ಕೇಳಿ ಬರುತ್ತಿದ್ದ ವಿಪತ್ಸೂಚಕ) ಶಬ್ದಗಳೆಲ್ಲವೂ ನಿಂತುಹೋದುವು.

ಹೀಗೆ ಸಾವರ್ಣಿಕಮನ್ವಂತರಕ್ಕೆ ಸೇರಿದ ಶ್ರೀಮಾರ್ಕಂಡೇಯ ಪುರಾಣದ ದೇವೀಮಾಹಾತ್ಮ್ಯದಲ್ಲಿ 'ಶುಂಭವಧೆ' ಎಂಬ ಹತ್ತನೆಯ ಅಧ್ಯಾಯವು ಮುಗಿಯಿತು.

# ಏಕಾದಶೋಽಧ್ಯಾಯಃ

## ನಾರಾಯಣೀಸ್ತುತಿಃ

### ಧ್ಯಾನಮ್

ಓಮ್ । ಬಾಲರವಿದ್ಯುತಿಮಿಂದುಕಿರೀಟಾಂ ತುಂಗಕುಚಾಂ ನಯನತ್ರಯಯುಕ್ತಾಮ್ । ಸ್ಮೇರಮುಖೀಂ ವರದಾಂಕುಶ ಪಾಶಾ- ಭೀತಿಕರಾಂ ಪ್ರಭಜೇ ಭುವನೇಶೀಮ್ ॥

ಋಷಿರುವಾಚ ॥ ೧ ॥

ದೇವ್ಯಾ ಹತೇ ತತ್ರ ಮಹಾಽಸುರೇಂದ್ರೇ
ಸೇಂದ್ರಾಸ್ಸುರಾ ವಹ್ನಿಪುರೋಗಮಾಸ್ತಾಮ್ ।
ಕಾತ್ಯಾಯನೀಂ ತುಷ್ಟುವುರಿಷ್ಟಲಾಭಾದ್
ವಿಕಾಶಿವಕ್ತ್ರಾಬ್ಜವಿಕಾಸಿತಾಶಾಃ ॥ ೨ ॥

ದೇವಿ ಪ್ರಪನ್ನಾರ್ತಿಹರೇ ಪ್ರಸೀದ
ಪ್ರಸೀದ ಮಾತರ್ಜಗತೋಽಖಿಲಸ್ಯ ।
ಪ್ರಸೀದ ವಿಶ್ವೇಶ್ವರಿ ಪಾಹಿ ವಿಶ್ವಂ
ತ್ವಮೀಶ್ವರೀ ದೇವಿ ಚರಾಚರಸ್ಯ ॥ ೩ ॥

ಆಧಾರಭೂತಾ ಜಗತಸ್ತ್ವಮೇಕಾ
ಮಹೀಸ್ವರೂಪೇಣ ಯತಃ ಸ್ಥಿತಾಽಸಿ ।
ಅಪಾಂ ಸ್ವರೂಪಸ್ಥಿತಯಾ ತ್ವಯೈತದ್
ಆಪ್ಯಾಯ್ಯತೇ ಕೃತ್ಸ್ನಮಲಂಘ್ಯವೀರ್ಯೇ ॥ ೪ ॥

ತ್ವಂ ವೈಷ್ಣವೀಶಕ್ತಿರನಂತವೀರ್ಯಾ
ವಿಶ್ವಸ್ಯ ಬೀಜಂ ಪರಮಾಽಸಿ ಮಾಯಾ ।
ಸಂಮೋಹಿತಂ ದೇವಿ ಸಮಸ್ತಮೇತತ್
ತ್ವಂ ವೈ ಪ್ರಸನ್ನಾ ಭುವಿ ಮುಕ್ತಿಹೇತು: ॥ ೫ ॥

# ಹನ್ನೊಂದನೆಯ ಅಧ್ಯಾಯ

## ನಾರಾಯಣೀ ಸ್ತುತಿ

### ಧ್ಯಾನ

ಬಾಲಸೂರ್ಯನಂತೆ ಪ್ರಕಾಶವುಳ್ಳ, ಚಂದ್ರನನ್ನೇ ಕಿರೀಟವಾಗಿ ಉಳ್ಳ, ಉನ್ನತ ಕುಚಗಳನ್ನು ಹೊಂದಿರುವ, ತ್ರಿನಯನಳಾದ, ಮಂದಹಾಸ ಮುಖಿಯಾದ, ತನ್ನ ಕೈಗಳಲ್ಲಿ ವರದಮುದ್ರೆ, ಅಂಕುಶ ಪಾಶ, ಅಭಯಮುದ್ರೆ – ಇವುಗಳನ್ನು ಧರಿಸಿರುವ ಭುವನೇಶ್ವರಿಯನ್ನು ಭಜಿಸುತ್ತೇನೆ.

೧-೨. ಋಷಿಯು ಮುಂದುವರಿಸಿದನು : ಮಹಾಸುರರಿಗೂ ಒಡೆಯನಾಗಿದ್ದ ಶುಂಭನು ಆ ಯುದ್ಧದಲ್ಲಿ ದೇವಿಯಿಂದ ಹತನಾದ ಮೇಲೆ, ತಮ್ಮ ಇಷ್ಟಾರ್ಥವು ಹೀಗೆ ನೆರವೇರಿದ್ದರಿಂದ ಕಾಂತಿಯುಕ್ತವಾದ ಮತ್ತು ಅರಳಿದ ಮುಖ ಕಮಲಗಳ ಮೂಲಕ ದಿಕ್ಕುಗಳನ್ನು ಬೆಳಗುತ್ತ ಇಂದ್ರ ಸಹಿತರಾದ ದೇವತೆಗಳೆಲ್ಲರು ಅಗ್ನಿಯನ್ನು ಮುಂದುಮಾಡಿಕೊಂಡು ಬಂದು ಆ ಕಾತ್ಯಾಯನಿಯನ್ನು ಸ್ತುತಿಸಿದರು.

೩. ಹೇ ಶರಣಾಗತರ ದುಃಖಗಳನ್ನು ಪರಿಹರಿಸುವ ದೇವಿಯೇ, (ನಮ್ಮಲ್ಲಿ) ಪ್ರಸನ್ನಳಾಗು! ನಿಖಿಲವಿಶ್ವಜನನಿ, ಪ್ರಸನ್ನಳಾಗು! ವಿಶ್ವೇಶ್ವರಿಯೇ, ಪ್ರಸನ್ನಳಾಗು! ಈ ಜಗತ್ತನ್ನು ಕಾಪಾಡು; (ಏಕೆಂದರೆ) ಹೇ ದೇವಿಯೇ! ಚರಾಚರ ಜಗತ್ತಿಗೆಲ್ಲ ನೀನೇ ಈಶ್ವರಿ.

೪. ಅತಿಕ್ರಮಿಸಲಾಗದ ಶಕ್ತಿಯುಳ್ಳವಳೇ, ಜಗತ್ತಿಗೆ ಏಕಮಾತ್ರ ಆಧಾರಳಾಗಿರುವೆ. ಏಕೆಂದರೆ (ನೀನು ಈ) ಭೂಮಿಯ ರೂಪವನ್ನು ಧರಿಸಿ ನಿಂತಿರುವೆ. ನೀರಿನ ರೂಪದಲ್ಲಿ ನೆಲಸಿರುವ ನಿನ್ನಿಂದ ಈ ಸಮಸ್ತವೂ ತೃಪ್ತಿಯನ್ನು ಹೊಂದುತ್ತಿದೆ.

೫. ಹೇ ದೇವಿ, ವಿಷ್ಣುವಿನ ಅನಂತವೀರ್ಯಯುಕ್ತ ಶಕ್ತಿಯೂ ನೀನೇ. ವಿಶ್ವಕ್ಕೆ ಆದಿಕಾರಣವಾದ ಪರಮ ಮಾಯೆಯೂ ನೀನೇ. ದೇವಿ, (ನಿನ್ನಿಂದ) ಈ ಜಗತ್ತೆಲ್ಲವೂ ಮೋಹಗೊಂಡಿದೆ. (ಮತ್ತು) ಈ ಲೋಕದಲ್ಲಿ (ನೀನು) ಪ್ರಸನ್ನಳಾದರೆ ದಿಟವಾಗಿ ನೀನು ಮುಕ್ತಿಗೆ ಕಾರಣಳಾಗುತ್ತೀಯೆ.

ವಿದ್ಯಾಸ್ಸಮಸ್ತಾಸ್ತವ ದೇವಿ ಭೇದಾಃ
ಸ್ತ್ರಿಯಸ್ಸಮಸ್ತಾಸ್ಸಕಲಾ ಜಗತ್ಸು ।
ತ್ವಯ್ಯೈಕಯಾ ಪೂರಿತಮಂಬಯೈತತ್
ಕಾ ತೇ ಸ್ತುತಿಸ್ಸ್ತವ್ಯಪರಾಪರೋಕ್ತಿಃ ॥ ೬ ॥

ಸರ್ವಭೂತಾ ಯದಾ ದೇವೀ ಭುಕ್ತಿಮುಕ್ತಿಪ್ರದಾಯಿನೀ ।
ತ್ವಂ ಸ್ತುತಾ ಸ್ತುತಯೇ ಕಾ ವಾ ಭವಂತು ಪರಮೋಕ್ತಯಃ ॥ ೭ ॥

ಸರ್ವಸ್ಯ ಬುದ್ಧಿರೂಪೇಣ ಜನಸ್ಯ ಹೃದಿ ಸಂಸ್ಥಿತೇ ।
ಸ್ವರ್ಗಾಪವರ್ಗದೇ ದೇವಿ ನಾರಾಯಣಿ ನಮೋಽಸ್ತು ತೇ ॥ ೮ ॥

ಕಲಾಕಾಷ್ಠಾದಿರೂಪೇಣ ಪರಿಣಾಮಪ್ರದಾಯಿನಿ ।
ವಿಶ್ವಸ್ಯೋಪರತೌ ಶಕ್ತೇ ನಾರಾಯಣಿ ನಮೋಽಸ್ತು ತೇ ॥ ೯ ॥

ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ ।
ಶರಣ್ಯೇ ತ್ರ್ಯಂಬಕೇ ಗೌರಿ ನಾರಾಯಣಿ ನಮೋಽಸ್ತು ತೇ ॥ ೧೦ ॥

ಸೃಷ್ಟಿಸ್ಥಿತಿವಿನಾಶಾನಾಂ ಶಕ್ತಿಭೂತೇ ಸನಾತನಿ ।
ಗುಣಾಶ್ರಯೇ ಗುಣಮಯೇ ನಾರಾಯಣಿ ನಮೋಽಸ್ತು ತೇ ॥ ೧೧ ॥

ಶರಣಾಗತದೀನಾರ್ತಪರಿತ್ರಾಣಪರಾಯಣೇ ।
ಸರ್ವಸ್ಯಾರ್ತಿಹರೇ ದೇವಿ ನಾರಾಯಣಿ ನಮೋಽಸ್ತು ತೇ ॥ ೧೨ ॥

ಹಂಸಯುಕ್ತವಿಮಾನಸ್ಥೇ ಬ್ರಹ್ಮಾಣೀರೂಪಧಾರಿಣಿ ।
ಕೌಶಾಂಭಃಕ್ಷರಿಕೇ ದೇವಿ ನಾರಾಯಣಿ ನಮೋಽಸ್ತು ತೇ ॥ ೧೩ ॥

೬. ಹೇ ದೇವಿ, ಸಮಸ್ತ ವಿದ್ಯೆಗಳೂ ನಿನ್ನವೇ ಆದ ಭೇದಗಳು. ಜಗತ್ತುಗಳಲ್ಲಿರುವ ಸಕಲ ಸ್ತ್ರೀಯರೂ (ಕೂಡ ನಿನ್ನ ಭೇದಗಳೇ). ವಿಶ್ವ ಜನನಿಯಾದ ನಿನ್ನೊಬ್ಬಳಿಂದಲೇ ಇದೆಲ್ಲವೂ ಪೂರ್ಣವಾಗಿದೆ. (ಇಂತಹ) ನಿನಗೆ ಸ್ತುತಿಯು ತಾನೇ ಯಾವುದಿದೆ? ನೀನು ಪರಳು, ಅಪರಳು ಎಂಬಂತಹ ಮಾತು ಹೇಗೆ ತಾನೇ ಸಂದೀತು?

೭. ನೀನು ಸರ್ವಭೂತಳು. ಭುಕ್ತಿಮುಕ್ತಿಗಳನ್ನು ನೀಡುವವಳು-ಎಂದು ಯಾವಾಗ ನೀನು ಸ್ತುತಿಸಲ್ಪಡುವೆಯೋ ಆಗ ನಿನ್ನ ಸ್ತೋತ್ರಕ್ಕೆ ಯೋಗ್ಯವಾದ ಯಾವ ಪರಮೋಕ್ತಿಗಳು ಇದ್ದಾವು?

೮. ಹೇ ನಾರಾಯಣೀದೇವಿ, ಎಲ್ಲ ಜನರ ಹೃದಯದಲ್ಲಿ ಬುದ್ಧಿರೂಪದಿಂದ ನೆಲಸಿರುವವಳೆ, ಸ್ವರ್ಗಮೋಕ್ಷಗಳ ದಾತಳೆ, ನಿನಗೆ ನಮಸ್ಕಾರ.

೯. ಹೇ ನಾರಾಯಣಿ, (ಕಾಲದ ಸೂಕ್ಷ್ಮಭಾಗಗಳಾದ) ಕಲಾ, ಕಾಷ್ಠಾ ಮುಂತಾದವುಗಳ ರೂಪದಿಂದ ಜಗತ್ತಿನಲ್ಲಿ ಪರಿಣಾಮವನ್ನುಂಟು ಮಾಡುತ್ತಿರುವವಳೇ, ಪ್ರಪಂಚದ ಉಪಸಂಹಾರಕಾರ್ಯದಲ್ಲಿ ಶಕ್ತಳೇ, ನಿನಗೆ ನಮಸ್ಕಾರ.

೧೦. ಹೇ ಗೌರಿ, ಹೇ ನಾರಾಯಣಿ, ಸರ್ವಮಂಗಲಗಳ ಮಾಂಗಲ್ಯ ಸ್ವರೂಪಿಯೇ, ಶಿವೆಯೇ, ಸರ್ವಾಭೀಷ್ಟಗಳನ್ನೂ ಸಾಧಿಸಿಕೊಡುವವಳೇ, ಶರಣು ಯೋಗ್ಯಳೇ, ತ್ರಿನಯನಳೇ, ನಿನಗೆ ನಮಸ್ಕಾರ!

೧೧. ಸೃಷ್ಟಿ-ಸ್ಥಿತಿ-ವಿನಾಶಗಳನ್ನು ಮಾಡಬಲ್ಲ ಶಕ್ತಿಸ್ವರೂಪಳೇ, ಸನಾತನಳೇ, ತ್ರಿಗುಣಗಳಿಗೆ ಆಶ್ರಯಳೇ, ತ್ರಿಗುಣಮಯಳೇ, ನಾರಾಯಣಿಯೇ, ನಿನಗೆ ನಮಸ್ಕಾರ!

೧೨. ಹೇ ನಾರಾಯಣಿ, ಶರಣಾಗತರು, ದೀನರು, ಆರ್ತರು ಮುಂತಾದವರ ರಕ್ಷಣೆಯಲ್ಲಿ ನಿರತಳಾಗಿರುವವಳೇ, ಎಲ್ಲರ ದುಃಖವನ್ನೂ ನಾಶ ಮಾಡುವವಳೇ, ನಿನಗೆ ನಮಸ್ಕಾರ!

೧೩. ಹೇ ನಾರಾಯಣಿ, ಬ್ರಹ್ಮಾಣಿಯ ರೂಪದಿಂದ ಹಂಸಯುಕ್ತವಾದ ವಿಮಾನದಲ್ಲಿ ಕುಳಿತಿರುವವಳೇ, ಕಮಂಡಲುವಿನಿಂದ ದರ್ಭೋದಕವನ್ನು ಪ್ರೋಕ್ಷಿಸುತ್ತ ಶತ್ರುಗಳನ್ನು ನಾಶಮಾಡುವ ದೇವಿಯೇ, ನಿನಗೆ ನಮಸ್ಕಾರ!

ತ್ರಿಶೂಲಚಂದ್ರಾಹಿಧರೇ ಮಹಾವೃಷಭವಾಹಿನಿ ।
ಮಾಹೇಶ್ವರೀಸ್ವರೂಪೇಣ ನಾರಾಯಣಿ ನಮೋಽಸ್ತು ತೇ ॥ ೧೪ ॥

ಮಯೂರಕುಕ್ಕುಟವೃತೇ ಮಹಾಶಕ್ತಿಧರೇಽನಘೇ ।
ಕೌಮಾರೀರೂಪಸಂಸ್ಥಾನೇ ನಾರಾಯಣಿ ನಮೋಽಸ್ತು ತೇ ॥ ೧೫ ॥

ಶಂಖಚಕ್ರಗದಾಶಾರ್ಙ್ಗಗೃಹೀತಪರಮಾಯುಧೇ ।
ಪ್ರಸೀದ ವೈಷ್ಣವೀರೂಪೇ ನಾರಾಯಣಿ ನಮೋಽಸ್ತು ತೇ ॥ ೧೬ ॥

ಗೃಹೀತೋಗ್ರಮಹಾಚಕ್ರೇ ದಂಷ್ಟ್ರೋದ್ಧೃತವಸುಂಧರೇ ।
ವರಾಹರೂಪಿಣಿ ಶಿವೇ ನಾರಾಯಣಿ ನಮೋಽಸ್ತು ತೇ ॥ ೧೭ ॥

ನೃಸಿಂಹರೂಪೇಣೋಗ್ರೇಣ ಹಂತುಂ ದೈತ್ಯಾನ್ ಕೃತೋದ್ಯಮೇ ।
ತ್ರೈಲೋಕ್ಯತ್ರಾಣಸಹಿತೇ ನಾರಾಯಣಿ ನಮೋಽಸ್ತು ತೇ ॥ ೧೮ ॥

ಕಿರೀಟನಿ ಮಹಾವಜ್ರೇ ಸಹಸ್ರನಯನೋಜ್ಜ್ವಲೇ ।
ವೃತ್ರಪ್ರಾಣಹರೇ ಚೈಂದ್ರಿ ನಾರಾಯಣಿ ನಮೋಽಸ್ತು ತೇ ॥ ೧೯ ॥

ಶಿವದೂತೀಸ್ವರೂಪೇಣ ಹತದೈತ್ಯಮಹಾಬಲೇ ।
ಘೋರರೂಪೇ ಮಹಾರಾವೇ ನಾರಾಯಣಿ ನಮೋಽಸ್ತು ತೇ ॥ ೨೦ ॥

ದಂಷ್ಟ್ರಾಕರಾಲವದನೇ ಶಿರೋಮಾಲಾವಿಭೂಷಣೇ ।
ಚಾಮುಂಡೇ ಮುಂಡಮಥನೇ ನಾರಾಯಣಿ ನಮೋಽಸ್ತು ತೇ ॥ ೨೧ ॥

ಲಕ್ಷ್ಮಿ ಲಜ್ಜೇ ಮಹಾವಿದ್ಯೇ ಶ್ರದ್ಧೇ ಪುಷ್ಟಿ ಸ್ವಧೇ ಧ್ರುವೇ ।
ಮಹಾರಾತ್ರಿ ಮಹಾಮಾಯೇ ನಾರಾಯಣಿ ನಮೋಽಸ್ತು ತೇ ॥ ೨೨ ॥

೧೪. ಹೇ ನಾರಾಯಣಿ, ತ್ರಿಶೂಲ - ಚಂದ್ರ - ಸರ್ಪಗಳನ್ನು ಧರಿಸಿ ಮಾಹೇಶ್ವರೀರೂಪದಿಂದ ಮಹಾವೃಷಭವಾಹಿನಿಯಾಗಿರುವ ನಿನಗೆ ನಮಸ್ಕಾರ!

೧೫. ಹೇ ನಾರಾಯಣಿ, ನವಿಲು-ಕೋಳಿಗಳಿಂದ ಆವೃತಳಾಗಿರುವವಳೇ, ಮಹಾಶಕ್ತಿಯನ್ನು ಧರಿಸಿರುವವಳೇ, ಪಾಪರಹಿತಳೇ, ಕೌಮಾರೀ ರೂಪದಲ್ಲಿರುವವಳೇ, ನಿನಗೆ ನಮಸ್ಕಾರ!

೧೬. ಹೇ ನಾರಾಯಣಿ, (ನಮ್ಮಲ್ಲಿ) ಪ್ರಸನ್ನಳಾಗು! ಶಂಖ, ಚಕ್ರ, ಗದೆ, ಶಾರ್ಙ್ಗ, ಧನಸ್ಸು-ಮುಂತಾದ ಪರಮಾಯುಧಗಳನ್ನು ಧರಿಸಿದ ವಿಷ್ಣುವಿನ ಶಕ್ತಿಸ್ವರೂಪಳಾದ ನಿನಗೆ ನಮಸ್ಕಾರ!

೧೭. ಹೇ ನಾರಾಯಣಿ, ವರಾಹರೂಪವನ್ನು ಧರಿಸಿ ಮಹಾಚಕ್ರವನ್ನು ಹಿಡಿದು ಕೋರೆದಾಡೆಗಳಿಂದ (ನೀರಿನಲ್ಲಿ ಮುಳುಗಿದ್ದ) ಭೂಮಿಯನ್ನು ಮೇಲಕ್ಕೆತ್ತಿದವಳೇ, ಮಂಗಳಸ್ವರೂಪಳೇ, ನಿನಗೆ ನಮಸ್ಕಾರ!

೧೮. ಹೇ ನಾರಾಯಣಿ, ಉಗ್ರವಾದ ನರಸಿಂಹರೂಪದಿಂದ ರಾಕ್ಷಸರನ್ನು ಸಂಹರಿಸಲುದ್ಯುಕ್ತಳಾದ ಮತ್ತು ತ್ರಿಲೋಕಸಂರಕ್ಷಣದಲ್ಲಿ ನಿರತಳಾದ ನಿನಗೆ ನಮಸ್ಕಾರ!

೧೯. ಹೇ ನಾರಾಯಣಿ, ಕಿರೀಟವನ್ನೂ, ಮಹಾವಜ್ರಾಯುಧವನ್ನೂ ಧರಿಸಿರುವ, ಸಹಸ್ರನಯನಗಳಿಂದ ಪ್ರಜ್ವಲಿಸುತ್ತಿರುವ, ವೃತ್ರಾಸುರನ ಪ್ರಾಣ ಹರಣಮಾಡಿದ ಇಂದ್ರಾಣೀರೂಪಳಾದ ನಿನಗೆ ನಮಸ್ಕಾರ!

೨೦. ಹೇ ನಾರಾಯಣಿ, ಶಿವದೂತಿಯ ರೂಪದಿಂದ ದೈತ್ಯರ ಮಹಾ ಸೈನ್ಯವನ್ನು ನಾಶಮಾಡಿದವಳೇ, ಘೋರರೂಪಿಣಿಯೇ, ಮಹಾನಾದಳೇ, ನಿನಗೆ ನಮಸ್ಕಾರ!

೨೧. ಹೇ ನಾರಾಯಣಿ, ಚಾಮುಂಡಾಂಬಿಕೇ, ಕೋರೆದಾಡೆಗಳಿಂದ ಭಯಂಕರವಾದ ಮುಖವುಳ್ಳವಳೇ, ನರಶಿರಸ್ಸುಗಳ ಮಾಲೆಯಿಂದ ಅಲಂಕೃತಳಾದವಳೇ, ಮುಂಡಾಸುರಸಂಹಾರಿಯೇ, ನಿನಗೆ ನಮಸ್ಕಾರ!

೨೨. ಹೇ ನಾರಾಯಣಿ, ಲಕ್ಷ್ಮೀಸ್ವರೂಪಳೂ, ಲಜ್ಜಾಸ್ವರೂಪಳೂ, ಬ್ರಹ್ಮವಿದ್ಯಾಸ್ವರೂಪಳೂ, ಶ್ರದ್ಧಾಸ್ವರೂಪಳೂ, ಪುಷ್ಟಿಸ್ವರೂಪಳೂ, ಸ್ವಧಾ, ಮಂತ್ರಸ್ವರೂಪಳೂ, ನಿತ್ಯಳೂ, ಮಹಾಪ್ರಳಯ ಕಾಲದ ರಾತ್ರಿಸ್ವರೂಪಳೂ, ಮಹಾಮಾಯೆಯೂ ಆದ ನಿನಗೆ ನಮಸ್ಕಾರ!

ಮೇಧೇ ಸರಸ್ವತಿ ವರೇ ಭೂತಿ ಬಾಭ್ರವಿ ತಾಮಸಿ ।
ನಿಯತೇ ತ್ವಂ ಪ್ರಸೀದೇಶೇ ನಾರಾಯಣಿ ನಮೋಽಸ್ತು ತೇ ॥ ೨೩ ॥

ಸರ್ವಸ್ವರೂಪೇ ಸರ್ವೇಶೇ ಸರ್ವಶಕ್ತಿಸಮನ್ವಿತೇ ।
ಭಯೇಭ್ಯಸ್ತ್ರಾಹಿ ನೋ ದೇವಿ ದುರ್ಗೇ ದೇವಿ
ನಮೋಽಸ್ತು ತೇ ॥ ೨೪ ॥

ಏತತ್ತೇ ವದನಂ ಸೌಮ್ಯಂ ಲೋಚನತ್ರಯಭೂಷಿತಮ್ ।
ಪಾತು ನಃ ಸರ್ವಭೀತಿಭ್ಯಃ ಕಾತ್ಯಾಯನಿ ನಮೋಽಸ್ತು ತೇ ॥ ೨೫ ॥

ಜ್ವಾಲಾಕರಾಲಮತ್ಯುಗ್ರಮಶೇಷಾಸುರಸೂದನಮ್ ।
ತ್ರಿಶೂಲಂ ಪಾತು ನೋ ಭೀತೇರ್ಭದ್ರಕಾಲಿ
ನಮೋಽಸ್ತು ತೇ ॥ ೨೬ ॥

ಹಿನಸ್ತಿ ದೈತ್ಯತೇಜಾಂಸಿ ಸ್ವನೇನಾಪೂರ್ಯ ಯಾ ಜಗತ್ ।
ಸಾ ಘಂಟಾ ಪಾತು ನೋ ದೇವಿ ಪಾಪೇಭ್ಯೋಽನಃ
ಸುತಾನಿವ ॥ ೨೭ ॥

ಅಸುರಾಸೃಗ್ವಸಾಪಂಕಚರ್ಚಿತಸ್ತೇ ಕರೋಜ್ಜ್ವಲಃ ।
ಶುಭಾಯ ಖಡ್ಗೋ ಭವತು ಚಂಡಿಕೇ ತ್ವಾಂ ನತಾ ವಯಮ್ ॥ ೨೮ ॥

ರೋಗಾನಶೇಷಾನಪಹಂಸಿ ತುಷ್ಟಾ
ರುಷ್ಟಾ ತು ಕಾಮಾನ್ ಸಕಲಾನಭೀಷ್ಟಾನ್ ।
ತ್ವಾಮಾಶ್ರಿತಾನಾಂ ನ ವಿಪನ್ನರಾಣಾಂ
ತ್ವಾಮಾಶ್ರಿತಾ ಹ್ಯಾಶ್ರಯತಾಂ ಪ್ರಯಾಂತಿ ॥ ೨೯ ॥

೨೩. ಹೇ ನಾರಾಯಣಿ, ಪ್ರಸನ್ನಳಾಗು ! ಮೇಧಾಸ್ವರೂಪಳೂ ಸರಸ್ವತೀಸ್ವರೂಪಳೂ ಸರ್ವಶ್ರೇಷ್ಠಳೂ ಸತ್ತ್ವಾದಿಗುಣತ್ರಯಯುಕ್ತಳೂ ಈಶ್ವರಿಯೂ ಆದ ನಿನಗೆ ನಮಸ್ಕಾರ !

೨೪. ಸರ್ವರೂಪಳೇ, ಸರ್ವೇಶ್ವರಿಯೇ, ಸರ್ವಶಕ್ತಿಯುತಳೇ, ದುರ್ಗಾದೇವಿಯೇ, ನಮ್ಮನ್ನು ಸರ್ವಭಯಗಳಿಂದಲೂ ಕಾಪಾಡು ! ನಿನಗೆ ನಮಸ್ಕಾರ !

೨೫. ಹೇ ಕಾತ್ಯಾಯನಿ, ತ್ರಿಲೋಚನದಿಂದ ಭೂಷಿತವೂ, ಸೌಮ್ಯವೂ ಆದ ಈ ನಿನ್ನ ವದನವು ನಮ್ಮನ್ನು ಸಕಲಭಯಗಳಿಂದಲೂ ಕಾಪಾಡಲಿ ! ನಿನಗೆ ನಮಸ್ಕಾರ !

೨೬. ಹೇ ಭದ್ರಕಾಳಿ, ಜ್ವಾಲೆಗಳಿಂದ ಭಯಂಕರವೂ, ಅತ್ಯುಗ್ರವೂ, ಸಂಪೂರ್ಣ ಆಸುರಸಂಹಾರಿಯೂ ಆದ ನಿನ್ನ ತ್ರಿಶೂಲವು ನಮ್ಮನ್ನು ಭಯದಿಂದ ಪಾರುಮಾಡಲಿ ! ನಿನಗೆ ನಮಸ್ಕಾರ !

೨೭. ಹೇ ದೇವಿ, ಯಾವ ನಿನ್ನ ಘಂಟೆಯು ತನ್ನ ಧ್ವನಿಯಿಂದ ಜಗತ್ತನ್ನೆಲ್ಲ ತುಂಬಿಸಿ ರಾಕ್ಷಸರು ತೇಜಸ್ಸನ್ನೆಲ್ಲ ನಾಶಮಾಡುತ್ತದೆಯೋ, ಅದು ನಮ್ಮನ್ನು – ತಾಯಿ ತನ್ನ ಮಕ್ಕಳನ್ನು ಕಾಪಾಡುವಂತೆ – ಪಾಪಗಳಿಂದ ಕಾಪಾಡಲಿ !

೨೮. ಹೇ ಚಂಡಿಕೆ, ಅಸುರರ ರಕ್ತದಿಂದ ಮತ್ತು ಕೊಬ್ಬಿನ ಕೆಸರಿನಿಂದ ಲೇಪಿತವಾಗಿ ತೇಜೋಮಯವಾಗಿರುವ ನಿನ್ನ ಖಡ್ಗವು ನಮಗೆ ಶುಭವನ್ನುಂಟು ಮಾಡಲಿ ! ನಿನಗೆ ಬಾಗುತ್ತೇವೆ !

೨೯. ನೀನು ಸಂತುಷ್ಟಳಾದರೆ ಸಕಲರೋಗಗಳನ್ನೂ ನಾಶ ಮಾಡುವೆ, ಕುಪಿತಳಾದರೆ ಸಕಲಕಾಮನೆಗಳನ್ನೂ ಮತ್ತು ಅಭೀಷ್ಟಗಳನ್ನೂ (ನಾಶ ಮಾಡುವೆ). ನಿನ್ನನ್ನು ಆಶ್ರಯಿಸಿದ ಮನುಜರಿಗೆ ಯಾವ ವಿಪತ್ತೂ ಒದಗುವುದಿಲ್ಲ; ಆಶ್ರಯವನ್ನು ಪಡೆದವರಾದರೋ ಇತರರಿಗೆ ಆಶ್ರಯವನ್ನು ನೀಡಬಲ್ಲರು.

ಏತತ್ಕೃತಂ ಯತ್ಕದನಂ ತ್ವಯಾದ್ಯ
ಧರ್ಮದ್ವಿಷಾಂ ದೇವಿ ಮಹಾಽಸುರಾಣಾಮ್ ।
ರೂಪೈರನೇಕೈರ್ಬಹುಧಾಽಽತ್ಮಮೂರ್ತಿಂ
ಕೃತ್ವಾಽಂಬಿಕೇ ತತ್ ಪ್ರಕರೋತಿ ಕಾಽನ್ಯಾ ॥ ೩೦ ॥

ವಿದ್ಯಾಸು ಶಾಸ್ತ್ರೇಷು ವಿವೇಕದೀಪೇ-
ಷ್ವಾದ್ಯೇಷು ವಾಕ್ಯೇಷು ಚ ಕಾ ತ್ವದನ್ಯಾ ।
ಮಮತ್ವಗರ್ತೇಽತಿಮಹಾಂಧಕಾರೇ
ವಿಭ್ರಾಮಯತ್ಯೇತದತೀವ ವಿಶ್ವಮ್ ॥ ೩೧ ॥

ರಕ್ಷಾಂಸಿ ಯತ್ರೋಗ್ರವಿಷಾಶ್ಚ ನಾಗಾ
ಯತ್ರಾರಯೋ ದಸ್ಯುಬಲಾನಿ ಯತ್ರ ।
ದಾವಾನಲೋ ಯತ್ರ ತಥಾಽಬ್ಧಿಮಧ್ಯೇ
ತತ್ರ ಸ್ಥಿತಾ ತ್ವಂ ಪರಿಪಾಸಿ ವಿಶ್ವಮ್ ॥ ೩೨ ॥

ವಿಶ್ವೇಶ್ವರಿ ತ್ವಂ ಪರಿಪಾಸಿ ವಿಶ್ವಂ
ವಿಶ್ವಾತ್ಮಿಕಾ ಧಾರಯಸೀಹ ವಿಶ್ವಮ್ ।
ವಿಶ್ವೇಶವಂದ್ಯಾ ಭವತೀ ಭವಂತಿ
ವಿಶ್ವಾಶ್ರಯಾ ಯೇ ತ್ವಯಿ ಭಕ್ತಿನಮ್ರಾಃ ॥ ೩೩ ॥

ದೇವಿ ಪ್ರಸೀದ ಪರಿಪಾಲಯ ನೋಽರಿಭೀತೇ-
ರ್ನಿತ್ಯಂ ಯಥಾಽಸುರವಧಾದಧುನೈವ ಸದ್ಯಃ ।
ಪಾಪಾನಿ ಸರ್ವಜಗತಾಂ ಪ್ರಶಮಂ ನಯಾಶು
ಉತ್ಪಾತಪಾಕಜನಿತಾಂಶ್ಚ ಮಹೋಪಸರ್ಗಾನ್ ॥ ೩೪ ॥

ಪ್ರಣತಾನಾಂ ಪ್ರಸೀದ ತ್ವಂ ದೇವಿ ವಿಶ್ವಾರ್ತಿಹಾರಿಣಿ ।
ತ್ರೈಲೋಕ್ಯವಾಸಿನಾಮೀಡ್ಯೇ ಲೋಕಾನಾಂ ವರದಾ ಭವ ॥ ೩೫ ॥

೩೦. ಹೇ ದೇವಿ, ನೀನು ಈಗ (ಬ್ರಾಹ್ಮೀ, ಕಾಳೀ) ಮುಂತಾದ ರೂಪಗಳ ಮೂಲಕ ನಿನ್ನ ಆತ್ಮರೂಪವನ್ನು ಬಹುಪ್ರಕಾರ ಪ್ರಕಟಪಡಿಸಿ, ಧರ್ಮ ದ್ವೇಷಿಗಳಾದ ಮಹಾಸುರರನ್ನು ನಾಶಮಾಡಿದಂತೆ–ಹೇ ಅಂಬಿಕೆ– ಮತ್ತಾರು ಮಾಡಬಲ್ಲರು?

೩೧. (ಹೇ ದೇವಿ), ಐಹಿಕವಿದ್ಯೆಗಳಲ್ಲಿ (ಮನುಸ್ಮೃತ್ಯಾದಿ ಪ್ರವೃತ್ತಿಪರ) ಶಾಸ್ತ್ರಗಳಲ್ಲಿ, (ನಿವೃತ್ತಿಪರವಾದ) ವೇದಾಂತವಾಕ್ಯಗಳಲ್ಲಿ ನಿನ್ನನ್ನು ಬಿಟ್ಟರೆ ಮತ್ತಾರನ್ನು ವರ್ಣಿಸಿದೆ? ಮಹಾಂಧಕಾರರೂಪವೂ, ಮಮತ್ವಪೂರ್ಣವೂ ಆದ ಸಂಸಾರವೆಂಬ ಹಳ್ಳದಲ್ಲಿ ಈ ವಿಶ್ವವು ಭ್ರಮೆಯಿಂದ ಅತ್ಯಂತವಾಗಿ ಸುತ್ತುತ್ತಿದೆ. (ಇದಕ್ಕೂ ಮಹಾಮಾಯೆಯಾದ ನೀನೇ ಕಾರಣಳಲ್ಲವೆ?)

೩೨. ಎಲ್ಲೆಲ್ಲಿ ರಾಕ್ಷಸರು, ಉಗ್ರವಿಷದ ಸರ್ಪಗಳು, ಶತ್ರುಗಳು, ದಸ್ಯುಸೈನಿಕರು, ಕಾಳ್ಗಿಚ್ಚು, ಸಮುದ್ರ ಮೊದಲಾದುವು ಇರುವವೋ ಅಲ್ಲೆಲ್ಲ ನೀನು ನಿಂತು ವಿಶ್ವವನ್ನು ಪರಿಪಾಲಿಸುವೆ.

೩೩. ವಿಶ್ವೇಶ್ವರಿಯೇ, ನೀನು ಈ ಪ್ರಪಂಚವನ್ನು ಪರಿಪಾಲಿಸುತ್ತಿರುವೆ. (ನೀನು) ವಿಶ್ವಾತ್ಮಳಾಗಿರುವುದರಿಂದ ಇಲ್ಲಿ ಈ ವಿಶ್ವವನ್ನು ಧರಿಸಿರುವೆ. ವಿಶ್ವಕ್ಕೆ ಒಡೆಯರಾದವರಿಗೂ ವಂದ್ಯಳು ನೀನು. ಯಾರು ನಿನ್ನಲ್ಲಿ ಭಕ್ತಿಯಿಂದ ನಮ್ರರಾಗಿರುವರೋ ಅವರು ಇಡೀ ಜಗತ್ತಿಗೇ ಆಶ್ರಯರಾಗುತ್ತಾರೆ.

೩೪. ಹೇ ದೇವಿ, ಪ್ರಸನ್ನಳಾಗು! ನೀನು ಈಗತಾನೇ ದೈತ್ಯರನ್ನು ಸಂಹರಿಸಿ (ನಮ್ಮನ್ನು) ಕೂಡಲೇ (ರಕ್ಷಿಸಿದಂತೆ) (ಇನ್ನು ಮುಂದೆಯೂ ಕೂಡ) ಶತ್ರುಭಯದಿಂದ ನಮ್ಮನ್ನು ಅನವರತ ರಕ್ಷಿಸು ! ಇಡೀ ಜಗತ್ತಿನ ಪಾಪವನ್ನೂ ಅಪಶಕುನಗಳ ಪರಿಪಾಕದಿಂದುಂಟಾಗುವ ಮಹೋಪದ್ರವಗಳನ್ನೂ ಶೀಘ್ರವಾಗಿ ನಾಶಮಾಡು.

೩೫. ಹೇ ವಿಶ್ವಕಷ್ಟಹಾರಿಣಿಯಾದ ದೇವಿಯೇ, ನೀನು ಪ್ರಸನ್ನಳಾಗು! ತ್ರಿಭುವನವಾಸಿಗಳಿಗೆ ಆರಾಧ್ಯಳೇ, ನಿನ್ನನ್ನು ನಮಿಸುತ್ತಿರುವ ಜನರಿಗೆ ವರಗಳನ್ನು ಅನುಗ್ರಹಿಸು!

ದೇವ್ಯುವಾಚ ॥ ೩೬ ॥

ವರದಾऽಹಂ ಸುರಗಣಾ ವರಂ ಯಂ ಮನಸೇಚ್ಛಥ ।
ತಂ ವೃಣುಧ್ವಂ ಪ್ರಯಚ್ಛಾಮಿ ಜಗತಾಮುಪಕಾರಕಮ್ ॥ ೩೭ ॥

ದೇವಾ ಊಚುಃ ॥ ೩೮ ॥

ಸರ್ವಬಾಧಾಪ್ರಶಮನಂ ತ್ರೈಲೋಕ್ಯಸ್ಯಾಖಿಲೇಶ್ವರಿ ।
ಏವಮೇವ ತ್ವಯಾ ಕಾರ್ಯಮಸ್ಮದ್ವೈರಿವಿನಾಶನಮ್ ॥ ೩೯ ॥

ದೇವ್ಯುವಾಚ ॥ ೪೦ ॥

ವೈವಸ್ವತೇऽಂತರೇ ಪ್ರಾಪ್ತೇ ಅಷ್ಟಾವಿಂಶತಿಮೇ ಯುಗೇ ।
ಶುಂಭೋ ನಿಶುಂಭಶ್ಚೈವಾನ್ಯಾವುತ್ಪತ್ಸ್ಯೇತೇ ಮಹಾऽಸುರೌ ॥ ೪೧ ॥

ನಂದಗೋಪಗೃಹೇ ಜಾತಾ ಯಶೋದಾಗರ್ಭಸಂಭವಾ ।
ತತಸ್ತೌ ನಾಶಯಿಷ್ಯಾಮಿ ವಿಂಧ್ಯಾಚಲನಿವಾಸಿನೀ ॥ ೪೨ ॥

ಪುನರಪ್ಯತಿರೌದ್ರೇಣ ರೂಪೇಣ ಪೃಥಿವೀತಲೇ ।
ಅವತೀರ್ಯ ಹನಿಷ್ಯಾಮಿ ವೈಪ್ರಚಿತ್ತಾಂಸ್ತು ದಾನವಾನ್ ॥ ೪೩ ॥

ಭಕ್ಷಯಂತ್ಯಾಶ್ಚ ತಾನುಗ್ರಾನ್ ವೈಪ್ರಚಿತ್ತಾನ್ಮಹಾऽಸುರಾನ್ ।
ರಕ್ತಾ ದಂತಾ ಭವಿಷ್ಯಂತಿ ದಾಡಿಮೀಕುಸುಮೋಪಮಾಃ ॥ ೪೪ ॥

ತತೋ ಮಾಂ ದೇವತಾಸ್ಸ್ವರ್ಗೇ ಮರ್ತ್ಯಲೋಕೇ ಚ ಮಾನವಾಃ ।
ಸ್ತುವಂತೋ ವ್ಯಾಹರಿಷ್ಯಂತಿ ಸತತಂ ರಕ್ತದಂತಿಕಾಮ್ ॥ ೪೫ ॥

ಭೂಯಶ್ಚ ಶತವಾರ್ಷಿಕ್ಯಾಮನಾವೃಷ್ಟ್ಯಾಮನಂಭಸಿ ।
ಮುನಿಭಿಸ್ಸಂಸ್ಮೃತಾ ಭೂಮೌ ಸಂಭವಿಷ್ಯಾಮ್ಯಯೋನಿಜಾ ॥ ೪೬ ॥

ತತಶ್ಶತೇನ ನೇತ್ರಾಣಾಂ ನಿರೀಕ್ಷಿಷ್ಯಾಮಿ ಯನ್ಮುನೀನ್ ।
ಕೀರ್ತಯಿಷ್ಯಂತಿ ಮನುಜಾಶ್ಶತಾಕ್ಷೀಮಿತಿ ಮಾಂ ತತಃ ॥ ೪೭ ॥

೩೬-೩೭. ದೇವಿಯಿಂತೆಂದಳು: ನಾನು ವರದಾತೃ (ಎಂದು ನೀವು ಹೇಳಿದ್ದು ಸರಿಯೇ!) ಎಲೈ ದೇವತೆಗಳೆ, ಜಗತ್ತಿಗೆ ಉಪಕಾರವನ್ನು ಮಾಡುವ ಯಾವ ವರವನ್ನಾದರೂ ಮನಸ್ಸಿನಿಂದ ಇಚ್ಛಿಸಿದರೆ ಅದನ್ನು ಕೇಳಿರಿ, ಕೊಡುತ್ತೇನೆ !

೩೮-೩೯. ದೇವತೆಗಳು ಉತ್ತರವಿತ್ತರು: ತ್ರಿಲೋಕಗಳೆಲ್ಲಕ್ಕೂ ಈಶ್ವರಿ ಯಾದವಳೆ, ಇದೇ ರೀತಿಯಲ್ಲಿ ನಮ್ಮ ವೈರಿಗಳ ವಿನಾಶವನ್ನೂ, ಸಕಲಬಾಧೆಗಳ ಹೋಗಲಾಡಿಸುವಿಕೆಯನ್ನೂ ನೀನು ಮಾಡಿಕೊಡುತ್ತಿರು !

೪೦-೪೧. ದೇವಿಯು (ಪುನಃ) ಹೇಳಿದಳು: ಇಪ್ಪತ್ತೆಂಟನೆಯ ಯುಗದಲ್ಲಿ ವೈವಸ್ವತ ಮನ್ವಂತರವು ಪ್ರಾಪ್ತವಾದಾಗ ಶುಂಭ-ನಿಶುಂಭರೆಂಬ ಮತ್ತಿಬ್ಬರು ಮಹಾರಾಕ್ಷಸರು ಹುಟ್ಟುವರು.

೪೨. ನಾನು ನಂದಗೋಪನ ಮನೆಯಲ್ಲಿ ಯಶೋದೆಯ ಗರ್ಭದಲ್ಲಿ ಹುಟ್ಟಿ ವಿಂಧ್ಯಪರ್ವತದಲ್ಲಿ ವಾಸಮಾಡುವವಳಾಗಿ ಅನಂತರ ಅವರಿಬ್ಬರನ್ನೂ ನಾಶಮಾಡುತ್ತೇನೆ.

೪೩. ಮತ್ತೆ, ಅತಿ ಭಯಂಕರವಾದ ರೂಪದಿಂದ ಭೂತಲದಲ್ಲಿ ಅವತರಿಸಿ ವೈಪ್ರಚಿತ್ತರೆಂಬ ರಾಕ್ಷಸರನ್ನು ಕೊಲ್ಲುವೆನು.

೪೪. ಉಗ್ರರಾದ ಆ ವೈಪ್ರಚಿತ್ತರೆಂಬ ಮಹಾರಾಕ್ಷಸರನ್ನು ತಿನ್ನುವುದ ರಿಂದ ನನ್ನ ಹಲ್ಲುಗಳು ದಾಳಿಂಬೆ ಹೂವಿನಂತೆ ಕೆಂಪಾಗುತ್ತವೆ.

೪೫. ಆ ಕಾರಣದಿಂದ ಸ್ವರ್ಗದಲ್ಲಿ ದೇವತೆಗಳೂ, ಮರ್ತ್ಯಲೋಕದಲ್ಲಿ ಮಾನವರೂ ನನ್ನನ್ನು ಯಾವಾಗಲೂ ಹೊಗಳುತ್ತಾ ರಕ್ತದಂತಿಕಾ ಎಂದು ಹೇಳುವರು.

೪೬. ಮತ್ತೊಂದು ಸಲ ನೂರು ವರ್ಷಗಳ ಕಾಲ ವ್ಯಾಪಿಸುವ ಮಳೆಯಿಲ್ಲದ, ನೀರಿಲ್ಲದ (ಕ್ಷಾಮಕಾಲದಲ್ಲಿ) ಮುನಿಗಳಿಂದ ಸ್ಮರಿಸಲ್ಪಟ್ಟು ಭೂಮಿಯಲ್ಲಿ ಅಯೋನಿಜೆಯಾಗಿ ಹುಟ್ಟುವೆನು.

೪೭. ಆಮೇಲೆ ನಾನು ಋಷಿಗಳನ್ನು ನೂರು ಕಣ್ಣುಗಳಿಂದ ನೋಡುವ ಕಾರಣದಿಂದ ಮನುಷ್ಯರು ನನ್ನನ್ನು ಶತಾಕ್ಷಿಯೆಂದು ಹೊಗಳುತ್ತಾರೆ.

ತತೋಽಹಮಖಿಲಂ ಲೋಕಮಾತ್ಮದೇಹಸಮುದ್ಭವೈಃ ।
ಭರಿಷ್ಯಾಮಿ ಸುರಾಶ್ಶಾಕೈರಾವೃಷ್ಟೇಃ ಪ್ರಾಣಧಾರಕೈಃ ॥ ೪೮ ॥

ಶಾಕಂಭರೀತಿ ವಿಖ್ಯಾತಿಂ ತದಾ ಯಾಸ್ಯಾಮ್ಯಹಂ ಭುವಿ ॥ ೪೯ ॥

ತತ್ರೈವ ಚ ವಧಿಷ್ಯಾಮಿ ದುರ್ಗಮಾಖ್ಯಂ ಮಹಾಽಸುರಮ್ ।
ದುರ್ಗಾದೇವೀತಿ ವಿಖ್ಯಾತಂ ತನ್ಮೇ ನಾಮ ಭವಿಷ್ಯತಿ ॥ ೫೦ ॥

ಪುನಶ್ಚಾಹಂ ಯದಾ ಭೀಮಂ ರೂಪಂ ಕೃತ್ವಾ ಹಿಮಾಚಲೇ ।
ರಕ್ಷಾಂಸಿ ಭಕ್ಷಯಿಷ್ಯಾಮಿ ಮುನೀನಾಂ ತ್ರಾಣಕಾರಣಾತ್ ॥ ೫೧ ॥

ತದಾ ಮಾಂ ಮುನಯಸ್ಸರ್ವೇ ಸ್ತೋಷ್ಯಂತ್ಯಾನಮ್ರಮೂರ್ತಯಃ ।
ಭೀಮಾದೇವೀತಿ ವಿಖ್ಯಾತಂ ತನ್ಮೇ ನಾಮ ಭವಿಷ್ಯತಿ ॥ ೫೨ ॥

ಯದಾಽರುಣಾಖ್ಯಸ್ತ್ರೈಲೋಕ್ಯೇ ಮಹಾಬಾಧಾಂ ಕರಿಷ್ಯತಿ ।
ತದಾಽಹಂ ಭ್ರಾಮರಂ ರೂಪಂ ಕೃತ್ವಾಽಸಂಖ್ಯೇಯಷಟ್ಪದಮ್ ॥ ೫೩ ॥

ತ್ರೈಲೋಕ್ಯಸ್ಯ ಹಿತಾರ್ಥಾಯ ವಧಿಷ್ಯಾಮಿ ಮಹಾಽಸುರಮ್ ।
ಭ್ರಾಮರೀತಿ ಚ ಮಾಂ ಲೋಕಾಸ್ತದಾ ಸ್ತೋಷ್ಯಂತಿ ಸರ್ವತಃ ॥ ೫೪ ॥

ಇತ್ಥಂ ಯದಾ ಯದಾ ಬಾಧಾ ದಾನವೋತ್ಥಾ ಭವಿಷ್ಯತಿ ।
ತದಾ ತದಾಽವತೀರ್ಯಾಹಂ ಕರಿಷ್ಯಾಮ್ಯರಿಸಂಕ್ಷಯಮ್ ॥ ೫೫ ॥

ಇತಿ ಶ್ರೀಮಾರ್ಕಂಡೇಯಪುರಾಣೇ ಸಾವರ್ಣಿಕೇ ಮನ್ವಂತರೇ ದೇವೀಮಾಹಾತ್ಮ್ಯೇ
ನಾರಾಯಣೀಸ್ತುತಿರ್ನಾಮ ಏಕಾದಶೋಽಧ್ಯಾಯಃ

೪೮. ಅನಂತರ ಎಲ್ಲ ಲೋಕಗಳ ಜೀವ-ಕನ್ನೂ ನನ್ನ ದೇಹದಿಂದುಂಟಾದ, ಮಳೆಯು ಬರುವವರೆಗೂ ಪ್ರಾಣಗಳನ್ನು ಧರಿಸಿರಬಲ್ಲ, ಶಾಕಗಳಿಂದಲೇ (ಎಂದರೆ ಸೊಪ್ಪು-ಕಾಯಿ-ಪಲ್ಯಗಳಿಂದಲೇ) ಕಾಪಾಡುವೆನು.

೪೯. ಆಗ ನಾನು ಭೂಲೋಕದಲ್ಲಿ ಶಾಕಂಭರೀ ಎಂದು ಪ್ರಖ್ಯಾತಿಯನ್ನು ಹೊಂದುತ್ತೇನೆ.

೫೦. ಆಗಲೇ (ನಾನು) ದುರ್ಗಮನೆಂಬ ಮಹಾಸುರನನ್ನು ಕೊಲ್ಲುವೆನು. ಆದರಿಂದ ನನ್ನ ಹೆಸರು ದುರ್ಗಾದೇವಿಯೆಂದು ವಿಖ್ಯಾತವಾಗುತ್ತದೆ.

೫೧-೫೨. ಪುನಃ ನಾನು ಭಯಂಕರವಾದ ರೂಪವನ್ನು ಧರಿಸಿ ಹಿಮಾಚಲದಲ್ಲಿರುವ ಮುನಿಗಳನ್ನು ಕಾಪಾಡುವುದಕ್ಕಾಗಿ ರಾಕ್ಷಸರನ್ನು ಭಕ್ಷಿಸುತ್ತೇನೆ. ಆಗ ನನ್ನನ್ನು ಎಲ್ಲ ಮುನಿಗಳೂ ಬಾಗಿದ ದೇಹವುಳ್ಳವರಾಗಿ ಸ್ತುತಿಸುವರು. (ಶತ್ರುಭಯಂಕರವಾದ ರೂಪವನ್ನು ಧರಿಸಿದ್ದರಿಂದ) ನನ್ನ ಹೆಸರು ಭೀಮಾದೇವಿಯೆಂದು ಪ್ರಸಿದ್ಧವಾಗುವುದು.

೫೩-೫೪. (ಮುಂದೆ)ಯಾವಾಗ ಅರುಣನೆಂಬ (ಮಹಾಸುರನೊಬ್ಬನು) ಮೂರು ಲೋಕಗಳಿಗೂ ಮಹಾಪೀಡೆಯನ್ನುಂಟುಮಾಡುವನೋ, ಆಗ ನಾನು ಲೆಕ್ಕವಿಲ್ಲದಷ್ಟು ದುಂಬಿಗಳ ರೂಪವನ್ನು ಧರಿಸಿ ಮೂರು ಲೋಕಗಳ ಹಿತಕ್ಕಾಗಿ ಆ ಮಹಾರಾಕ್ಷಸನನ್ನು ಕೊಲ್ಲುವೆನು. ಆಗ ನನ್ನನ್ನು ಜನರು ಎಲ್ಲೆಡೆಗಳಲ್ಲಿಯೂ ಭ್ರಾಮರೀ (ಭ್ರಮರಾಂಬಾ) ಎಂದು ಸ್ತೋತ್ರಮಾಡುವರು.

೫೫. ಹೀಗೆ ಯಾವ ಯಾವ ಕಾಲದಲ್ಲಿ ದಾನವರಿಂದ (ಜನರಿಗೆ) ಪೀಡೆಯುಂಟಾಗುವುದೋ ಆಯಾ ಕಾಲದಲ್ಲೆಲ್ಲ ನಾನು ಅವತರಿಸಿ ಶತ್ರುನಾಶವನ್ನು ಮಾಡುವೆನು.

ಹೀಗೆ ಸಾವರ್ಣಿಕಮನ್ವಂತರಕ್ಕೆ ಸೇರಿದ ಶ್ರೀಮಾರ್ಕಂಡೇಯಪುರಾಣದ ದೇವೀಮಾಹಾತ್ಮ್ಯದಲ್ಲಿ 'ನಾರಾಯಣೀಸ್ತುತಿ' ಎಂಬ ಹನ್ನೊಂದನೆಯ ಅಧ್ಯಾಯವು ಮುಗಿಯಿತು.

# ದ್ವಾದಶೋಽಧ್ಯಾಯಃ

## ಫಲಸ್ತುತಿಃ

### ಧ್ಯಾನಮ್

ಓಮ್ । ವಿದ್ಯುದ್ದಾಮಸಮಪ್ರಭಾಂ ಮೃಗಪತಿಸ್ಕಂಧಸ್ಥಿತಾಂ ಭೀಷಣಾಂ, ಕನ್ಯಾಭಿಃ ಕರವಾಲಖೇಟವಿಲಸದ್ಧಸ್ತಾಭಿರಾಸೇವಿತಾಮ್ ।
ಹಸ್ತೈಶ್ಚಕ್ರಗದಾಽಸಿಖೇಟವಿಶಿಖಾಂಶ್ಚಾಪಂ ಗುಣಂ ತರ್ಜನೀಂ
ಬಿಭ್ರಾಣಾಮನಲಾತ್ಮಿಕಾಂ ಶಶಿಧರಾಂ ದುರ್ಗಾಂ ತ್ರಿನೇತ್ರಾಂ ಭಜೇ ॥

ದೇವ್ಯುವಾಚ ॥ ೧॥

ಏಭಿಃ ಸ್ತವೈಶ್ಚ ಮಾಂ ನಿತ್ಯಂ ಸ್ತೋಷ್ಯತೇ ಯಃ ಸಮಾಹಿತಃ ।
ತಸ್ಯಾಹಂ ಸಕಲಾಂ ಬಾಧಾಂ ನಾಶಯಿಷ್ಯಾಮ್ಯಸಂಶಯಮ್ ॥ ೨ ॥

ಮಧುಕೈಟಭನಾಶಂ ಚ ಮಹಿಷಾಸುರಘಾತನಮ್ ।
ಕೀರ್ತಯಿಷ್ಯಂತಿ ಯೇ ತದ್ವದ್ವಧಂ ಶುಂಭನಿಶುಂಭಯೋಃ ॥ ೩ ॥

ಅಷ್ಟಮ್ಯಾಂ ಚ ಚತುರ್ದಶ್ಯಾಂ ನವಮ್ಯಾಂ ಚೈಕಚೇತಸಃ ।
ಶ್ರೋಷ್ಯಂತಿ ಚೈವ ಯೇ ಭಕ್ತ್ಯಾ ಮಮ
ಮಾಹಾತ್ಮ್ಯಮುತ್ತಮಮ್ ॥ ೪॥

ನ ತೇಷಾಂ ದುಷ್ಕೃತಂ ಕಿಂಚಿದ್ದುಷ್ಕೃತೋತ್ಥಾ ನ ಚಾಪದಃ ।
ಭವಿಷ್ಯತಿ ನ ದಾರಿದ್ರ್ಯಂ ನ ಚೈವೇಷ್ಟವಿಯೋಜನಮ್ ॥ ೫ ॥

ಶತ್ರುತೋ ನ ಭಯಂ ತಸ್ಯ ದಸ್ಯುತೋ ವಾ ನ ರಾಜತಃ ।
ನ ಶಸ್ತ್ರಾನಲತೋಯೌಘಾತ್ ಕದಾಚಿತ್ಸಂಭವಿಷ್ಯತಿ ॥ ೬ ॥

ತಸ್ಮಾನ್ಮಮೈತನ್ಮಾಹಾತ್ಮ್ಯಂ ಪಠಿತವ್ಯಂ ಸಮಾಹಿತೈಃ ।
ಶ್ರೋತವ್ಯಂ ಚ ಸದಾ ಭಕ್ತ್ಯಾ ಪರಂ ಸ್ವಸ್ತ್ಯಯನಂ ಹಿ ತತ್ ॥ ೭ ॥

# ಹನ್ನೆರಡನೆಯ ಅಧ್ಯಾಯ

## ಫಲಸ್ತುತಿ

### ಧ್ಯಾನ

ಮಿಂಚಿಗೆ ಸಮನಾದ ಪ್ರಭೆಯುಳ್ಳ, ಮೃಗರಾಜನಾದ ಸಿಂಹದ ಹೆಗಲ ಮೇಲೆ ಕುಳಿತು ಭಯಂಕರಳಾಗಿರುವ, ಕೈಯಲ್ಲಿ ಕತ್ತಿಗುರಾಣಿಗಳನ್ನು ಧರಿಸಿರುವ, ಕನ್ಯೆಯರಿಂದ ಸೇವಿಸಲ್ಪಡುತ್ತಿರುವ, ತನ್ನ ಕೈಗಳಲ್ಲಿ ಚಕ್ರ, ಗದೆ, ಕತ್ತಿ, ಗುರಾಣಿ, ಬಾಣ, ಬಿಲ್ಲು, ಹಗ್ಗ, ತರ್ಜನೀಮುದ್ರೆ – ಇವುಗಳನ್ನು ಧರಿಸಿರುವ, ಅಗ್ನಿಮಯಳಾದ, ಚಂದ್ರಕಲೆಯನ್ನು ಧರಿಸಿರುವ, ತ್ರಿನೇತ್ರಳಾದ ದುರ್ಗಾ ದೇವಿಯನ್ನು ಭಜಿಸುತ್ತೇನೆ.

೧-೨. ದೇವಿಯು ಮುಂದುವರಿಸಿದಳು: ಯಾವನು ಏಕಾಗ್ರಚಿತ್ತನಾಗಿ ಈ ಸ್ತೋತ್ರಗಳ ಮೂಲಕ ನನ್ನನ್ನು ನಿತ್ಯವೂ ಸ್ತುತಿಸುವನೋ, ಅವನ ಎಲ್ಲ ಪೀಡೆಗಳನ್ನೂ ನಾನು ನಾಶಮಾಡುತ್ತೇನೆ. ಇದರಲ್ಲಿ ಸಂಶಯವಿಲ್ಲ.

೩-೫. ಹಾಗೆಯೇ ಯಾರು ಮಧುಕೈಟಭರ ನಾಶದ ವಿಷಯವನ್ನೂ, ಮಹಿಷಾಸುರನ ಸಂಹಾರದ ವಿಷಯವನ್ನೂ, ಶುಂಭನಿಶುಂಭರ ವಧೆಯ ವಿಷಯವನ್ನೂ ಹಾಡುತ್ತಾರೆಯೋ ಮತ್ತು ಯಾರು ಅಷ್ಟಮಿ-ನವಮಿ-ಚತುರ್ದಶಿಗಳಲ್ಲಿ ಭಕ್ತಿಯಿಂದ ನನ್ನ ಉತ್ಕೃಷ್ಟವಾದ ಮಾಹಾತ್ಮ್ಯವನ್ನು ಕೇಳುತ್ತಾರೆಯೋ ಅವರಿಗೆ ಯಾವ ದುಷ್ಕೃತದಿಂದಾಗುವ ಆಪತ್ತೂ ಇರದು. ದಾರಿದ್ರ್ಯವಾಗಲಿ ಬಂಧುಮಿತ್ರಾದಿಗಳಿಂದ ವಿಯೋಗವಾಗಲಿ ಇರುವುದಿಲ್ಲ.

೬. (ಅವರಿಗೆ) ಶತ್ರುಭಯವಾಗಲಿ, ರಾಜಭಯವಾಗಲಿ, ಶಸ್ತ್ರ - ಬೆಂಕಿ - ಜಲಪ್ರವಾದಿಗಳ ಭಯವಾಗಲಿ ಎಂದಿಗೂ ಸಂಭವಿಸುವುದಿಲ್ಲ.

೭. ಆದುದರಿಂದ ನನ್ನ ಈ ಮಾಹಾತ್ಮ್ಯವನ್ನು ಏಕಾಗ್ರಚಿತ್ತರಾಗಿ ಪಠಿಸಬೇಕು; ಯಾವಾಗಲೂ ಭಕ್ತಿಯಿಂದ ಕೇಳಬೇಕು; ಏಕೆಂದರೆ ಇದು ಪರಮ ಕಲ್ಯಾಣಕಾರಿಯು.

ಉಪಸರ್ಗಾನಶೇಷಾಂಸ್ತು ಮಹಾಮಾರೀಸಮುದ್ಭವಾನ್ ।
ತಥಾ ತ್ರಿವಿಧಮುತ್ಪಾತಂ ಮಾಹಾತ್ಮ್ಯಂ ಶಮಯೇನ್ಮಮ ॥ ೮ ॥

ಯತ್ರೈತತ್ ಪಠ್ಯತೇ ಸಮ್ಯಕ್ ನಿತ್ಯಮಾಯತನೇ ಮಮ ।
ಸದಾ ನ ತದ್ವಿಮೋಕ್ಷ್ಯಾಮಿ ಸಾನ್ನಿಧ್ಯಂ ತತ್ರ ಮೇ ಸ್ಥಿತಮ್ ॥ ೯ ॥

ಬಲಿಪ್ರದಾನೇ ಪೂಜಾಯಾಮಗ್ನಿಕಾರ್ಯೇ ಮಹೋತ್ಸವೇ ।
ಸರ್ವಂ ಮಮೈತಚ್ಚರಿತಮುಚ್ಚಾರ್ಯಂ ಶ್ರಾವ್ಯಮೇವ ಚ ॥ ೧೦ ॥

ಜಾನತಾಽಜಾನತಾ ವಾಽಪಿ ಬಲಿಪೂಜಾಂ ತಥಾ ಕೃತಾಮ್ ।
ಪ್ರತೀಕ್ಷಿಷ್ಯಾಮ್ಯಹಂ ಪ್ರೀತ್ಯಾ ವಹ್ನಿಹೋಮಂ ತಥಾ ಕೃತಮ್ ॥ ೧೧ ॥

ಶರತ್ಕಾಲೇ ಮಹಾಪೂಜಾ ಕ್ರಿಯತೇ ಯಾ ಚ ವಾರ್ಷಿಕೀ ।
ತಸ್ಯಾಂ ಮಮೈತನ್ಮಾಹಾತ್ಮ್ಯಂ ಶ್ರುತ್ವಾ ಭಕ್ತಿಸಮನ್ವಿತಃ ॥ ೧೨ ॥

ಸರ್ವಬಾಧಾವಿನಿರ್ಮುಕ್ತೋ ಧನಧಾನ್ಯಸುತಾನ್ವಿತಃ ।
ಮನುಷ್ಯೋ ಮತ್ಪ್ರಸಾದೇನ ಭವಿಷ್ಯತಿ ನ ಸಂಶಯಃ ॥ ೧೩ ॥

ಶ್ರುತ್ವಾ ಮಮೈತನ್ಮಾಹಾತ್ಮ್ಯಂ ತಥಾ ಚೋತ್ಪತ್ತಯಶ್ಶುಭಾಃ ।
ಪರಾಕ್ರಮಂ ಚ ಯುದ್ಧೇಷು ಜಾಯತೇ ನಿರ್ಭಯಃ
ಪುಮಾನ್ ॥ ೧೪ ॥

ರಿಪವಸ್ಸಂಕ್ಷಯಂ ಯಾಂತಿ ಕಲ್ಯಾಣಂ ಚೋಪಪದ್ಯತೇ ।
ನಂದತೇ ಚ ಕುಲಂ ಪುಂಸಾಂ ಮಾಹಾತ್ಮ್ಯಂ ಮಮ
ಶೃಣ್ವತಾಮ್ ॥ ೧೫ ॥

ಶಾಂತಿಕರ್ಮಣಿ ಸರ್ವತ್ರ ತಥಾ ದುಸ್ಸ್ವಪ್ನದರ್ಶನೇ ।
ಗ್ರಹಪೀಡಾಸು ಚೋಗ್ರಾಸು ಮಾಹಾತ್ಮ್ಯಂ ಶೃಣುಯಾನ್ಮಮ ॥ ೧೬ ॥

೮. ಮಹಾಮಾರಿಯಿಂದ ಉಂಟಾಗುವ ಎಲ್ಲ ಉಪದ್ರವಗಳನ್ನೂ ಮತ್ತು (ಆಧ್ಯಾತ್ಮಿಕಾದಿ) ಮೂರು ವಿಧದ ಉತ್ಪಾತಗಳನ್ನೂ ನನ್ನ ಮಾಹಾತ್ಮ್ಯವು ಶಮನಗೊಳಿಸುತ್ತದೆ.

೯. ನನ್ನ ದೇವಸ್ಥಾನದಲ್ಲಿ ಇದು ಚೆನ್ನಾಗಿ ಮತ್ತು ನಿತ್ಯವೂ ಪಠಿಸಲ್ಪಟ್ಟರೆ ದೇವಸ್ಥಾನವನ್ನು ನಾನೆಂದಿಗೂ ಬಿಡೆನು. ಅಲ್ಲಿ ನನ್ನ ಸಾನ್ನಿಧ್ಯವು ಸ್ಥಿರವಾಗಿರುತ್ತದೆ.

೧೦. ಬಲಿದಾನ, ಪೂಜೆ, ಅಗ್ನಿಕಾರ್ಯ, ಮಹೋತ್ಸವ – ಈ ಸಂದರ್ಭಗಳಲ್ಲಿ ನನ್ನ ಈ ಚರಿತ್ರೆಯೆಲ್ಲವನ್ನೂ ಪಠಿಸಬೇಕು ಮತ್ತು ಕೇಳಬೇಕು.

೧೧. ಜ್ಞಾನದಿಂದ ಕೂಡಿಯಾಗಲಿ ಅಥವಾ ಜ್ಞಾನವಿಲ್ಲದೆಯಾಗಲಿ ಭಕ್ತನು ಮಾಡುವ ಬಲಿಪೂಜೆಯನ್ನೂ, ಹೋಮವನ್ನೂ ನಾನು ಪ್ರೀತಿಯಿಂದ ಸ್ವೀಕರಿಸುತ್ತೇನೆ.

೧೨-೧೩. ಪ್ರತಿವರ್ಷದ ಶರನ್ನವರಾತ್ರಿಕಾಲದಲ್ಲಿ ನನ್ನ ಪೂಜೆಯನ್ನು ಮಾಡಿ, ಅದರ ಅಂಗವಾಗಿ ನನ್ನ ಈ ಮಾಹಾತ್ಮ್ಯವನ್ನು ಭಕ್ತಿಯಿಂದ ಕೂಡಿ ಕೇಳುವ ಮನುಷ್ಯನು ನನ್ನ ಅನುಗ್ರಹದಿಂದ ಸಕಲ ಕಷ್ಟಗಳಿಂದಲೂ ಬಿಡುಗಡೆ ಹೊಂದುವುದಲ್ಲದೆ ಧನ–ಧಾನ್ಯ–ಪುತ್ರಾದಿ ಸೌಖ್ಯಗಳನ್ನೂ ಹೊಂದುವ ನೆಂಬುದರಲ್ಲಿ ಯಾವ ಸಂಶಯವೂ ಇಲ್ಲ.

೧೪. ಯಾವ ಪುರುಷನು ನನ್ನ ಈ ಮಾಹಾತ್ಮ್ಯವನ್ನೂ ಮತ್ತು ಮಂಗಳಕರಗಳಾದ ನಾನಾ ಅವತಾರಗಳ ವಿಷಯಗಳನ್ನೂ, ಹಾಗೆಯೇ ಯುದ್ಧಗಳಲ್ಲಿ ನನ್ನ ಪರಾಕ್ರಮಗಳನ್ನೂ ಕೇಳುವನೋ ಅವನು ನಿರ್ಭಯ ನಾಗುತ್ತಾನೆ.

೧೫. ನನ್ನ ಮಾಹಾತ್ಮ್ಯವನ್ನು ಕೇಳುವ ಮನುಷ್ಯರ ಶತ್ರುಗಳು ನಾಶವಾಗುತ್ತಾರೆ ಮತ್ತು ಅವರಿಗೆ ಕಲ್ಯಾಣವುಂಟಾಗುತ್ತದೆ. ಹಾಗೆಯೇ ಅವರ ವಂಶವೇ ಸಂತೋಷವನ್ನು ಹೊಂದುತ್ತದೆ.

೧೬. ಶಾಂತಿಕರ್ಮಗಳನ್ನು ಮಾಡುವ ಸಂದರ್ಭಗಳಲ್ಲಿ, ಕೆಟ್ಟಕನಸುಗಳು ಬಿದ್ದಾಗ ಮತ್ತು ಉಗ್ರವಾದ ಗ್ರಹಗತಿಯಿಂದ ಪೀಡೆಗಳುಂಟಾದಾಗ ನನ್ನ ಮಾಹಾತ್ಮ್ಯವನ್ನು ಕೇಳಬೇಕು.

ಉಪಸರ್ಗಾಶ್ಶಮಂ ಯಾಂತಿ ಗ್ರಹಪೀಡಾಶ್ಚ ದಾರುಣಾಃ ।
ದುಸ್ಸ್ವಪ್ನಂ ಚ ನೃಭಿರ್ದೃಷ್ಟಂ ಸುಸ್ವಪ್ನಮುಪಜಾಯತೇ ॥ ೧೭ ॥

ಬಾಲಗ್ರಹಾಭಿಭೂತಾನಾಂ ಬಾಲಾನಾಂ ಶಾಂತಿಕಾರಕಮ್ ।
ಸಂಘಾತಭೇದೇ ಚ ನೃಣಾಂ ಮೈತ್ರೀಕರಣಮುತ್ತಮಮ್ ॥ ೧೮ ॥

ದುರ್ವೃತ್ತಾನಾಮಶೇಷಾಣಾಂ ಬಲಹಾನಿಕರಂ ಪರಮ್ ।
ರಕ್ಷೋಭೂತಪಿಶಾಚಾನಾಂ ಪಠನಾದೇವ ನಾಶನಮ್ ॥ ೧೯ ॥

ಸರ್ವಂ ಮಮೈತನ್ಮಾಹಾತ್ಮ್ಯಂ ಮಮ ಸನ್ನಿಧಿಕಾರಕಮ್ ।
ಪಶುಪುಷ್ಪಾರ್ಘ್ಯಧೂಪೈಶ್ಚ ಗಂಧದೀಪೈಸ್ತಥೋತ್ತಮೈಃ ॥ ೨೦ ॥

ವಿಪ್ರಾಣಾಂ ಭೋಜನೈರ್ಹೋಮೈಃ ಪ್ರೋಕ್ಷಣೀಯೈರಹರ್ನಿಶಮ್ ।
ಅನ್ಯೈಶ್ಚ ವಿವಿಧೈರ್ಭೋಗೈಃ ಪ್ರದಾನೈರ್ವತ್ಸರೇಣ ಯಾ ॥ ೨೧ ॥

ಪ್ರೀತಿರ್ಮೇ ಕ್ರಿಯತೇ ಸಾಽಸ್ಮಿನ್ ಸಕೃದುಚ್ಚರಿತೇ ಶ್ರುತೇ ।
ಶ್ರುತಂ ಹರತಿ ಪಾಪಾನಿ ತಥಾಽಽರೋಗ್ಯಂ ಪ್ರಯಚ್ಛತಿ ॥ ೨೨ ॥

ರಕ್ಷಾಂ ಕರೋತಿ ಭೂತೇಭ್ಯೋ ಜನ್ಮನಾಂ ಕೀರ್ತನಂ ಮಮ ।
ಯುದ್ಧೇಷು ಚರಿತಂ ಯನ್ಮೇ ದುಷ್ಟದೈತ್ಯನಿಬರ್ಹಣಮ್ ॥ ೨೩ ॥

ತಸ್ಮಿಂಛ್ರುತೇ ವೈರಿಕೃತಂ ಭಯಂ ಪುಂಸಾಂ ನ ಜಾಯತೇ ॥ ೨೪ ॥

೧೭. (ಹೀಗೆ ಕೇಳುವವರಿಗೆ) ಉಪದ್ರವಗಳೂ, ಗ್ರಹಪೀಡೆಗಳೂ ಶಾಂತವಾಗುತ್ತವೆ. ಇಂಥ ಮನುಷ್ಯರಿಂದ ನೋಡಲ್ಪಟ್ಟ ದುಸ್ಸ್ವಪ್ನಗಳೂ ಶುಭಸೂಚಕ ಸ್ವಪ್ನಗಳಂತೆಯೇ ಪರಿಣಾಮಹೊಂದುತ್ತವೆ.

೧೮. (ನನ್ನ ಮಹಾತ್ಮ್ಯದ ಪಠನಶ್ರವಣಾದಿಗಳು) ಬಾಲಗ್ರಹಗಳಿಂದ ಪೀಡಿತರಾದ ಮಕ್ಕಳಿಗೆ ಶಾಂತಿಯನ್ನುಂಟುಮಾಡುತ್ತವೆ. (ಒಟ್ಟಿಗೆ ಕೆಲಸ ಮಾಡುತ್ತಿರುವ) ಮಾನವರ ಐಕಮತ್ಯಕ್ಕೆ ಹಾನಿಯೊದಗಿದರೆ ಅವರಲ್ಲಿ ಉತ್ತಮ ಸ್ನೇಹವು ಬೆಳೆಯುವಂತೆ ಮಾಡುತ್ತವೆ.

೧೯. (ಇದು) ದುಷ್ಟಕಾರ್ಯಗಳಲ್ಲಿ ತೊಡಗಿರುವವರೆಲ್ಲರ ಶಕ್ತಿಯನ್ನೂ ಅತ್ಯಂತವಾಗಿ ಕುಂದಿಸುತ್ತದೆ. ದುಷ್ಟದೈವ-ಭೂತ-ಪಿಶಾಚಾದಿಗಳನ್ನು ಕೇವಲ (ನನ್ನ ಮಾಹಾತ್ಮ್ಯದ) ಪಠನವೇ ನಾಶಗೊಳಿಸುತ್ತದೆ.

೨೦-೨೨. ನನ್ನ ಈ ಮಾಹಾತ್ಮ್ಯವೆಲ್ಲವೂ ನನ್ನ ಸನ್ನಿಧಿಯನ್ನು (ವಿಶೇಷ ರೀತಿಯಲ್ಲಿ) ಉಂಟುಮಾಡತಕ್ಕದ್ದು. ಪಶುಬಲಿಯಿಂದಾಗಲಿ, ಹೂವು, ಅರ್ಘ್ಯ, ಧೂಪ, ಗಂಧ, ದ್ರವ್ಯ, ದೀಪ ಮೊದಲಾದ ಉತ್ತಮ ವಸ್ತುಗಳಿಂದಾಗಲಿ, ಬ್ರಾಹ್ಮಣಭೋಜನಗಳಿಂದಾಗಲಿ, ಹೋಮಗಳಿಂದಾಗಲಿ, ಚಿಮುಕಿಸಲು ಯೋಗ್ಯವಾದ (ಗಂಗಾಜಲಾದಿ) ದ್ರವ್ಯಗಳಿಂದಾಗಲಿ, ಇತರ ಬಗೆಬಗೆಯ ಭೋಗವಸ್ತುಗಳಿಂದಾಗಲಿ, ದಾನಾದಿಗಳಿಂದಾಗಲಿ, ಹಗಲಿರುಳೂ (ನನ್ನನ್ನು ತೃಪ್ತಿಪಡಿಸುವುದರ ಮೂಲಕ) ನನ್ನಲ್ಲಿ ಯಾವ ಪ್ರೀತಿಯುಂಟಾಗುವುದೋ ಅದು ಈ ಮಹಾತ್ಮ್ಯವನ್ನು ಒಂದೇ ಬಾರಿ ಪಠನ ಮಾಡುವುದರಿಂದ ಅಥವಾ ಕೇಳುವುದರಿಂದ ಉಂಟಾಗುತ್ತದೆ. ಹೀಗೆ ಕೇಳಲ್ಪಟ್ಟ ಇದು ಪಾಪಗಳನ್ನು ಹೋಗಲಾಡಿಸುತ್ತದೆ ಮತ್ತು ಆರೋಗ್ಯವನ್ನೂ ಕೊಡುತ್ತದೆ.

೨೩. ನನ್ನ ವಿವಿಧ ಜನ್ಮಗಳ ಕೀರ್ತನೆಯು ಭೂತಗಳಿಂದ ರಕ್ಷಣೆಯನ್ನು ಮಾಡುತ್ತದೆ. ಯುದ್ಧಗಳಲ್ಲಿ ದುಷ್ಟರಾಕ್ಷಸರ ಸಂಹಾರ ರೂಪವಾದ ಯಾವ ನನ್ನ ಚರಿತ್ರೆಯಿರುವುದೋ–

೨೪. ಅದನ್ನು ಕೇಳಿದರೆ ಪುರುಷನಿಗೆ ವೈರಿಗಳಿಂದಾಗುವ ಭಯವು ಉಂಟಾಗುವುದೇ ಇಲ್ಲ.

ಯುಷ್ಮಾಭಿಸ್ಸ್ತುತಯೋ ಯಾಶ್ಚ ಯಾಶ್ಚ ಬ್ರಹ್ಮರ್ಷಿಭಿಃ ಕೃತಾಃ ।
ಬ್ರಹ್ಮಣಾ ಚ ಕೃತಾಸ್ತಾಸ್ತು ಪ್ರಯಚ್ಛಂತಿ ಶುಭಾಂ ಮತಿಮ್ ॥ ೨೫ ॥

ಅರಣ್ಯೇ ಪ್ರಾಂತರೇ ವಾಽಪಿ ದಾವಾಗ್ನಿಪರಿವಾರಿತಃ ।
ದಸ್ಯುಭಿರ್ವಾ ವೃತಶ್ಶೂನ್ಯೇ ಗೃಹೀತೋ ವಾಽಪಿ ಶತ್ರುಭಿಃ ॥ ೨೬ ॥

ಸಿಂಹವ್ಯಾಘ್ರಾನುಯಾತೋ ವಾ ವನೇ ವಾ ವನಹಸ್ತಿಭಿಃ ।
ರಾಜ್ಞಾ ಕ್ರುದ್ಧೇನ ಚಾಜ್ಞಪ್ತೋ ವಧ್ಯೋ ಬಂಧಗತೋಽಪಿ ವಾ ॥ ೨೭ ॥

ಆಘೂರ್ಣಿತೋವಾ ವಾತೇನ ಸ್ಥಿತಃ ಪೋತೇ ಮಹಾರ್ಣವೇ ।
ಪತತ್ಸು ಚಾಪಿ ಶಸ್ತ್ರೇಷು ಸಂಗ್ರಾಮೇ ಭೃಶದಾರುಣೇ ॥ ೨೮ ॥

ಸರ್ವಬಾಧಾಸು ಘೋರಾಸು ವೇದನಾಭ್ಯರ್ದಿತೋಽಪಿ ವಾ ।
ಸ್ಮರನ್ಮಮೈತಚ್ಚರಿತಂ ನರೋ ಮುಚ್ಯೇತ ಸಂಕಟಾತ್ ॥ ೨೯ ॥

ಮಮ ಪ್ರಭಾವಾತ್ ಸಿಂಹಾದ್ಯಾ ದಸ್ಯವೋ ವೈರಿಣಸ್ತಥಾ ।
ದೂರಾದೇವ ಪಲಾಯಂತೇ ಸ್ಮರತಶ್ಚರಿತಂ ಮಮ ॥ ೩೦ ॥

ಋಷಿರುವಾಚ ॥ ೩೧ ॥

ಇತ್ಯುಕ್ತ್ವಾ ಸಾ ಭಗವತೀ ಚಂಡಿಕಾ ಚಂಡವಿಕ್ರಮಾ ।
ಪಶ್ಯತಾಮೇವ ದೇವಾನಾಂ ತತ್ರೈವಾಂತರಧೀಯತ ॥ ೩೨ ॥

ತೇಽಪಿ ದೇವಾ ನಿರಾತಂಕಾಃ ಸ್ವಾಧಿಕಾರನ್ಯಥಾ ಪುರಾ ।
ಯಜ್ಞಭಾಗಭುಜಸ್ಸರ್ವೇ ಚಕ್ರುರ್ವಿನಿಹತಾರಯಃ ॥ ೩೩ ॥

ದೈತ್ಯಾಶ್ಚ ದೇವ್ಯಾ ನಿಹತೇ ಶುಂಭೇ ದೇವರಿಪೌ ಯುಧಿ ।
ಜಗದ್ವಿಧ್ವಂಸಿನಿ ತಸ್ಮಿನ್ ಮಹೋಗ್ರೇಽತುಲವಿಕ್ರಮೇ ॥ ೩೪ ॥

ನಿಶುಂಭೇ ಚ ಮಹಾವೀರ್ಯೇ ಶೇಷಾಃ ಪಾತಾಲಮಾಯಯುಃ ॥ ೩೫ ॥

೨೫. (ನನ್ನನ್ನು ಕುರಿತು) ನಿಮ್ಮಿಂದ ಮಾಡಲ್ಪಟ್ಟ ಸ್ತೋತ್ರಗಳು ಯಾವುವಿವೆಯೋ, ಬ್ರಹ್ಮರ್ಷಿಗಳಿಂದ ಮತ್ತು ಚತುರ್ಮುಖನಿಂದ ಮಾಡಲ್ಪಟ್ಟ ಯಾವ ಸ್ತುತಿಗಳಿವೆಯೋ ಅವೆಲ್ಲವೂ ಶುಭಬುದ್ಧಿಯನ್ನು ಕೊಡುತ್ತವೆ.

೨೬-೨೮. ಕಾಡಿನಲ್ಲಿಯೂ, ಬೆಂಗಾಡಿನಲ್ಲಿಯೂ, ಕಾಳ್ಗಿಚ್ಚಿನಿಂದ ಸುತ್ತುವರಿಯಲ್ಪಟ್ಟವನು, ಕಳ್ಳರಿಂದ ನಿರ್ಜನ ಪ್ರದೇಶದಲ್ಲಿ ಆವರಿಸಲ್ಪಟ್ಟವನು, ಶತ್ರುಗಳಿಂದ ಸೆರೆ ಹಿಡಿಯಲ್ಪಟ್ಟವನು, ಕಾಡಿನಲ್ಲಿ ಸಿಂಹ, ಹುಲಿ, ಕಾಡಾನೆ–ಇವುಗಳಿಂದ ಬೆನ್ನಟ್ಟಲ್ಪಟ್ಟಿರುವವನು, ಕೋಪಗೊಂಡ ದೊರೆಯಿಂದ ಗಲ್ಲಿಗಾಗಲಿ, ಬಂಧನಕ್ಕಾಗಲಿ ಗುರಿಯಾಗುವವನು, ಮಹಾಸಾಗರದಲ್ಲಿ ಸಣ್ಣ ತೆಪ್ಪದಲ್ಲಿದ್ದು ಸುಂಟರಗಾಳಿಗೆ ಸಿಕ್ಕಿರುವವನು, ತುಂಬ ಘೋರವಾದ ಯುದ್ಧದಲ್ಲಿ ಆಯುಧಗಳು (ಮೇಲೆ ಬೀಳುತ್ತಿರುವವನು), ಭಯಂಕರವಾದ ಎಲ್ಲ ಬಾಧೆಗಳಲ್ಲಿ (ಸಿಕ್ಕಿರುವವನು), ಅತಿಯಾದ ನೋವಿನಿಂದ ಸಂಕಟಪಡುತ್ತಿರುವವನು – ಇಂಥ ಮನುಷ್ಯರೆಲ್ಲರೂ ನನ್ನ ಚರಿತ್ರೆಯನ್ನು ಸ್ಮರಿಸುತ್ತ ಸಂಕಟಗಳಿಂದ ಮುಕ್ತರಾಗುವವರು.

೩೦. ನನ್ನ ಚರಿತ್ರೆಯನ್ನು ಸ್ಮರಿಸುತ್ತಿರುವವನಿಂದ ಸಿಂಹಾದಿ ಕ್ರೂರ ಮೃಗಗಳು, ಕಳ್ಳರು, ಶತ್ರುಗಳು–ನನ್ನ ಪ್ರಭಾವದಿಂದ–ದೂರದಿಂದಲೇ ಪಲಾಯನ ಮಾಡುತ್ತಾರೆ.

೩೧-೩೨. ಸುಮೇಧಋಷಿಯು ಇಂತೆಂದನು: ಪ್ರಚಂಡಪರಾಕ್ರಮ ಶಾಲಿನಿಯಾದ ಆ ಚಂಡಿಕಾಭಗವತಿಯು ದೇವತೆಗಳು ನೋಡುನೋಡುತ್ತಿದ್ದಂತೆಯೇ ಅಲ್ಲಿಯೇ ಅಂತರ್ಧಾನಳಾದಳು.

೩೩. ಶತ್ರುಗಳು ಸಂಹರಿಸಲ್ಪಟ್ಟಿದ್ದರಿಂದ ಆ ದೇವತೆಗಳೂ ಕೂಡ ನಿರಾತಂಕರಾಗಿ ಹಿಂದಿನಂತೆಯೇ ತಮ್ಮ ಪದವಿಗಳನ್ನು ವಹಿಸಿಕೊಂಡು ಯಜ್ಞಯಾಗಾದಿಗಳಲ್ಲಿ ತಮ್ಮ ಭಾಗದ ಹವಿಸ್ಸನ್ನು ಪಡೆಯುತ್ತಿದ್ದರು.

೩೪-೩೫. ಜಗತ್ತನ್ನೇ ನಾಶಮಾಡುತ್ತಿದ್ದ, ಅತಿಕ್ರೂರನೂ ಪರಾಕ್ರಮಿಯೂ, ದೇವತೆಗಳ ಶತ್ರುವೂ ಆದ ಶುಂಭನೂ, ಮಹಾವೀರ್ಯವಂತನಾದ ನಿಶುಂಭನೂ ಆ ಯುದ್ಧದಲ್ಲಿ ದೇವಿಯಿಂದ ಹತರಾದಮೇಲೆ ಕಳೆದುಳಿದ ರಾಕ್ಷಸರು ಪಾತಾಳವನ್ನು ಸೇರಿಕೊಂಡರು.

ಏವಂ ಭಗವತೀದೇವೀ ಸಾ ನಿತ್ಯಾಽಪಿ ಪುನಃ ಪುನಃ ।
ಸಂಭೂಯ ಕುರುತೇ ಭೂಪ ಜಗತಃ ಪರಿಪಾಲನಮ್ ॥ ೩೬ ॥

ತಯೈತನ್ಮೋಹ್ಯತೇ ವಿಶ್ವಂ ಸೈವ ವಿಶ್ವಂ ಪ್ರಸೂಯತೇ ।
ಸಾ ಯಾಚಿತಾ ಚ ವಿಜ್ಞಾನಂ ತುಷ್ಟಾ ಋದ್ಧಿಂ ಪ್ರಯಚ್ಛತಿ ॥ ೩೭ ॥

ವ್ಯಾಪ್ತಂ ತಯೈತತ್ ಸಕಲಂ ಬ್ರಹ್ಮಾಂಡಂ ಮನುಜೇಶ್ವರ ।
ಮಹಾಕಾಲ್ಯಾ ಮಹಾಕಾಲೇ ಮಹಾಮಾರೀಸ್ವರೂಪಯಾ ॥ ೩೮ ॥

ಸೈವ ಕಾಲೇ ಮಹಾಮಾರೀ ಸೈವ ಸೃಷ್ಟಿರ್ಭವತ್ಯಜಾ ।
ಸ್ಥಿತಿಂ ಕರೋತಿ ಭೂತಾನಾಂ ಸೈವ ಕಾಲೇ ಸನಾತನೀ ॥ ೩೯ ॥

ಭವಕಾಲೇ ನೃಣಾಂ ಸೈವ ಲಕ್ಷ್ಮೀರ್ವೃದ್ಧಿಪ್ರದಾ ಗೃಹೇ ।
ಸೈವಾಭಾವೇ ತಥಾಽಲಕ್ಷ್ಮೀರ್ವಿನಾಶಾಯೋಪಜಾಯತೇ ॥ ೪೦ ॥

ಸ್ತುತಾ ಸಂಪೂಜಿತಾ ಪುಷ್ಪೈರ್ಧೂಪಗಂಧಾದಿಭಿಸ್ತಥಾ ।
ದದಾತಿ ವಿತ್ತಂ ಪುತ್ರಾಂಶ್ಚ ಮತಿಂ ಧರ್ಮೇ ಗತಿಂ ಶುಭಾಮ್ ॥ ೪೧ ॥

ಇತಿ ಶ್ರೀಮಾರ್ಕಂಡೇಯಪುರಾಣೇ ಸಾವರ್ಣಿಕೇ ಮನ್ವಂತರೇ ದೇವೀಮಾಹಾತ್ಮ್ಯೇ
ಫಲಸ್ತುತಿರ್ನಾಮ ದ್ವಾದಶೋಽಧ್ಯಾಯಃ

೩೬. ಎಲೈ ಭೂಪತಿಯೇ, ಹೀಗೆ ಆ ಭಗವತೀದೇವಿಯು (ಹುಟ್ಟು ಸಾವುಗಳಿಲ್ಲದೆ) ನಿತ್ಯಳಾದರೂ, ಮತ್ತೆ ಮತ್ತೆ ಅವತರಿಸಿ ಜಗತ್ತಿನ ಪಾಲನೆಯನ್ನು ಮಾಡುತ್ತಾಳೆ.

೩೭. ಅವಳಿಂದಲೇ ಈ ವಿಶ್ವವು ಮೋಹಗೊಂಡಿರುತ್ತದೆ. ಅವಳೇ (ಈ) ವಿಶ್ವವನ್ನು ಪ್ರಸವಿಸಿರುತ್ತಾಳೆ. ಬೇಡಿದರೆ ಅವಳು ವಿಶೇಷಜ್ಞಾನವನ್ನೂ, ಸಂತುಷ್ಟಳಾದರೆ ಸಮೃದ್ಧಿಯನ್ನೂ ಕೊಡುತ್ತಾಳೆ.

೩೮. ಎಲೈ ರಾಜನೇ, ಈ ಜಗತ್ತೆಲ್ಲವೂ ಮಹಾಪ್ರಳಯಕಾಲದಲ್ಲಿ ಮಹಾಮಾರೀಸ್ವರೂಪಳೂ, ಮಹಾಕಾಳಿಯೂ ಆದ ಅವಳಿಂದ ವ್ಯಾಪಿಸಲ್ಪಟ್ಟಿದೆ.

೩೯. ಪ್ರಳಯಕಾಲದಲ್ಲಿ ಅವಳೇ ಮಹಾಮಾರಿಯು. ಹುಟ್ಟಿಲ್ಲದವಳಾದರೂ ಅವಳೇ (ಸೃಷ್ಟಿಕಾಲದಲ್ಲಿ) ಜಗತ್ತಾಗುತ್ತಾಳೆ. ಸನಾತನಿಯಾದ ಅವಳೇ ಸ್ಥಿತಿಕಾಲದಲ್ಲಿ ಪ್ರಾಣಿಗಳ ರಕ್ಷಣೆಯನ್ನೂ ಮಾಡುತ್ತಾಳೆ.

೪೦. ಮನುಷ್ಯರ ಅಭ್ಯುದಯ ಕಾಲದಲ್ಲಿ ಅವಳೇ ಮನೆಯಲ್ಲಿ ಸಮೃದ್ಧಿಯನ್ನುಂಟುಮಾಡುವ ಲಕ್ಷ್ಮಿಯಾಗಿರುತ್ತಾಳೆ. ಹಾಗೆಯೇ ಅವಳೇ ಅವನತಿಯ ಕಾಲದಲ್ಲಿ ಅಲಕ್ಷ್ಮಿಯಾಗಿ (ಅವುಗಳ) ವಿನಾಶವನ್ನೂ ಉಂಟುಮಾಡುತ್ತಾಳೆ.

೪೧. ಅವಳನ್ನು ಸ್ತೋತ್ರಮಾಡಿದರೆ, ಪುಷ್ಪ, ಧೂಪ, ಗಂಧ ಮೊದಲಾದುವುಗಳಿಂದ ಪೂಜಿಸಿದರೆ, ಐಶ್ವರ್ಯವನ್ನೂ, ಸತ್ಪುತ್ರರನ್ನೂ, ಧರ್ಮಬುದ್ಧಿಯನ್ನೂ (ಸತ್ತಮೇಲೆ) ಶುಭಗತಿಯನ್ನೂ ಕೊಡುತ್ತಾಳೆ.

ಹೀಗೆ ಸಾವರ್ಣಿಕಮನ್ವಂತರಕ್ಕೆ ಸೇರಿದ ಮಾರ್ಕಂಡೇಯಪುರಾಣದ ದೇವೀಮಹಾತ್ಮ್ಯದಲ್ಲಿ 'ಫಲಸ್ತುತಿ' ಎಂಬ ಹನ್ನೆರಡನೆಯ ಅಧ್ಯಾಯವು ಮುಗಿಯಿತು.

# ತ್ರಯೋದಶೋऽಧ್ಯಾಯಃ

## ಸುರಥವೈಶ್ಯಯೋರ್ವರಪ್ರದಾನಮ್

### ಧ್ಯಾನಮ್

ಓಮ್ । ಬಾಲಾರ್ಕಮಂಡಲಾಭಾಸಾಂ ಚತುರ್ಬಾಹುಂ ತ್ರಿಲೋಚನಾಮ್ । ಪಾಶಾಂಕುಶವರಾಭೀತೀರ್ಧಾರಯಂತೀಂ ಶಿವಾಂ ಭಜೇ ॥

ಋಷಿರುವಾಚ ॥ ೧ ॥

ಏತತ್ತೇ ಕಥಿತಂ ಭೂಪ ದೇವೀಮಾಹಾತ್ಮ್ಯಮುತ್ತಮಮ್ ।
ಏವಂ ಪ್ರಭಾವಾ ಸಾ ದೇವೀ ಯಯೇದಂ ಧಾರ್ಯತೇ ಜಗತ್ ॥ ೨ ॥

ವಿದ್ಯಾ ತಥೈವ ಕ್ರಿಯತೇ ಭಗವದ್ವಿಷ್ಣುಮಾಯಯಾ ।
ತಯಾ ತ್ವಮೇಷ ವೈಶ್ಯಶ್ಚ ತಥೈವಾನ್ಯೇ ವಿವೇಕಿನಃ ॥ ೩ ॥

ಮೋಹ್ಯಂತೇ ಮೋಹಿತಾಶ್ಚೈವ ಮೋಹಮೇಷ್ಯಂತಿ ಚಾಪರೇ ।
ತಾಮುಪೈಹಿ ಮಹಾರಾಜ ಶರಣಂ ಪರಮೇಶ್ವರೀಮ್ ॥ ೪ ॥

ಆರಾಧಿತಾ ಸೈವ ನೃಣಾಂ ಭೋಗಸ್ವರ್ಗಾಪವರ್ಗದಾ ॥ ೫ ॥

ಮಾರ್ಕಂಡೇಯ ಉವಾಚ ॥ ೬ ॥

ಇತಿ ತಸ್ಯ ವಚಶ್ಶ್ರುತ್ವಾ ಸುರಥಃ ಸ ನರಾಧಿಪಃ ॥ ೭ ॥

ಪ್ರಣಿಪತ್ಯ ಮಹಾಭಾಗಂ ತಮೃಷಿಂ ಸಂಶಿತವ್ರತಮ್ ।
ನಿರ್ವಿಣ್ಣೋऽತಿಮಮತ್ವೇನ ರಾಜ್ಯಾಪಹರಣೇನ ಚ ॥ ೮ ॥

ಜಗಾಮ ಸದ್ಯಸ್ತಪಸೇ ಸ ಚ ವೈಶ್ಯೋ ಮಹಾಮುನೇ ।
ಸಂದರ್ಶನಾರ್ಥಮಂಬಾಯಾ ನದೀಪುಲಿನಸಂಸ್ಥಿತಃ ॥ ೯ ॥

# ಹದಿಮೂರನೆಯ ಅಧ್ಯಾಯ

## ಸುರಥ-ವೈಶ್ಯರಿಗೆ ದೇವಿಯಿಂದ ವರಪ್ರದಾನ

### ಧ್ಯಾನ

ಬಾಲಸೂರ್ಯಮಂಡಲದಂತೆ ಕಾಂತಿಯನ್ನುಳ್ಳ, ಚತುರ್ಬಾಹು ಯುಕ್ತಳಾದ, ತ್ರಿಲೋಚನೆಯಾದ, ಪಾಶ, ಅಂಕುಶ, ವರಮುದ್ರೆ, ಅಭಯ ಮುದ್ರೆ–ಇವುಗಳನ್ನು ಧರಿಸಿರುವ ಶಿವೆಯನ್ನು ಭಜಿಸುತ್ತೇನೆ.

೧-೨. ಸುಮೇಧನಿಂತೆಂದನು: ಎಲೈ ರಾಜನೆ, ಉತ್ತಮವಾದ ಈ ದೇವೀಮಾಹಾತ್ಮ್ಯವು ನಿನಗೆ (ಹೀಗೆ) ಹೇಳಲ್ಪಟ್ಟಿತು. ಯಾವಳಿಂದ (ಈ) ಜಗತ್ತು ಧರಿಸಲ್ಪಟ್ಟಿರುವುದೋ ಆ ದೇವಿಯು ಇಂಥ ಮಹಿಮೆಯುಳ್ಳವಳು.

೩-೪. ಹಾಗೆಯೇ ಭಗವಂತನಾದ ವಿಷ್ಣುವಿನ ಮಾಯೆಯಿಂದ ತತ್ತ್ವವಿವೇಕಜ್ಞಾನವೂ ಅನುಗ್ರಹಿಸಲ್ಪಡುತ್ತದೆ. ಅವಳಿಂದಲೇ ನೀನೂ ಈ ವೈಶ್ಯನೂ ಮತ್ತು ಇತರ ವಿವೇಕಿಗಳು ಮೋಹಕ್ಕೆ ಗುರಿಯಾಗಿರುವಿರಿ. ಹೀಗೆಯೇ ಹಿಂದೆಯೂ ಜನರು ಮೋಹಿತರಾಗಿದ್ದರು, ಮುಂದೆಯೂ ಮೋಹಗೊಳ್ಳುವರು. ಮಹಾರಾಜನೆ, ಆ ಪರಮೇಶ್ವರಿಯನ್ನೇ ಶರಣುಹೊಂದು. ಆರಾಧಿತಳಾದರೆ ಅವಳೇ ಮಾನವರಿಗೆ ಭೋಗಗಳನ್ನೂ, ಸ್ವರ್ಗವನ್ನೂ, ಮೋಕ್ಷವನ್ನೂ ಕೊಡುತ್ತಾಳೆ.

೫-೬. ಮಾರ್ಕಂಡೇಯನು ಹೇಳಿದನು: ಸುಮೇಧ ಋಷಿಯ ಮಾತನ್ನು ಕೇಳಿ ಆ ಸುರಥ ಮಹಾರಾಜನು ನಿಯಮನಿಷ್ಠನಾದ ಆ ಋಷಿಯ ಪಾದಗಳಲ್ಲಿ ಬಿದ್ದು ನಮಸ್ಕರಿಸಿ, ಅತಿಯಾದ ಮಮತ್ವವೆಂಬ ಕಾರಣದಿಂದಲೂ, ರಾಜ್ಯಾಪಹರಣವೆಂಬ ಕಾರಣದಿಂದಲೂ, ದುಃಖಿತನಾಗಿ ಕೂಡಲೆ ತಪಸ್ಸನ್ನು ಮಾಡಲು ತೆರಳಿದನು. ಎಲೈ ಮಹಾಮುನಿಯೆ, ಆ ವೈಶ್ಯನೂ ಕೂಡ ಅಂಬಿಕೆಯನ್ನು ದರ್ಶಿಸುವ ಇಚ್ಛೆಯಿಂದ ನದಿಯ ಮರಳು ದಂಡೆಯಲ್ಲಿ ನೆಲಸಿದನು.

ಸ ಚ ವೈಶ್ಯಸ್ತಪಸ್ತೇಪೇ ದೇವೀಸೂಕ್ತಂ ಪರಂ ಜಪನ್ ।
ತೌ ತಸ್ಮಿನ್ಪುಲಿನೇ ದೇವ್ಯಾಃ ಕೃತ್ವಾ ಮೂರ್ತಿಂ
ಮಹೀಮಯೀಮ್ ॥ ೧೦ ॥

ಅರ್ಹಣಾಂ ಚಕ್ರತುಸ್ತಸ್ಯಾಃ ಪುಷ್ಪಧೂಪಾಗ್ನಿತರ್ಪಣೈಃ ।
ನಿರಾಹಾರೌ ಯತಾಹಾರೌ ತನ್ಮನಸ್ಕೌ ಸಮಾಹಿತೌ ॥ ೧೧ ॥

ದದತುಸ್ತೌ ಬಲಿಂ ಚೈವ ನಿಜಗಾತ್ರಾಸೃಗುಕ್ಷಿತಮ್ ।
ಏವಂ ಸಮಾರಾಧಯತೋಸ್ತ್ರಿಭಿರ್ವರ್ಷೈರ್ಯತಾತ್ಮನೋಃ ॥ ೧೨ ॥

ಪರಿತುಷ್ಟಾ ಜಗದ್ಧಾತ್ರೀ ಪ್ರತ್ಯಕ್ಷಂ ಪ್ರಾಹ ಚಂಡಿಕಾ ॥ ೧೩ ॥

ದೇವ್ಯುವಾಚ ॥ ೧೪ ॥

ಯತ್ಪ್ರಾರ್ಥ್ಯತೇ ತ್ವಯಾ ಭೂಪ ತ್ವಯಾ ಚ ಕುಲನಂದನ ॥ ೧೫ ॥

ಮತ್ತಸ್ತತ್ಪ್ರಾಪ್ಯತಾಂ ಸರ್ವಂ ಪರಿತುಷ್ಟಾ ದದಾಮಿ ತತ್ ॥ ೧೬ ॥

ಮಾರ್ಕಂಡೇಯ ಉವಾಚ ॥ ೧೭ ॥

ತತೋ ವವ್ರೇ ನೃಪೋ ರಾಜ್ಯಮವಿಭ್ರಂಶ್ಯನ್ಯಜನ್ಮನಿ ॥ ೧೮ ॥

ಅತ್ರೈವ ಚ ನಿಜಂ ರಾಜ್ಯಂ ಹತಶತ್ರುಬಲಂ ಬಲಾತ್ ।
ಸೋಽಪಿ ವೈಶ್ಯಸ್ತತೋ ಜ್ಞಾನಂ ವವ್ರೇ ನಿರ್ವಿಣ್ಣಮಾನಸಃ ॥ ೧೯ ॥

ಮಮೇತ್ಯಹಮಿತಿ ಪ್ರಾಜ್ಞಃ ಸಂಗವಿಚ್ಯುತಿಕಾರಕಮ್ ॥ ೨೦ ॥

ದೇವ್ಯುವಾಚ ॥ ೨೧ ॥

ಸ್ವಲ್ಪೈರಹೋಭಿರ್ನೃಪತೇ ಸ್ವಂ ರಾಜ್ಯಂ ಪ್ರಾಪ್ಸ್ಯಸೇ ಭವಾನ್ ॥ ೨೨ ॥

ಹತ್ವಾ ರಿಪೂನಸ್ಖಲಿತಂ ತವ ತತ್ರ ಭವಿಷ್ಯತಿ ।
ಮೃತಶ್ಚ ಭೂಯಸ್ಸಂಪ್ರಾಪ್ಯ ಜನ್ಮ ದೇವಾದ್ವಿವಸ್ವತಃ ॥ ೨೩ ॥

೧೦. ಆ ವೈಶ್ಯನು ದೇವೀಸೂಕ್ತವನ್ನು ಅತ್ಯಂತವಾಗಿ ಜಪಿಸುತ್ತ ತಪಸ್ಸು ಮಾಡಿದನು. ಅವರಿಬ್ಬರೂ ನದಿಯ ಮರಳುದಂಡೆಯಲ್ಲಿ ದೇವಿಯ ಮೂರ್ತಿಯನ್ನು ಮಣ್ಣಿನಿಂದ ರಚಿಸಿಟ್ಟುಕೊಂಡು -

೧೧. (ಕೆಲವು ಸಲ) ಆಹಾರವನ್ನು ತ್ಯಜಿಸಿದವರಾಗಿ, (ಕೆಲವು ಸಲ) ನಿಯತವಾಗಿ ಆಹಾರವನ್ನು ಸೇವಿಸುತ್ತ, ದೇವಿಯಲ್ಲೇ ಮನಸ್ಸಿಟ್ಟವರಾಗಿ, ಏಕಾಗ್ರಚಿತ್ತರಾಗಿ, ಆಕೆಯ ಪೂಜೆಯನ್ನು ಹೂವು, ಧೂಪ, ದೀಪ, ತರ್ಪಣ ಮೊದಲಾದವುಗಳ ಮೂಲಕ ನೆರವೇರಿಸಿದರು.

೧೨-೧೩. ಅವರು ತಮ್ಮ ಶರೀರದಿಂದ ರಕ್ತವನ್ನು ತೆಗೆದು ಬಲಿಯನ್ನೂ ಕೊಟ್ಟರು. ಹೀಗೆ ಅವರು ಮೂರು ವರ್ಷಗಳವರೆಗೆ ಆತ್ಮ ಸಂಯಮದಿಂದ ಕೂಡಿ ಆಕೆಯನ್ನು ಆರಾಧಿಸುತ್ತಿರಲು, ಇದರಿಂದ ಸುಪ್ರೀತಳಾದ ಜಗನ್ಮಾತೆ ಚಂಡಿಕೆಯು ಪ್ರತ್ಯಕ್ಷಳಾಗಿ ಇಂತೆಂದಳು :

೧೪-೧೫. ದೇವಿಯು ಹೇಳಿದಳು: ಎಲೈ ರಾಜನೇ, ವಂಶಕ್ಕೆ ಆನಂದವನ್ನು ತರುವ (ವೈಶ್ಯನೇ), ನೀವು ಯಾವ ಇಷ್ಟಾರ್ಥಕ್ಕಾಗಿ ಪ್ರಾರ್ಥಿಸುತ್ತಿರುವಿರೋ ಅದನ್ನು ನನ್ನಿಂದ ಪಡೆಯಿರಿ. ಸಂತುಷ್ಟಳಾದ ನಾನು ಅವೆಲ್ಲವನ್ನೂ ಅನುಗ್ರಹಿಸುತ್ತೇನೆ !

೧೬-೨೦. ಮಾರ್ಕಂಡೇಯನು ಮುಂದುವರಿಸಿದನು: ಅನಂತರ ಸುರಥ ರಾಜನು ಈ ಜನ್ಮದಲ್ಲಿ ಕೈಬಿಟ್ಟುಹೋಗಿದ್ದ ತನ್ನ ರಾಜ್ಯವನ್ನು ಶಕ್ತಿಯಿಂದ ಶತ್ರುಬಲವನ್ನು ಜಯಿಸಿ ಪಡೆಯುವಂತಾಗಬೇಕೆಂದೂ, ಆ ರಾಜ್ಯವು ಇತರ ಜನ್ಮಗಳಲ್ಲಿಯೂ ಕೈಬಿಟ್ಟು ಹೋಗಬಾರದೆಂದೂ ವರವನ್ನು ಬೇಡಿದನು. ವಿವೇಕಿಯಾದ ಆ ವೈಶ್ಯನೂ ಕೂಡ ವೈರಾಗ್ಯಯುಕ್ತವಾದ ಮನಸ್ಸುಳ್ಳವನಾಗಿ "ನಾನು" "ನನ್ನದು" ಎಂಬ ಅಭಿಮಾನಸಂಗವನ್ನು ಹೋಗಲಾಡಿಸುವ ತತ್ತ್ವಜ್ಞಾನವನ್ನು ಬೇಡಿದನು.

೨೧-೨೩. ದೇವಿಯು ಉತ್ತರವಿತ್ತಳು: ಎಲೈ ನರಪತಿಯೆ, ಇನ್ನು ಕೆಲವೇ ದಿನಗಳಲ್ಲಿ ಶತ್ರುಗಳನ್ನು ಕೊಂದು ನಿನ್ನ ರಾಜ್ಯವನ್ನು ಪಡೆಯುತ್ತೀಯೆ! ಮತ್ತು ಅದು ನಿನ್ನಿಂದ ಬಿಟ್ಟುಹೋಗದೆ ಇರುವುದು! ಇಲ್ಲಿ ಮೃತನಾದಮೇಲೆ ವಿವಸ್ವಾನ್ ಎಂಬ ದೇವನಿಂದ ಜನ್ಮವನ್ನು ಪಡೆದು–

ಸಾವರ್ಣಿಕೋ ನಾಮ ಮನುರ್ಭವಾನ್ ಭುವಿ ಭವಿಷ್ಯತಿ ।
ವೈಶ್ಯವರ್ಯ ತ್ವಯಾ ಯಶ್ಚ ವರೋಽಸ್ಮತ್ತೋಽಭಿವಾಂಛಿತಃ ॥ ೨೪ ॥

ತಂ ಪ್ರಯಚ್ಛಾಮಿ ಸಂಸಿದ್ಧ್ಯೈ ತವ ಜ್ಞಾನಂ ಭವಿಷ್ಯತಿ ॥ ೨೫ ॥

ಮಾರ್ಕಂಡೇಯ ಉವಾಚ ॥ ೨೬ ॥

ಇತಿ ದತ್ತ್ವಾ ತಯೋರ್ದೇವೀ ಯಥಾಭಿಲಷಿತಂ ವರಮ್ ॥ ೨೭ ॥

ಬಭೂವಾಂತರ್ಹಿತಾ ಸದ್ಯೋ ಭಕ್ತ್ಯಾ ತಾಭ್ಯಾಮಭಿಷ್ಟುತಾ ।
ಏವಂ ದೇವ್ಯಾಂ ವರಂ ಲಬ್ಧ್ವಾ ಸುರಥಃ ಕ್ಷತ್ರಿಯರ್ಷಭಃ ॥ ೨೮ ॥

ಸೂರ್ಯಾಜ್ಜನ್ಮ ಸಮಾಸಾದ್ಯ ಸಾವರ್ಣಿರ್ಭವಿತಾ ಮನುಃ ।
ಸಾವರ್ಣಿರ್ಭವಿತಾ ಮನುಃ ಕ್ಲೀಮ್ ಓಮ್ ॥ ೨೯ ॥

ಇತಿ ಶ್ರೀಮಾರ್ಕಂಡೇಯಪುರಾಣೇ ಸಾವರ್ಣಿಕೇ ಮನ್ವಂತರೇ
ದೇವೀಮಾಹಾತ್ಮ್ಯೇ ಸುರಥವೈಶ್ಯಯೋರ್ವರಪ್ರದಾನಂ ನಾಮ ತ್ರಯೋದಶೋಽಧ್ಯಾಯಃ

ಶ್ರೀ ಸಪ್ತಶತೀದೇವೀಮಾಹಾತ್ಮ್ಯಂ ಸಮಾಪ್ತಮ್ ।

ಓಂ ತತ್ಸತ್ ಓಮ್॥

(ಈಗ ಪುನಃ ನವಾರ್ಣಮಂತ್ರವನ್ನು ಜಪಿಸಬೇಕು)

೨೪-೨೫. ಸಾವರ್ಣಿಕನೆಂಬ ಮನುವಾಗಿ ನೀನು ಭೂಲೋಕದಲ್ಲಿರುತ್ತೀಯೆ. ಎಲೈ ವೈಶ್ಯಶ್ರೇಷ್ಠನೇ, ನನ್ನಿಂದ ನೀನು ಯಾವ ವರವನ್ನಪೇಕ್ಷಿಸಿದೆಯೋ ಅದನ್ನು ಕೊಡುತ್ತೇನೆ. ಸಂಸಿದ್ಧಿಯನ್ನು ಪಡೆಯುವುದಕ್ಕೆ ಬೇಕಾದ ಜ್ಞಾನವು ನಿನಗುಂಟಾಗುತ್ತದೆ.

೨೬-೨೯. ಮಾರ್ಕಂಡೇಯನು ಮುಂದುವರಿಸಿದನು: ಹೀಗೆ ದೇವಿಯು ಅವರಿಬ್ಬರಿಗೂ ಇಷ್ಟವಾದ ವರಗಳನ್ನಿತ್ತು, ಅವರು ಭಕ್ತಿಯಿಂದ ಸ್ತೋತ್ರ ಮಾಡುತ್ತಿರಲು ಕೂಡಲೇ ಅಂತರ್ಧಾನಳಾದಳು. ಹೀಗೇ ಕ್ಷತ್ರಿಯ ಶ್ರೇಷ್ಠನಾದ ಸುರಥನು ದೇವಿಯಿಂದ ವರವನ್ನು ಪಡೆದು ಸೂರ್ಯನಿಂದ ಜನ್ಮವನ್ನು ಹೊಂದಿ ಮುಂದೆ ಸಾವರ್ಣಿಯೆಂಬ ಮನುವಾಗುವನು.

ಇಲ್ಲಿಗೆ ಸಾವರ್ಣಿಕಮನ್ವಂತರಕ್ಕೆ ಸೇರಿದ ಶ್ರೀಮಾರ್ಕಂಡೇಯಪುರಾಣದ ದೇವೀಮಾಹಾತ್ಮ್ಯದಲ್ಲಿ "ಸುರಥ–ವೈಶ್ಯರಿಗೆ ವರಪ್ರದಾನ" ಎಂಬ ಹದಿಮೂರನೆಯ ಅಧ್ಯಾಯವು ಮುಗಿಯಿತು.

# ಉತ್ತರನ್ಯಾಸಾಃ

ಕರನ್ಯಾಸ:- ಓಂ ಹ್ರೀಮ್ ಅಂಗುಷ್ಠಾಭ್ಯಾಂ ನಮಃ । ಓಂ ಚಂ ತರ್ಜನೀಭ್ಯಾಂ ನಮಃ । ಓಂ ಡಿಂ ಮಧ್ಯಮಾಭ್ಯಾಂ ನಮಃ । ಓಂ ಕಾಮ್ ಅನಾಮಿಕಾಭ್ಯಾಂ ನಮಃ । ಓಂ ಯೈಂ ಕನಿಷ್ಠಿಕಾಭ್ಯಾಂ ನಮಃ । ಓಂ ಹ್ರೀಂ ಚಂಡಿಕಾಯೈ ಕರತಲಕರಪೃಷ್ಠಾಭ್ಯಾಂ ನಮಃ ॥

ಹೃದಯಾದಿನ್ಯಾಸ:- (ಚರಿತ್ರತ್ರಯನ್ಯಾಸವನ್ನು ನೋಡಿ)

ಖಡ್ಗಿನೀ ಶೂಲಿನೀ....ಹೃದಯಾಯ ನಮಃ ।
ಶೂಲೇನ ಪಾಹಿ....ಶಿರಸೇ ಸ್ವಾಹಾ ।
ಪ್ರಾಚ್ಯಾಂ ರಕ್ಷ....ಶಿಖಾಯೈ ವಷಟ್ ।
ಸೌಮ್ಯಾನಿ ಯಾನಿ....ಕವಚಾಯ ಹುಮ್ ।
ಖಡ್ಗಶೂಲ....ನೇತ್ರತ್ರಯಾಯ ವೌಷಟ್ ।
ಸರ್ವಸ್ವರೂಪೇ....ಅಸ್ತ್ರಾಯ ಫಟ್ ॥

ಧ್ಯಾನಮ್ – ವಿದ್ಯುದ್ದಾಮಸಮಪ್ರಭಾಂ....ಇತ್ಯಾದಿ.

# ಋಗ್ವೇದೋಕ್ತಂ ದೇವೀಸೂಕ್ತಮ್

ಓಮ್ ಅಹಮಿತ್ಯಷ್ಟರ್ಚಸ್ಯ ಸೂಕ್ತಸ್ಯ ವಾಗಾಂಭೃಣೀ ಋಷಿಃ, ಸಚ್ಚಿತ್ಸುಖಾತ್ಮಕಃ ಸರ್ವಗತಃ ಪರಮಾತ್ಮಾ ದೇವತಾ, ದ್ವಿತೀಯಾಯಾ ಋಚೋ ಜಗತೀ ಶಿಷ್ಟಾನಾಂ ತ್ರಿಷ್ಟುಪ್ ಛಂದಃ, ಶ್ರೀದುರ್ಗಾಸಪ್ತಶತೀಪಾಠೇ ವಿನಿಯೋಗಃ ॥

ಧ್ಯಾನಮ್

ಓಂ ಸಿಂಹಸ್ಥಾ ಶಶಿಶೇಖರಾ ಮರಕತಪ್ರಖ್ಯೈಶ್ಚತುರ್ಭಿರ್ಭುಜೈಃ
ಶಂಖಂ ಚಕ್ರಧನುಃಶರಾಂಶ್ಚ ದಧತೀ ನೇತ್ರೈಸ್ತ್ರಿಭಿಃಶೋಭಿತಾ ।
ಆಮುಕ್ತಾಂಗದಹಾರಕಂಕಣರಣತ್ಕಾಂಚೀರಣನ್ನೂಪುರಾ
ದುರ್ಗಾ ದುರ್ಗತಿಹಾರಿಣೀ ಭವತು ನೋ ರತ್ನೋಲ್ಲಸತ್ಕುಂಡಲಾ ॥

[ಸಿಂಹದ ಮೇಲೆ ಕುಳಿತಿರುವವಳೂ, ಚಂದ್ರನನ್ನು ಮುಕುಟದಲ್ಲಿ ಧರಿಸಿರುವವಳೂ, ಮರಕತಮಣಿಗೆ ಸಮನಾದ ಕಾಂತಿಯುಳ್ಳ ತನ್ನ ನಾಲ್ಕು ಭುಜಗಳಲ್ಲಿ ಶಂಖ - ಚಕ್ರ - ಧನುಸ್ಸು - ಬಾಣಗಳನ್ನು ಧರಿಸಿರುವವಳೂ, ಮೂರು ಕಣ್ಣುಗಳಿಂದ ಶೋಭಿಸುತ್ತಿರುವವಳೂ, ಮುಕ್ತಾಫಲದಿಂದ ಮಾಡಲ್ಪಟ್ಟ ಕೇಯೂರ - ಕಂಕಣಗಳನ್ನು ಧರಿಸಿರುವವಳೂ, ಶಬ್ದ ಮಾಡುತ್ತಿರುವ ಗೆಜ್ಜೆಗಳನ್ನು ಕಟ್ಟಿಕೊಂಡಿರುವವಳೂ, ಹೊಳೆಯುತ್ತಿರುವ ರತ್ನ ಕುಂಡಲಗಳನ್ನು ಧರಿಸಿರುವವಳೂ ಆದ ದುರ್ಗೆಯು (ನಮ್ಮ) ದುರ್ಗತಿಗಳನ್ನು ಹೋಗಲಾಡಿಸಲಿ! ]

ಅಹಂ ರುದ್ರೇಭಿರ್ವಸುಭಿಶ್ಚರಾಮಿ
ಅಹಮಾದಿತ್ಯೈರುತ ವಿಶ್ವದೇವೈಃ ।
ಅಹಂ ಮಿತ್ರಾವರುಣೋಭಾ ಬಿಭರ್ಮಿ
ಅಹಮಿಂದ್ರಾಗ್ನೀ ಅಹಮಶ್ವಿನೋಭಾ ॥ ೧ ॥

ಅಹಂ ಸೋಮಮಾಹನಸಂ ಬಿಭರ್ಮಿ
ಅಹಂ ತ್ವಷ್ಟಾರಮುತ ಪೂಷಣಂ ಭಗಮ್ ।
ಅಹಂ ದಧಾಮಿ ದ್ರವಿಣಂ ಹವಿಷ್ಮತೇ
ಸುಪ್ರಾವ್ಯೇ ಯಜಮಾನಾಯ ಸುನ್ವತೇ ॥ ೨ ॥

ಅಹಂ ರಾಷ್ಟ್ರೀ ಸಂಗಮನೀ ವಸೂನಾಂ
ಚಿಕಿತುಷೀ ಪ್ರಥಮಾ ಯಜ್ಞಿಯಾನಾಮ್ ।
ತಾಂ ಮಾ ದೇವಾ ವ್ಯದಧುಃ ಪುರುತ್ರಾ
ಭೂರಿಸ್ಥಾತ್ರಾಂ ಭೂರ್ಯಾವೇಶಯಂತೀಮ್ ॥ ೩ ॥

ಮಯಾ ಸೋಽನ್ನಮತ್ತಿ ಯೋ ವಿಪಶ್ಯತಿ
ಯಃ ಪ್ರಾಣಿತಿ ಯ ಈಂ ಶೃಣೋತ್ಯುಕ್ತಮ್ ।
ಅಮಂತವೋ ಮಾಂ ತ ಉಪಕ್ಷಿಯಂತಿ
ಶ್ರುಧಿ ಶ್ರುತ ಶ್ರದ್ಧಿವಂ ತೇ ವದಾಮಿ ॥ ೪ ॥

ಅಹಮೇವ ಸ್ವಯಮಿದಂ ವದಾಮಿ
ಜುಷ್ಟಂ ದೇವೇಭಿರುತ ಮಾನುಷೇಭಿಃ ।
ಯಂ ಕಾಮಯೇ ತಂ ತಮುಗ್ರಂ ಕೃಣೋಮಿ
ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಮ್ ॥ ೫ ॥

ಅಹಂ ರುದ್ರಾಯ ಧನುರಾತನೋಮಿ
ಬ್ರಹ್ಮದ್ವಿಷೇ ಶರವೇ ಹಂತ ವಾ ಉ ।
ಅಹಂ ಜನಾಯ ಸಮದಂ ಕೃಣೋಮಿ
ಅಹಂ ದ್ಯಾವಾಪೃಥಿವೀ ಆವಿವೇಶ ॥ ೬ ॥

೧. ರುದ್ರರು, ವಸುಗಳು, ಆದಿತ್ಯರು ಮತ್ತು ವಿಶ್ವದೇವತೆಗಳು ಇವರೊಡನೆ ನಾನು ಸಂಚರಿಸುತ್ತೇನೆ. ನಾನು ಮಿತ್ರ, ವರುಣ, ಇಂದ್ರ, ಅಗ್ನಿ ಇವರನ್ನೂ ಮತ್ತು ಅಶ್ವಿನೀದೇವತೆಗಳನ್ನೂ ಪೋಷಿಸುತ್ತೇನೆ.

೨. (ದೇವತೆಗಳ ಆನಂದಕ್ಕೋಸ್ಕರ) ಹಿಂಡಿ ತೆಗೆಯುವ ಸೋಮವನ್ನೂ, ತ್ವಷ್ಟ್ರು, ಭಗ ಮತ್ತು ಪೂಷನ್ – ಇವರನ್ನೂ ಧರಿಸುತ್ತೇನೆ. ಹವಿಸ್ಸನ್ನೂ ಸೋಮವನ್ನೂ ಸಿದ್ಧಪಡಿಸಿ ದೇವತೆಗಳನ್ನು ತೃಪ್ತಿಪಡಿಸುವ ಯಜಮಾನನಿಗೆ ನಾನು ದ್ರವ್ಯವನ್ನು ಕೊಡುತ್ತೇನೆ.

೩. ನಾನೇ ಈಶ್ವರಿಯು; ಧನವನ್ನು ಹಂಚಿಕೊಡುವವಳೂ ನಾನೇ – ನಾನು ಜ್ಞಾನವಂತಳು. ಯಜ್ಞಯೋಗ್ಯರಾದ ದೇವತೆಗಳ ನಡುವೆ ನಾನೇ ಪ್ರಥಮಳು. ಪ್ರಪಂಚರೂಪದಲ್ಲಿ ಅವಸ್ಥಿತಳಾದ ಮತ್ತು ಭೂತಗಳಲ್ಲಿ ಜೀವರೂಪದಿಂದ ಪ್ರವಿಷ್ಟಳಾದ ಇಂತಹ ನನ್ನನ್ನು ದೇವತೆಗಳು ನಾನಾ ಸ್ಥಾನಗಳಲ್ಲಿ ಇಟ್ಟಿರುವರು.

೪. ಯಾವನು ಅನ್ನವನ್ನು ತಿನ್ನುತ್ತಾನೆಯೋ, ನೋಡುತ್ತಾನೆಯೋ, ಉಸಿರಾಡುತ್ತಾನೆಯೋ, ಹೇಳಿದ್ದನ್ನು ಕೇಳುತ್ತಾನೆಯೋ ಅವನು ನನ್ನ ಶಕ್ತಿಯಿಂದಲೇ (ಇವೆಲ್ಲವನ್ನೂ) ಮಾಡುತ್ತಾನೆ. ಇಂತಹ ನನ್ನ ವಿಷಯದಲ್ಲಿ ಯಾರು ಜ್ಞಾನಹೀನರಾಗಿರುತ್ತಾರೆಯೋ ಅವರು ಕ್ಷಯಿಸುತ್ತಾರೆ. ಎಲೈ ಜ್ಞಾನಿಯೇ, ಕೇಳು; ಶ್ರದ್ಧೆಯ ಸತ್ಯವನ್ನು ನಿನಗೆ ಉಪದೇಶಿಸುತ್ತೇನೆ.

೫. ದೇವತೆಗಳಿಂದಲೂ ಮಾನವರಿಂದಲೂ ಸೇವಿತವಾದ ಈ (ತತ್ತ್ವವನ್ನು) ಸ್ವಯಂ ನಾನೇ ಉಪದೇಶಿಸುತ್ತೇನೆ; ನಾನು ಯಾರನ್ನು ಪ್ರೀತಿಸುತ್ತೇನೆಯೋ ಅವನನ್ನು ಬಲಿಷ್ಠನನ್ನಾಗಿ, ಬ್ರಹ್ಮನನ್ನಾಗಿ, ಋಷಿಯನ್ನಾಗಿ, ಪ್ರಾಜ್ಞನನ್ನಾಗಿ ಮಾಡುತ್ತೇನೆ.

೬. ಬ್ರಾಹ್ಮಣರನ್ನು ದ್ವೇಷಿಸುವ ಅಸುರರ ನಾಶಕ್ಕಾಗಿ ನಾನು ರುದ್ರನ ಬಿಲ್ಲಿಗೆ ಹದೆಯನ್ನು ಕಟ್ಟುತ್ತೇನೆ ಮತ್ತು ಜನರ ರಕ್ಷಣೆಗಾಗಿ ಯುದ್ಧವನ್ನು ಮಾಡುತ್ತೇನೆ. ನಾನು ಸ್ವರ್ಗವನ್ನೂ ಭೂಲೋಕವನ್ನು (ಅಂತರ್ಯಾಮಿ ರೂಪದಿಂದ) ಪ್ರವೇಶಿಸಿರುತ್ತೇನೆ.

ಅಹಂ ಸುವೇ ಪಿತರಮಸ್ಯ ಮೂರ್ಧನ್
ಮಮ ಯೋನಿರಪ್ಸ್ವಂತಸ್ಸಮುದ್ರೇ ।
ತತೋ ವಿತಿಷ್ಠೇ ಭುವನಾನಿ ವಿಶ್ವೋ-
ತಾಮೂಂ ದ್ಯಾಂ ವರ್ಷ್ಮಣೋಪಸ್ಪೃಶಾಮಿ ॥ ೭ ॥

ಅಹಮೇವ ವಾತ ಇವ ಪ್ರವಾಮಿ
ಆರಭಮಾಣಾ ಭುವನಾನಿ ವಿಶ್ವಾ ।
ಪರೋ ದಿವಾ ಪರ ಏನಾ ಪೃಥಿವ್ಯೈ -
ತಾವತೀ ಮಹಿನಾ ಸಂಬಭೂವ ॥ ೮ ॥

## ತಂತ್ರೋಕ್ತಂ ದೇವೀಸೂಕ್ತಮ್

(ಸಪ್ತಶತಿಯ ಐದನೆಯ ಅಧ್ಯಾಯದ ೯ ರಿಂದ ೮೨ ರವರೆಗಿನ ಶ್ಲೋಕಗಳೇ
ತಂತ್ರೋಕ್ತದೇವೀಸೂಕ್ತ ಎನಿಸಿವೆ. ಅವನ್ನಿಲ್ಲಿ ಪಠಿಸಬೇಕು.)

೭. ಭೂಮಿಯ ಮೇಲುಗಡೆ ಇರುವ ಸ್ವರ್ಗಲೋಕವನ್ನು ನಾನು ಸೃಷ್ಟಿಸಿರುತ್ತೇನೆ. ಸಮುದ್ರಮಧ್ಯದಲ್ಲಿರುವ ನೀರು ನನ್ನ ಉತ್ಪತ್ತಿಸ್ಥಾನವು (ಎಂದರೆ ಬುದ್ಧಿಯಲ್ಲಿರುವ ಚೈತನ್ಯವೇ ನನ್ನ ಮೂಲವು); ಅಲ್ಲಿಂದ ಸಮಸ್ತಪ್ರಾಣಿಗಳನ್ನೂ ಪ್ರವೇಶಿಸಿ ನಾನೇ ವಿವಿಧರೂಪದಿಂದ ಇರುತ್ತೇನೆ. ನನ್ನ ಶರೀರದಿಂದ ಸ್ವರ್ಗಾದಿಲೋಕಗಳನ್ನು ವ್ಯಾಪಿಸಿರುತ್ತೇನೆ.

೮. ಸಮಸ್ತ ಲೋಕಗಳನ್ನೂ ಕಾರಣರೂಪದಿಂದ ಪ್ರಾರಂಭಿಸುವವಳಾಗಿ ಆ ಸಮಯದಲ್ಲಿ ವಾಯುವಿನಂತೆ ಅನ್ಯಪ್ರೇರಣೆಯಿಲ್ಲದೆ ಸ್ವಯಂ ಚಲಿಸುತ್ತೇನೆ. ನಾನು ದ್ಯುಲೋಕವನ್ನೂ ಪೃಥಿವಿಯನ್ನೂ ಮೀರಿರುತ್ತೇನೆ. ನನ್ನ ಮಹಿಮೆಯು ಹೀಗಿರುವುದು.

# ಪ್ರಾಧಾನಿಕಂ ರಹಸ್ಯಮ್

ಓಮ್ । ಅಸ್ಯ ಶ್ರೀಸಪ್ತಶತೀರಹಸ್ಯತ್ರಯಸ್ಯ ನಾರಾಯಣ ಋಷಿಃ । ಅನುಷ್ಟುಪ್ ಛಂದಃ । ಮಹಾಕಾಲೀ-ಮಹಾಲಕ್ಷ್ಮೀ-ಮಹಾಸರಸ್ವತ್ಯೋ ದೇವತಾಃ । ಯಥೋಕ್ತಫಲಾವಾಪ್ತ್ಯರ್ಥಂ ಜಪೇ ವಿನಿಯೋಗಃ ।

ರಾಜೋವಾಚ

ಭಗವನ್ನವತಾರಾ ಮೇ ಚಂಡಿಕಾಯಾಸ್ತ್ವಯೋದಿತಾಃ ।
ಏತೇಷಾಂ ಪ್ರಕೃತಿಂ ಬ್ರಹ್ಮನ್ ಪ್ರಧಾನಂ ವಕ್ತುಮರ್ಹಸಿ ॥ ೧ ॥

ಆರಾಧ್ಯಂ ಯನ್ಮಯಾ ದೇವ್ಯಾಃ ಸ್ವರೂಪಂ ಯೇನ ಚ ದ್ವಿಜ ।
ವಿಧಿನಾ ಬ್ರೂಹಿ ಸಕಲಂ ಯಥಾವತ್ ಪ್ರಣತಸ್ಯ ಮೇ ॥ ೨ ॥

ಋಷಿರುವಾಚ

ಇದಂ ರಹಸ್ಯಂ ಪರಮಮನಾಖ್ಯೇಯಂ ಪ್ರಚಕ್ಷತೇ ।
ಭಕ್ತೋಽಸೀತಿ ನ ಮೇ ಕಿಂಚಿತ್ತವಾವಾಚ್ಯಂ ನರಾಧಿಪ ॥ ೩ ॥

ಸರ್ವಸ್ಯಾದ್ಯಾ ಮಹಾಲಕ್ಷ್ಮೀಸ್ತ್ರಿಗುಣಾ ಪರಮೇಶ್ವರೀ ।
ಲಕ್ಷ್ಯಾಲಕ್ಷ್ಯಸ್ವರೂಪಾ ಸಾ ವ್ಯಾಪ್ಯ ಕೃತ್ಸ್ನಂ ವ್ಯವಸ್ಥಿತಾ ॥ ೪ ॥

ಮಾತುಲಿಂಗಂ ಗದಾಂ ಖೇಟಂ ಪಾನಪಾತ್ರಂ ಚ ಬಿಭ್ರತೀ ।
ನಾಗಂ ಲಿಂಗಂ ಚ ಯೋನಿಂ ಚ ಬಿಭ್ರತೀ ನೃಪ ಮೂರ್ಧನಿ ॥ ೫ ॥

ತಪ್ತಕಾಂಚನವರ್ಣಾಭಾ ತಪ್ತಕಾಂಚನಭೂಷಣಾ ।
ಶೂನ್ಯಂ ತದಖಿಲಂ ಸ್ವೇನ ಪೂರಯಾಮಾಸ ತೇಜಸಾ ॥ ೬ ॥

ಶೂನ್ಯಂ ತದಖಿಲಂ ಲೋಕಂ ವಿಲೋಕ್ಯ ಪರಮೇಶ್ವರೀ ।
ಬಭಾರ ಪರಮಂ ರೂಪಂ ತಮಸಾ ಕೇವಲೇನ ಹಿ ॥ ೭ ॥

ಸಾ ಭಿನ್ನಾಂಜನಸಂಕಾಶಾ ದಂಷ್ಟ್ರಾಂಚಿತವರಾನನಾ ।
ವಿಶಾಲಲೋಚನಾ ನಾರೀ ಬಭೂವ ತನುಮಧ್ಯಮಾ ॥ ೮ ॥

# ಪ್ರಾಧಾನಿಕ ರಹಸ್ಯ

೧. ರಾಜನು ಈ ರೀತಿಯಾಗಿ ಹೇಳಿದನು: ಭಗವನ್, ತಾವು ನನಗೆ ಚಂಡಿಕಾದೇವಿಯ ಅವತಾರಗಳ ಕಥೆಯನ್ನು ಹೇಳಿದಿರಿ. ಬ್ರಹ್ಮನ್, ಈಗ ಈ ಅವತಾರಗಳ ಸ್ವಭಾವವನ್ನು ಮುಖ್ಯವಾಗಿ ನಿರೂಪಿಸಿ.

೨. ಹೇ ಬ್ರಾಹ್ಮಣಶ್ರೇಷ್ಠರೇ, ನಾನು ತಮ್ಮ ಕಾಲಿಗೆ ಬಿದ್ದಿದ್ದೇನೆ. ನನಗೆ ದೇವಿಯ ಯಾವ ಸ್ವರೂಪವನ್ನು ಮತ್ತು ಯಾವ ರೀತಿಯಲ್ಲಿ ಆರಾಧನೆಯನ್ನು ಮಾಡಬೇಕು ಎಂಬುದನ್ನೆಲ್ಲ ಹೇಳಿ.

೩. ಋಷಿಯು ಹೇಳಿದನು: ಎಲೈ ರಾಜನೇ, ಈ ರಹಸ್ಯವು ಬಹಳ ಗೋಪ್ಯವಾದುದ್ದು. ಇದನ್ನು ಬೇರೆಯವರಿಗೆ ಹೇಳಬಾರದೆಂದು ಹೇಳುವರು. ಆದರೆ ನೀನು ಭಕ್ತನಾದುದರಿಂದ ನಿನ್ನೊಡನೆ ಹೇಳಬಾರದಂತಹ ವಿಚಾರವೇನೂ ನನ್ನೊಡನೆ ಇಲ್ಲ.

೪. ತ್ರಿಗುಣಮಯಿಯೂ, ಪರಮೇಶ್ವರಿಯೂ ಆದ ಮಹಾಲಕ್ಷ್ಮಿಯೇ ಎಲ್ಲಕ್ಕೂ ಮೂಲಕಾರಣಳು. ಅವಳೇ ದೃಶ್ಯ ಮತ್ತು ಅದೃಶ್ಯ ರೂಪದಿಂದ ಸಂಪೂರ್ಣ ವಿಶ್ವವನ್ನು ವ್ಯಾಪಿಸಿರುತ್ತಾಳೆ.

೫. ರಾಜನೇ, ಅವಳು ತನ್ನ ಚತುರ್ಭುಜಗಳಲ್ಲಿ ಮಾತುಲಿಂಗ, ಗದೆ, ಗುರಾಣಿ ಮತ್ತು ಪಾನಪಾತ್ರೆ ಇವುಗಳನ್ನೂ, ಶಿರಸ್ಸಿನಲ್ಲಿ ನಾಗ, ಲಿಂಗ ಮತ್ತು ಯೋನಿ ಇವುಗಳನ್ನೂ ಧರಿಸಿದವಳಾಗಿರುತ್ತಾಳೆ.

೬. ಕಾದ ಚಿನ್ನದಂತೆ ಅವಳ ಮೈಕಾಂತಿಯಿದೆ; ಅವಳ ಅಲಂಕಾರವೂ ಹಾಗೆಯೇ. ಅವಳು ತನ್ನ ತೇಜಸ್ಸಿನಿಂದ ಈ ಶೂನ್ಯವಾದ ಜಗತ್ತನ್ನು ಪರಿಪೂರ್ಣವನ್ನಾಗಿ ಮಾಡಿದ್ದಾಳೆ.

೭. ಪರಮೇಶ್ವರಿಯಾದ ಮಹಾಲಕ್ಷ್ಮಿಯು ಈ ಜಗತ್ತು ಶೂನ್ಯವಾಗಿರುವುದನ್ನು ನೋಡಿ ಕೇವಲ ತಮೋಗುಣರೂಪವಾದ ಉಪಾಧಿಯ ಮೂಲಕ ಬೇರೊಂದು ಉತ್ಕೃಷ್ಟ ರೂಪವನ್ನು ಧರಿಸಿದಳು.

೮. ಅದು ಓರ್ವ ನಾರಿಯ ರೂಪದಲ್ಲಿ ಪ್ರಕಟವಾಯಿತು. ಆ ನಾರಿಯ ಶರೀರದ ಕಾಂತಿಯು ಸ್ವಚ್ಛವಾದ ಅಂಜನದಂತೆ ಕಪ್ಪಾಗಿತ್ತು. ಅವಳ ಶ್ರೇಷ್ಠ ವದನವು ದವಡೆಯ ಹಲ್ಲುಗಳಿಂದ ಸಂಶೋಭಿತವಾಗಿತ್ತು. ಅವಳ ಕಣ್ಣುಗಳು ದೊಡ್ಡದಾಗಿದ್ದು, ನಯಕಟ್ಟು ತೆಳುವಾಗಿತ್ತು.

ಖಡ್ಗಪಾತ್ರಶಿರಃಖೇಟೈರಲಂಕೃತಚತುರ್ಭುಜಾ ।
ಕಬಂಧಹಾರಂ ಶಿರಸಾ ಬಿಭ್ರಾಣಾ ಹಿ ಶಿರಸ್ರಜಮ್ ॥ ೯ ॥

ಸಾ ಪ್ರೋವಾಚ ಮಹಾಲಕ್ಷ್ಮೀಂ ತಾಮಸೀ ಪ್ರಮದೋತ್ತಮಾ ।
ನಾಮ ಕರ್ಮ ಚ ಮೇ ಮಾತರ್ದೇಹಿ ತುಭ್ಯಂ ನಮೋ ನಮಃ ॥ ೧೦ ॥

ತಾಂ ಪ್ರೋವಾಚ ಮಹಾಲಕ್ಷ್ಮೀಸ್ತಾಮಸೀಂ ಪ್ರಮದೋತ್ತಮಾಮ್ ।
ದದಾಮಿ ತವ ನಾಮಾನಿ ಯಾನಿ ಕರ್ಮಾಣಿ ತಾನಿ ತೇ ॥ ೧೧ ॥

ಮಹಾಮಾಯಾ ಮಹಾಕಾಲೀ ಮಹಾಮಾರೀ ಕ್ಷುಧಾ ತೃಷಾ ।
ನಿದ್ರಾ ತೃಷ್ಣಾ ಚೈಕವೀರಾ ಕಾಲರಾತ್ರಿರ್ದುರತ್ಯಯಾ ॥ ೧೨ ॥

ಇಮಾನಿ ತವ ನಾಮಾನಿ ಪ್ರತಿಪಾದ್ಯಾನಿ ಕರ್ಮಭಿಃ ।
ಏಭಿಃ ಕರ್ಮಾಣಿ ತೇ ಜ್ಞಾತ್ವಾ ಯೋಽಧೀತೇ ಸೋಽಶ್ನುತೇ
ಸುಖಮ್ ॥ ೧೩ ॥

ತಾಮಿತ್ಯುಕ್ತ್ವಾ ಮಹಾಲಕ್ಷ್ಮೀಃ ಸ್ವರೂಪಮಪರಂ ನೃಪ ।
ಸತ್ತ್ವಾಖ್ಯೇನಾತಿಶುದ್ಧೇನ ಗುಣೇನೇಂದುಪ್ರಭಂ ದಧೌ ॥ ೧೪ ॥

ಅಕ್ಷಮಾಲಾಂಕುಶಧರಾ ವೀಣಾಪುಸ್ತಕಧಾರಿಣೀ ।
ಸಾ ಬಭೂವ ವರಾ ನಾರೀ ನಾಮಾನ್ಯಸ್ಯೈ ಚ ಸಾ ದದೌ ॥ ೧೫ ॥

ಮಹಾವಿದ್ಯಾ ಮಹಾವಾಣೀ ಭಾರತೀ ವಾಕ್ ಸರಸ್ವತೀ ।
ಆರ್ಯಾ ಬ್ರಾಹ್ಮೀ ಕಾಮಧೇನುರ್ವೇದಗರ್ಭಾ ಚ ಧೀಶ್ವರೀ ॥ ೧೬ ॥

೯. ಅವಳ ನಾಲ್ಕು ಭುಜಗಳು ಗುರಾಣಿ, ಖಡ್ಗ, ಪಾತ್ರೆ ಮತ್ತು ರುಂಡ ಇವುಗಳಿಂದ ಸಂಶೋಭಿತವಾಗಿದ್ದುವು. ಅವಳು ವಕ್ಷಸ್ಥಳದಲ್ಲಿ ಕಬಂಧ ಮಾಲೆಯನ್ನೂ, ಮಸ್ತಕದಲ್ಲಿ ಮುಂಡಮಾಲೆಯನ್ನೂ ಧರಿಸಿದ್ದಳು.

೧೦. ಈ ಪ್ರಕಾರವಾಗಿ ಪ್ರಕಟವಾದ, ಸ್ತ್ರೀಯರಲ್ಲಿ ಶ್ರೇಷ್ಠಳಾದ, ತಾಮಸೀದೇವಿಯು ಮಹಾಲಕ್ಷ್ಮಿಗೆ ಹೇಳಿದಳು–'ಮಾತೆ, ನಿನಗೆ ನಮಸ್ಕಾರ! ನನಗೆ ನನ್ನ ಹೆಸರನ್ನೂ ಮತ್ತು ನಾನು ಮಾಡಬೇಕಾದ ಕಾರ್ಯವನ್ನೂ ತಿಳಿಸು.'

೧೧. ಆಗ ಮಹಾಲಕ್ಷ್ಮಿಯು ಸ್ತ್ರೀಯರಲ್ಲಿ ಶ್ರೇಷ್ಠಳಾದ ಆ ತಾಮಸೀ ದೇವಿಗೆ ಹೇಳಿದಳು – 'ನಾನು ನಿನಗೆ ಹೆಸರನ್ನು ದಯಪಾಲಿಸುತ್ತೇನೆ ನಿನ್ನ ಕರ್ಮಗಳನ್ನೆಲ್ಲಾ ಹೇಳುತ್ತೇನೆ'.

೧೨-೧೩. 'ಮಹಾಮಾಯಾ, ಮಹಾಕಾಲೀ, ಮಹಾಮಾರೀ, ಕ್ಷುಧಾ, ತೃಷಾ, ನಿದ್ರಾ, ತೃಷ್ಣಾ, ಏಕವೀರಾ, ಕಾಲರಾತ್ರಿ ಮತ್ತು ದುರತ್ಯಯಾ ಇವು ನಿನ್ನ ಹೆಸರುಗಳು. ಇವುಗಳೆಲ್ಲಾ ಆಯಾ ಕರ್ಮಗಳ ಮೂಲಕ ಲೋಕದಲ್ಲಿ ಆಚರಣೆಗೆ ಬರುವವು. ಈ ಹೆಸರುಗಳ ಮೂಲಕ ನಿನ್ನ ಕರ್ಮಗಳನ್ನು ತಿಳಿದು ಯಾವನು ಅವುಗಳನ್ನು ಪಠನ ಮಾಡುತ್ತಾನೋ ಅವನು ಸುಖವನ್ನು ಅನುಭವಿಸುತ್ತಾನೆ.'

೧೪. ರಾಜನೇ, ಮಹಾಕಾಳಿಯೊಡನೆ ಈ ರೀತಿಯಾಗಿ ಹೇಳಿ ಮಹಾಲಕ್ಷ್ಮಿಯು ಅತ್ಯಂತ ಶುದ್ಧಸತ್ತ್ವಗುಣದ ಮೂಲಕ ಎರಡನೆಯ ರೂಪವನ್ನು ಧಾರಣ ಮಾಡಿದಳು. ಈ ರೂಪವು ಚಂದ್ರನಂತೆ ಶ್ವೇತವರ್ಣ ವುಳ್ಳದ್ದಾಗಿತ್ತು.

೧೫. ಆ ಶ್ರೇಷ್ಠ ನಾರಿಯು ತನ್ನ ಕೈಗಳಲ್ಲಿ ಅಕ್ಷಮಾಲೆ, ಅಂಕುಶ, ವೀಣೆ ಮತ್ತು ಪುಸ್ತಕ ಇವನ್ನು ಹಿಡಿದಿದ್ದಳು. ಮಹಾಲಕ್ಷ್ಮಿಯು ಅವಳಿಗೂ ಹೆಸರುಗಳನ್ನು ದಯಪಾಲಿಸಿದಳು.

೧೬. 'ಮಹಾವಿದ್ಯಾ, ಮಹಾವಾಣೀ, ಭಾರತೀ, ವಾಕ್, ಸರಸ್ವತೀ, ಆರ್ಯಾ, ಬ್ರಾಹ್ಮೀ, ಕಾಮಧೇನು, ವೇದಗರ್ಭಾ ಮತ್ತು ಧೀಶ್ವರೀ - ಇವಿಷ್ಟೂ ನಿನ್ನ ಹೆಸರುಗಳು' ಎಂದು ಮಹಾಲಕ್ಷ್ಮಿಯು ಹೇಳಿದಳು.

ಅಥೋವಾಚ ಮಹಾಲಕ್ಷ್ಮೀರ್ಮಹಾಕಾಲೀಂ ಸರಸ್ವತೀಮ್ ।
ಯುವಾಂ ಜನಯತಾಂ ದೇವ್ಯೌ ಮಿಥುನೇ ಸ್ವಾನುರೂಪತಃ ॥ ೧೭ ॥

ಇತ್ಯುಕ್ತ್ವಾ ತೇ ಮಹಾಲಕ್ಷ್ಮೀಃ ಸಸರ್ಜ ಮಿಥುನಂ ಸ್ವಯಮ್ ।
ಹಿರಣ್ಯಗರ್ಭೌ ರುಚಿರೌ ಸ್ತ್ರೀಪುಂಸೌ ಕಮಲಾಸನೌ ॥ ೧೮ ॥

ಬ್ರಹ್ಮನ್ ವಿಧೇ ವಿರಿಂಚೇತಿ ಧಾತರಿತ್ಯಾಹ ತಂ ನರಮ್ ।
ಶ್ರೀಃ ಪದ್ಮೇ ಕಮಲೇ ಲಕ್ಷ್ಮೀತ್ಯಾಹ ಮಾತಾ ಚ ತಾಂ
ಸ್ತ್ರಿಯಮ್ ॥ ೧೯ ॥

ಮಹಾಕಾಲೀ ಭಾರತೀ ಚ ಮಿಥುನೇ ಸೃಜತಃ ಸಹ ।
ಏತಯೋರಪಿ ರೂಪಾಣಿ ನಾಮಾನಿ ಚ ವದಾಮಿ ತೇ ॥ ೨೦ ॥

ನೀಲಕಂಠಂ ರಕ್ತಬಾಹುಂ ಶ್ವೇತಾಂಗಂ ಚಂದ್ರಶೇಖರಮ್ ।
ಜನಯಾಮಾಸ ಪುರುಷಂ ಮಹಾಕಾಲೀ ಸಿತಾಂ ಸ್ತ್ರಿಯಮ್ ॥ ೨೧ ॥

ಸ ರುದ್ರಃ ಶಂಕರಃ ಸ್ಥಾಣುಃ ಕಪರ್ದೀ ಚ ತ್ರಿಲೋಚನಃ ।
ತ್ರಯೀವಿದ್ಯಾ ಕಾಮಧೇನುಃ ಸಾ ಸ್ತ್ರೀ ಭಾಷಾಽಕ್ಷರಾ ಸ್ವರಾ ॥ ೨೨ ॥

ಸರಸ್ವತೀ ಸ್ತ್ರಿಯಂ ಗೌರೀಂ ಕೃಷ್ಣಂ ಚ ಪುರುಷಂ ನೃಪ ।
ಜನಯಾಮಾಸ ನಾಮಾನಿ ತಯೋರಪಿ ವದಾಮಿ ತೇ ॥ ೨೩ ॥

೧೭. ತದನಂತರ ಮಹಾಲಕ್ಷ್ಮಿಯು ಮಹಾಕಾಳಿಯನ್ನು ಮತ್ತು ಮಹಾಸರಸ್ವತಿಯನ್ನು ಕುರಿತು ಹೇಳಿದಳು – 'ದೇವಿಯರೇ, ನೀವಿಬ್ಬರೂ ನಿಮ್ಮ ನಿಮ್ಮ ಗುಣಗಳಿಗೆ ಯೋಗ್ಯವಾದ ಸ್ತ್ರೀ - ಪುರುಷರ ಜೋಡಿಗಳನ್ನು ಉತ್ಪನ್ನ ಮಾಡಿರಿ.'

೧೮. ಅವರಿಗೆ ಹೀಗೆಂದು ಹೇಳಿ ಮಹಾಲಕ್ಷ್ಮಿಯು ಮೊದಲು ಸ್ವತಃ ಸ್ತ್ರೀ-ಪುರುಷರ ಜೋಡಿಯೊಂದನ್ನು ಉತ್ಪಾದಿಸಿದಳು. ಹಿರಣ್ಯಗರ್ಭರೂ ಸುಂದರರೂ ಆದ ಅವರಿಬ್ಬರೂ ಕಮಲಾಸನದ ಮೇಲೆ ವಿರಾಜಮಾನರಾಗಿದ್ದರು. ಅವರಲ್ಲಿ ಒಬ್ಬಳು ಸ್ತ್ರೀಯೂ ಇನ್ನೊಬ್ಬನು ಪುರುಷನೂ ಆಗಿದ್ದರು.

೧೯. ಆಮೇಲೆ ಮಾತೆ ಮಹಾಲಕ್ಷ್ಮಿಯು ಪುರುಷನನ್ನು ಬ್ರಹ್ಮ, ವಿಧಿ, ವಿರಿಂಚ ಮತ್ತು ಧಾತೃ ಎಂಬುದಾಗಿಯೂ, ಸ್ತ್ರೀಯನ್ನು ಶ್ರೀ, ಪದ್ಮಾ, ಕಮಲಾ, ಲಕ್ಷ್ಮೀ ಇತ್ಯಾದಿಯಾಗಿಯೂ ಹೆಸರಿಟ್ಟು ಕರೆದಳು.

೨೦. ಇದಾದ ಮೇಲೆ ಮಹಾಕಾಲೀ-ಮಹಾಸರಸ್ವತಿಯರೂ ಕೂಡ ಒಂದೊಂದು ಜೋಡಿಯನ್ನು ಉತ್ಪಾದಿಸಿದರು. ಈ ಜೋಡಿಗಳ ರೂಪಗಳನ್ನು ಮತ್ತು ಹೆಸರುಗಳನ್ನು ನಾನು ನಿನಗೆ ಹೇಳುತ್ತೇನೆ.

೨೧. ಮಹಾಕಾಳಿಯು ಕಂಠದಲ್ಲಿ ನೀಲಿ ಚಿಹ್ನೆಯುಳ್ಳ, ರಕ್ತವರ್ಣದ ಭುಜವುಳ್ಳ, ಬಿಳಿಬಣ್ಣದ ಶರೀರವುಳ್ಳ ಮತ್ತು ಮಸ್ತಕದಲ್ಲಿ ಚಂದ್ರನನ್ನೇ ಮುಕುಟವಾಗಿ ಧರಿಸಿದ ಪುರುಷನಿಗೂ ಮತ್ತು ಬಿಳಿ ಬಣ್ಣದ ಸ್ತ್ರೀಗೂ ಜನ್ಮವಿತ್ತಳು.

೨೨. ಆ ಪುರುಷನು ರುದ್ರ, ಶಂಕರ, ಸ್ಥಾಣು, ಕಪರ್ದೀ ಮತ್ತು ತ್ರಿಲೋಚನ ಇತ್ಯಾದಿ ಹೆಸರುಗಳಿಂದಲೂ, ಆ ಸ್ತ್ರೀಯು ತ್ರಯೀವಿದ್ಯಾ, ಕಾಮಧೇನು, ಭಾಷಾ ಮತ್ತು ಸ್ವರಾ ಎಂಬ ಹೆಸರುಗಳಿಂದಲೂ ಪ್ರಸಿದ್ಧರಾದರು.

೨೩. ಎಲೈ ರಾಜನೇ, ಮಹಾಸರಸ್ವತಿಯು ಶ್ವೇತವರ್ಣದ ಸ್ತ್ರೀಗೂ, ಶ್ಯಾಮವರ್ಣದ ಪುರುಷನಿಗೂ ಜನ್ಮವಿತ್ತಳು. ಅವರೀರ್ವರ ಹೆಸರುಗಳನ್ನೂ ನಾನು ನಿನಗೆ ಹೇಳುತ್ತೇನೆ.

ವಿಷ್ಣುಃ ಕೃಷ್ಣೋ ಹೃಷೀಕೇಶೋ ವಾಸುದೇವೋ ಜನಾರ್ದನಃ ।
ಉಮಾ ಗೌರೀ ಸತೀ ಚಂಡೀ ಸುಂದರೀ ಸುಭಗಾ ಶಿವಾ ॥ ೨೪ ॥

ಏವಂ ಯುವತಯಃ ಸದ್ಯಃ ಪುರುಷತ್ವಂ ಪ್ರಪೇದಿರೇ ।
ಚಕ್ಷುಷ್ಮಂತೋ ನು ಪಶ್ಯಂತಿ ನೇತರೇಽತದ್ವಿದೋ ಜನಾಃ ॥ ೨೫ ॥

ಬ್ರಹ್ಮಣೇ ಪ್ರದದೌ ಪತ್ನೀಂ ಮಹಾಲಕ್ಷ್ಮೀರ್ನೃಪ ತ್ರಯೀಮ್ ।
ರುದ್ರಾಯ ಗೌರೀಂ ವರದಾಂ ವಾಸುದೇವಾಯ ಚ ಶ್ರಿಯಮ್ ॥ ೨೬ ॥

ಸ್ವರಯಾ ಸಹ ಸಂಭೂಯ ವಿರಿಂಚೋಽಂಡಮಜೀಜನತ್ ।
ಬಿಭೇದ ಭಗವಾನ್ ರುದ್ರಸ್ತದ್ಗೌರ್ಯಾ ಸಹ ವೀರ್ಯವಾನ್ ॥ ೨೭ ॥

ಅಂಡಮಧ್ಯೇ ಪ್ರಧಾನಾದಿ ಕಾರ್ಯಜಾತಮಭೂನ್ನೃಪ ।
ಮಹಾಭೂತಾತ್ಮಕಂ ಸರ್ವಂ ಜಗತ್ ಸ್ಥಾವರಜಂಗಮಮ್ ॥ ೨೮ ॥

ಪುಪೋಷ ಪಾಲಯಾಮಾಸ ತಲ್ಲಕ್ಷ್ಮ್ಯಾ ಸಹ ಕೇಶವಃ ।
ಸಂಜಹಾರ ಜಗತ್ಸರ್ವಂ ಸಹ ಗೌರ್ಯಾ ಮಹೇಶ್ವರಃ ॥ ೨೯ ॥

ಮಹಾಲಕ್ಷ್ಮೀರ್ಮಹಾರಾಜ ಸರ್ವಸತ್ತ್ವಮಯೀಶ್ವರೀ ।
ನಿರಾಕಾರಾ ಚ ಸಾಕಾರಾ ಸೈವ ನಾನಾಭಿಧಾನಭೃತ್ ॥ ೩೦ ॥

ನಾಮಾಂತರೈರ್ನಿರೂಪ್ಯೈಷಾ ನಾಮ್ನಾ ನಾನ್ಯೇನ ಕೇನಚಿತ್ ॥ ೩೧ ॥

॥ ಇತಿ ಪ್ರಾಧಾನಿಕಂ ರಹಸ್ಯಂ ಸಂಪೂರ್ಣಮ್॥

೨೪. ಅವರಲ್ಲಿ ಪುರುಷನಿಗೆ ವಿಷ್ಣು, ಕೃಷ್ಣ, ಹೃಷೀಕೇಶ, ವಾಸುದೇವ ಮತ್ತು ಜನಾರ್ದನ ಎಂಬ ಹೆಸರುಗಳು ಬಂದವು; ಮತ್ತು ಸ್ತ್ರೀಯು ಉಮಾ, ಗೌರೀ, ಸತೀ, ಚಂಡೀ, ಸುಂದರೀ, ಸುಭಗಾ, ಮತ್ತು ಶಿವಾ ಎಂಬುದಾಗಿ ಕರೆಯಲ್ಪಟ್ಟಳು.

೨೫. ಈ ಪ್ರಕಾರವಾಗಿ ಮೂವರು ಯುವತಿಯರೂ ಕೂಡ ಪುರುಷ ರೂಪವನ್ನು ಪಡೆದರು. ಈ ವಿಷಯವನ್ನು ಜ್ಞಾನಚಕ್ಷುಸ್ಸುಳ್ಳವರು ಮಾತ್ರ ತಿಳಿಯಬಲ್ಲರು. ಅಜ್ಞಾನಿಗಳಾದ ಇತರರು ಇದನ್ನು ತಿಳಿಯರು.

೨೬. ನರಾಧಿಪನೇ, ಮಹಾಲಕ್ಷ್ಮಿಯು ತ್ರಯೀವಿದ್ಯಾರೂಪಳಾದ ಸರಸ್ವತಿಯನ್ನು ಬ್ರಹ್ಮನಿಗೆ ಪತ್ನಿಯಾಗಿ ಸಮರ್ಪಿಸಿದಳು; ರುದ್ರನಿಗೆ ವರದಾಯಿನಿ ಗೌರಿಯನ್ನೂ ಮತ್ತು ಭಗವಾನ್ ವಾಸುದೇವನಿಗೆ ಲಕ್ಷ್ಮಿಯನ್ನೂ ಕೊಟ್ಟುಬಿಟ್ಟಳು.

೨೭. ಈ ಪ್ರಕಾರ ಸರಸ್ವತಿಯೊಡನೆ ಕೂಡಿಕೊಂಡು ಬ್ರಹ್ಮನು ಬ್ರಹ್ಮಾಂಡವನ್ನು ಸೃಷ್ಟಿಸಿದನು, ಪರಮಪರಾಕ್ರಮಿ ಭಗವಾನ್ ರುದ್ರನು ಗೌರಿಯ ಜೊತೆಯಲ್ಲಿ ಅದನ್ನು ಭೇದಿಸಿದನು.

೨೮. ನೃಪನೇ, ಆ ಬ್ರಹ್ಮಾಂಡದಲ್ಲಿ ಪ್ರಧಾನವೇ (ಮಹತ್ತತ್ತ್ವವೇ) ಮೊದಲಾದ ಕಾರ್ಯಸಮೂಹದ, ಪಂಚಮಹಾಭೂತಾತ್ಮಕವಾದ, ಸಮಸ್ತ ಸ್ಥಾವರ ಜಂಗಮರೂಪದ ಜಗತ್ತಿನ ಉತ್ಪತ್ತಿಯಾಯಿತು.

೨೯. ಲಕ್ಷ್ಮಿಯೊಡಗೂಡಿ ಭಗವಾನ್ ವಿಷ್ಣುವು ಜಗತ್ತಿನ ಪಾಲನೆ-ಪೋಷಣೆ ಯನ್ನು ಮಾಡಿದನು; ಮತ್ತು ಪ್ರಳಯಕಾಲದಲ್ಲಿ ಗೌರಿಯೊಡಗೂಡಿ ಮಹೇಶ್ವರನು ಆ ಸಂಪೂರ್ಣ ಜಗತ್ತನ್ನು ಸಂಹಾರ ಮಾಡಿದನು.

೩೦. ಮಹಾರಾಜ, ಮಹಾಲಕ್ಷ್ಮಿಯೇ ಸರ್ವಸತ್ತ್ವಮಯಿಯು; ನಿರಾಕಾರ ಮತ್ತು ಸಾಕಾರರೂಪದಲ್ಲಿದ್ದು ಅವಳೇ ನಾನಾ ಪ್ರಕಾರವಾದ ಹೆಸರುಗಳನ್ನು ಧಾರಣೆ ಮಾಡುತ್ತಾಳೆ.

೩೧. ಸಗುಣವಾಚಕಗಳಾದ ಸತ್ಯ, ಜ್ಞಾನ, ಚಿತ್, ಮಹಾಮಾಯಾ ಮೊದಲಾದ ನಾಮಾಂತರಗಳಿಂದ ಈ ಮಹಾಲಕ್ಷ್ಮಿಯನ್ನು ನಿರೂಪಿಸತಕ್ಕದ್ದು. ಕೇವಲ (ಮಹಾಲಕ್ಷ್ಮಿಯೆಂಬ ಒಂದು ಹೆಸರಿನಿಂದಾಗಲೀ) ಅಥವಾ ಮತ್ತಾವ ಹೆಸರಿನಿಂದಲೇ ಆಗಲೀ ನಿರೂಪಿಸತಕ್ಕದ್ದಲ್ಲ.

ಹೀಗೆ ಪ್ರಾಧಾನಿಕ ರಹಸ್ಯವು ಮುಗಿಯಿತು.

# ವೈಕೃತಿಕಂ ರಹಸ್ಯಮ್

ಋಷಿರುವಾಚ

ತ್ರಿಗುಣಾ ತಾಮಸೀ ದೇವೀ ಸಾತ್ತ್ವಿಕೀ ಯಾ ತ್ರಿಧೋದಿತಾ ।
ಸಾ ಶರ್ವಾ ಚಂಡಿಕಾ ದುರ್ಗಾ ಭದ್ರಾ ಭಗವತೀರ್ಯತೇ ॥ ೧ ॥

ಯೋಗನಿದ್ರಾ ಹರೇರುಕ್ತಾ ಮಹಾಕಾಲೀ ತಮೋಗುಣಾ ।
ಮಧುಕೈಟಭನಾಶಾರ್ಥಂ ಯಾಂ ತುಷ್ಟಾವಾಂಬುಜಾಸನಃ ॥ ೨ ॥

ದಶವಕ್ತ್ರಾ ದಶಭುಜಾ ದಶಪಾದಾಂಜನಪ್ರಭಾ ।
ವಿಶಾಲಯಾ ರಾಜಮಾನಾ ತ್ರಿಂಶಲ್ಲೋಚನಮಾಲಯಾ ॥ ೩ ॥

ಸ್ಫುರದ್ದಶನದಂಷ್ಟ್ರಾ ಸಾ ಭೀಮರೂಪಾಽಪಿ ಭೂಮಿಪ ।
ರೂಪಸೌಭಾಗ್ಯಕಾಂತೀನಾಂ ಸಾ ಪ್ರತಿಷ್ಠಾ ಮಹಾಶ್ರಿಯಃ ॥ ೪ ॥

ಖಡ್ಗಬಾಣಗದಾಶೂಲಚಕ್ರಶಂಖಭುಶುಂಡಿಭೃತ್ ।
ಪರಿಘಂ ಕಾರ್ಮುಕಂ ಶೀರ್ಷಂ ನಿಶ್ಚ್ಯೋತದ್ರುಧಿರಂ ದಧೌ ॥ ೫ ॥

ಏಷಾ ಸಾ ವೈಷ್ಣವೀ ಮಾಯಾ ಮಹಾಕಾಲೀ ದುರತ್ಯಯಾ ।
ಆರಾಧಿತಾ ವಶೀಕುರ್ಯಾತ್ ಪೂಜಾಕರ್ತುಶ್ಚರಾಚರಮ್ ॥ ೬ ॥

ಸರ್ವದೇವಶರೀರೇಭ್ಯೋ ಯಾಽಽವಿರ್ಭೂತಾಽಮಿತಪ್ರಭಾ ।
ತ್ರಿಗುಣಾ ಸಾ ಮಹಾಲಕ್ಷ್ಮೀಃ ಸಾಕ್ಷಾನ್ಮಹಿಷಮರ್ದಿನೀ ॥ ೭ ॥

# ವೈಕೃತಿಕ ರಹಸ್ಯ

೧. ಋಷಿಯು ಇಂತೆಂದನು: ಹೇ ರಾಜನೇ, ಮೊದಲು ಸತ್ತ್ವ ಪ್ರಧಾನಳೂ, ತ್ರಿಗುಣಮಯಿಯೂ ಆದ ಮಹಾಲಕ್ಷ್ಮಿಯ ತಾಮಸೀ ಮೊದಲಾದ ಭೇದಗಳಿಂದ ಯಾವ ಮೂರು ಸ್ವರೂಪಗಳು ಹೇಳಲ್ಪಟ್ಟಿವೆಯೋ ಅವೇ ಶರ್ವಾ, ಚಂಡಿಕಾ, ದುರ್ಗಾ, ಭದ್ರಾ, ಭಗವತೀ ಇತ್ಯಾದಿಯಾಗಿ (ಅನೇಕ ಹೆಸರುಗಳಿಂದ) ಕರೆಯಲ್ಪಡುತ್ತವೆ.

೨. ತಮೋಗುಣಮಯಿಯಾದ ಮಹಾಕಾಳಿಯು ಭಗವಾನ್ ವಿಷ್ಣುವಿನ ಯೋಗನಿದ್ರೆಯೆಂದು ಹೇಳಲ್ಪಟ್ಟಿದ್ದಾಳೆ. ಮಧುಕೈಟಭರ ನಾಶಕ್ಕೋಸ್ಕರ ಬ್ರಹ್ಮನು ಯಾರ ಸ್ತುತಿಯನ್ನು ಮಾಡಿದ್ದನೋ ಅವಳೇ ಈ ಮಹಾಕಾಳಿಯು.

೩. ಅವಳಿಗೆ ಹತ್ತು ಮುಖಗಳೂ, ಹತ್ತು ಭುಜಗಳೂ ಮತ್ತು ಹತ್ತು ಕಾಲುಗಳೂ ಇವೆ. ಅವಳ ಮೈಬಣ್ಣ ಕಾಡಿಗೆಯಂತೆ ಕಪ್ಪು. ಅವಳು ಮೂವತ್ತು ಕಣ್ಣುಗಳಿಂದ ಕೂಡಿದ ವಿಶಾಲವಾದ ನಯನಮಾಲೆಯಿಂದ ಶೋಭಿಸುತ್ತಿರುವಳು.

೪. ಭೂಪಾಲಕನೇ, ಇವಳಿಗೆ ಕಾಂತಿಯುಕ್ತವಾದ ಹಲ್ಲುಗಳು ಮತ್ತು ದಾಡೆಗಳು ಇವೆ. ಅವಳು ರೂಪ, ಸೌಭಾಗ್ಯ, ಕಾಂತಿ ಮತ್ತು ಮಹೈಶ್ವರ್ಯ – ಇವುಗಳ ಅಧಿಷ್ಠಾತ್ರಿಯು.

೫. ಅವಳು ತನ್ನ ಕೈಗಳಲ್ಲಿ ಖಡ್ಗ, ಬಾಣ, ಗದೆ, ಶೂಲ, ಚಕ್ರ, ಶಂಖ, ಭುಶುಂಡಿ, ಪರಿಘ, ಧನುಸ್ಸು ಮತ್ತು ರಕ್ತವನ್ನು ತೊಟ್ಟಿಕ್ಕುತ್ತಿರುವ ರುಂಡ – ಇವನ್ನು ಧರಿಸಿರುತ್ತಾಳೆ.

೬. ಈ ಮಹಾಕಾಳಿಯು ಭಗವಾನ್ ವಿಷ್ಣುವಿನ ದುಸ್ತರವಾದ ಮಾಯೆ. ಇವಳನ್ನು ಆರಾಧಿಸಿದರೆ ಚರಾಚರಜಗತ್ತನ್ನು ತನ್ನ ಉಪಾಸಕನ ಅಧೀನವಾಗಿ ಮಾಡುತ್ತಾಳೆ.

೭. ಎಲ್ಲಾ ದೇವತೆಗಳ ಅಂಗಗಳಿಂದ ಯಾರ ಪ್ರಾದುರ್ಭಾವವಾಗಿದೆಯೋ ಅವಳೇ ಅನಂತಕಾಂತಿಯಿಂದ ಕೂಡಿದ ಸಾಕ್ಷಾತ್ ಮಹಾಲಕ್ಷ್ಮಿಯು. ಅವಳನ್ನೇ ತ್ರಿಗುಣಮಯೀ ಎಂದು ಕರೆಯುತ್ತಾರೆ; ಮತ್ತು ಅವಳೇ ಮಹಿಷಾಸುರರನ್ನು ಮರ್ದನ ಮಾಡಿದವಳು.

ಶ್ವೇತಾನನಾ ನೀಲಭುಜಾ ಸುಶ್ವೇತಸ್ತನಮಂಡಲಾ ।
ರಕ್ತಮಧ್ಯಾ ರಕ್ತಪಾದಾ ನೀಲಜಂಘೋರುರುನ್ಮದಾ ॥ ೮ ॥

ಸುಚಿತ್ರಜಘನಾ ಚಿತ್ರಮಾಲ್ಯಾಂಬರವಿಭೂಷಣಾ ।
ಚಿತ್ರಾನುಲೇಪನಾ ಕಾಂತಿರೂಪಸೌಭಾಗ್ಯಶಾಲಿನೀ ॥ ೯ ॥

ಅಷ್ಟಾದಶಭುಜಾ ಪೂಜ್ಯಾ ಸಾ ಸಹಸ್ರಭುಜಾ ಸತೀ ।
ಆಯುಧಾನ್ಯತ್ರ ವಕ್ಷ್ಯಂತೇ ದಕ್ಷಿಣಾಧಃಕರಕ್ರಮಾತ್ ॥ ೧೦ ॥

ಅಕ್ಷಮಾಲಾ ಚ ಕಮಲಂ ಬಾಣೋऽಸಿಃ ಕುಲಿಶಂ ಗದಾ ।
ಚಕ್ರಂ ತ್ರಿಶೂಲಂ ಪರಶುಃ ಶಂಖೋ ಘಂಟಾ ಚ ಪಾಶಕಃ ॥ ೧೧ ॥

ಶಕ್ತಿರ್ದಂಡಶ್ಚರ್ಮಚಾಪಂ ಪಾನಪಾತ್ರಂ ಕಮಂಡಲುಃ ।
ಅಲಂಕೃತಭುಜಾಮೇಭಿರಾಯುಧೈಃ ಕಮಲಾಸನಾಮ್ ॥ ೧೨ ॥

ಸರ್ವದೇವಮಯೀಮೀಶಾಂ ಮಹಾಲಕ್ಷ್ಮೀಮಿಮಾಂ ನೃಪ ।
ಪೂಜಯೇತ್ಸರ್ವಲೋಕಾನಾಂ ಸ ದೇವಾನಾಂ
ಪ್ರಭುರ್ಭವೇತ್ ॥ ೧೩ ॥

ಗೌರೀದೇಹಾತ್ಸಮುದ್ಭೂತಾ ಯಾ ಸತ್ತ್ವೈಕಗುಣಾಶ್ರಯಾ ।
ಸಾಕ್ಷಾತ್ಸರಸ್ವತೀ ಪ್ರೋಕ್ತಾ ಶುಂಭಾಸುರನಿಬರ್ಹಿಣೀ ॥ ೧೪ ॥

೮. ಅವಳ ಮುಖವು ಶ್ವೇತವರ್ಣದ್ದಾಗಿಯೂ, ಭುಜಗಳು ಶ್ಯಾಮಲ ವರ್ಣದ್ದಾಗಿಯೂ, ಸ್ತನಮಂಡಲವು ಅತ್ಯಂತ ಬಿಳಿಯಾಗಿಯೂ, ಕಟಿಭಾಗವು ಮತ್ತು ಚರಣಗಳು ಕೆಂಪುಬಣ್ಣದ್ದಾಗಿಯೂ, ತೊಡೆಯು ಮತ್ತು ಮೀನಗಂಡವು ನೀಲಿ ಬಣ್ಣದ್ದಾಗಿಯೂ ಶೋಭಿಸುತ್ತಿವೆ. ಅವಳು ಉನ್ನತ್ತಳಂತಿದ್ದಾಳೆ.

೯. ಕಟಿಯ ಮುಂದಿನ ಭಾಗವು ಬಣ್ಣಬಣ್ಣದ ವಸ್ತ್ರಗಳಿಂದ ಆಚ್ಛಾದಿತವಾದ ಕಾರಣ ಅತ್ಯಂತ ಸುಂದರವೂ ಮತ್ತು ವಿಚಿತ್ರವೂ ಆಗಿ ಕಾಣುತ್ತದೆ. ಅವಳ ಮಾಲೆ, ವಸ್ತ್ರ ಒಡವೆ, ಮತ್ತು ಸುಗಂಧಿತ ದ್ರವ್ಯಗಳಿಂದ ಕೂಡಿದ ಚಂದನದ ಲೇಪ ಅವೆಲ್ಲವೂ ವಿಚಿತ್ರವಾಗಿವೆ. ಅವಳು ರೂಪ, ಕಾಂತಿ ಮತ್ತು ಸೌಭಾಗ್ಯ ಇವುಗಳಿಂದ ಸುಶೋಭಿತಳಾಗಿದ್ದಾಳೆ.

೧೦. ಅವಳಿಗೆ ಭುಜಗಳು ಅಸಂಖ್ಯವಾಗಿದ್ದರೂ ಅವಳನ್ನು ಹದಿನೆಂಟು ಭುಜಗಳುಳ್ಳವಳೆಂದು ತಿಳಿದು ಪೂಜಿಸತಕ್ಕದ್ದು. ಈಗ ಅವಳ ಬಲಗಡೆಯ ಕೆಳಗಿನ ಕೈಯಿಂದ ಹಿಡಿದು ಎಡಗಡೆಯ ಕೆಳಗಿನ ಕೈಯವರೆಗೆ ಕ್ರಮವಾಗಿ ಇರುವ ಅಸ್ತ್ರಗಳ ವರ್ಣನೆಯು ಮಾಡಲ್ಪಡುತ್ತದೆ.

೧೧-೧೨. ಅಕ್ಷಮಾಲೆ, ಕಮಲ, ಬಾಣ, ಖಡ್ಗ, ವಜ್ರ, ಗದೆ, ಚಕ್ರ, ತ್ರಿಶೂಲ, ಪರಶು, ಶಂಖ, ಗಂಟೆ, ಪಾಶ, ಶಕ್ತಿ, ದಂಡ, ಚರ್ಮ, ಧನುಸ್ಸು, ಪಾನಪಾತ್ರೆ ಮತ್ತು ಕಮಂಡಲು – ಈ ಆಯುಧಗಳು ಅವಳ ಕೈಗಳನ್ನು ಅಲಂಕರಿಸಿವೆ. ಅವಳು ಕಮಲಾಸನದ ಮೇಲೆ ವಿರಾಜಮಾನಳಾಗಿದ್ದಾಳೆ. ಅವಳು ಸರ್ವದೇವಮಯಿಯು ಮತ್ತು ಎಲ್ಲರ ಈಶ್ವರಿಯು. ರಾಜನೆ, ಯಾರು ಈ ಮಹಾಲಕ್ಷ್ಮೀದೇವಿಯನ್ನು ಪೂಜಿಸುತ್ತಾರೋ, ಅವರು ಎಲ್ಲ ಲೋಕಗಳ ಮತ್ತು ದೇವತೆಗಳ ಸ್ವಾಮಿಯಾಗುತ್ತಾರೆ.

೧೪. ಯಾವಳು ಸತ್ತ್ವಗುಣದ ಏಕಮಾತ್ರ ಆಶ್ರಯಳಾಗಿದ್ದು ಪಾರ್ವತಿಯ ಶರೀರದಿಂದ ಪ್ರಕಟವಾಗಿದ್ದಳೋ ಮತ್ತು ಯಾವಳು ಶುಂಭಾ ಸುರನನ್ನು ಸಂಹಾರಮಾಡಿದ್ದಳೋ ಅವಳೇ ಸಾಕ್ಷಾತ್ ಸರಸ್ವತಿಯೆಂದು ಕರೆಯಲ್ಪಟ್ಟಿದ್ದಾಳೆ.

ದಧೌ ಚಾಷ್ಟಭುಜಾ ಬಾಣಾನ್ ಮುಸಲೇ ಶೂಲಚಕ್ರಭೃತ್ ।
ಶಂಖಂ ಘಂಟಾಂ ಲಾಂಗಲಂ ಚ ಕಾರ್ಮುಕಂ ವಸುಧಾಧಿಪ ॥ ೧೫ ॥

ಏಷಾ ಸಂಪೂಜಿತಾ ಭಕ್ತ್ಯಾ ಸರ್ವಜ್ಞತ್ವಂ ಪ್ರಯಚ್ಛತಿ ।
ನಿಶುಂಭಮಥಿನೀ ದೇವೀ ಶುಂಭಾಸುರನಿಬರ್ಹಿಣೀ ॥ ೧೬ ॥

ಇತ್ಯುಕ್ತಾನಿ ಸ್ವರೂಪಾಣಿ ಮೂರ್ತೀನಾಂ ತವ ಪಾರ್ಥಿವ ।
ಉಪಾಸನಂ ಜಗನ್ಮಾತುಃ ಪೃಥಗಾಸಾಂ ನಿಶಾಮಯ ॥ ೧೭ ॥

ಮಹಾಲಕ್ಷ್ಮೀರ್ಯದಾ ಪೂಜ್ಯಾ ಮಹಾಕಾಲೀ ಸರಸ್ವತೀ ।
ದಕ್ಷಿಣೋತ್ತರಯೋಃ ಪೂಜ್ಯೇ ಪೃಷ್ಠತೋ
ಮಿಥುನತ್ರಯಮ್ ॥ ೧೮ ॥

ವಿರಿಂಚಿಃ ಸ್ವರಯಾ ಮಧ್ಯೇ ರುದ್ರೋ ಗೌರ್ಯಾ ಚ ದಕ್ಷಿಣೇ ।
ವಾಮೇ ಲಕ್ಷ್ಮ್ಯಾ ಹೃಷೀಕೇಶಃ ಪುರತೋ ದೇವತಾತ್ರಯಮ್ ॥ ೧೯ ॥

ಅಷ್ಟಾದಶಭುಜಾ ಮಧ್ಯೇ ವಾಮೇ ಚಾಸ್ಯಾ ದಶಾನನಾ ।
ದಕ್ಷಿಣೇಽಷ್ಟಭುಜಾ ಲಕ್ಷ್ಮೀರ್ಮಹತೀತಿ ಸಮರ್ಚಯೇತ್ ॥ ೨೦ ॥

೧೫. ಹೇ ರಾಜನೆ, ಅವಳಿಗೆ ಎಂಟು ಭುಜಗಳಿವೆ. ಅವಳು ತನ್ನ ಕರಗಳಲ್ಲಿ ಕ್ರಮವಾಗಿ - ಬಾಣ, ಒನಕೆ, ಶೂಲ, ಚಕ್ರ, ಶಂಖ, ಗಂಟೆ, ನೇಗಿಲು ಮತ್ತು ಧನುಸ್ಸು - ಇವನ್ನು ಧರಿಸಿರುತ್ತಾಳೆ.

೧೬. ನಿಶುಂಭನನ್ನು ಮರ್ದನಮಾಡಿದ ಮತ್ತು ಶುಂಭಾಸುರನನ್ನು ಸಂಹಾರಮಾಡಿದ ಈ ಸರಸ್ವತೀದೇವಿಯು ಭಕ್ತಿಪೂರ್ವಕವಾಗಿ ಪೂಜಿಸಲ್ಪಟ್ಟರೆ ಸರ್ವಜ್ಞತ್ವವನ್ನು ದಯಪಾಲಿಸುತ್ತಾಳೆ.

೧೭. ಎಲೈ ರಾಜನೇ, ಈ ಪ್ರಕಾರವಾಗಿ ನಿನಗೆ ಮಹಾಕಾಳಿಯೇ ಮೊದಲಾದ ಮೂರು ಮೂರ್ತಿಗಳ ಸ್ವರೂಪವನ್ನು ಹೇಳಿದ್ದಾಯಿತು. ಈಗ ಜಗನ್ಮಾತೆಯ ಮೂರು ಮೂರ್ತಿಗಳ ಬೇರೆ ಬೇರೆ ಉಪಾಸನಾವಿಧಾನಗಳನ್ನು ಕೇಳು.

೧೮. ಮಹಾಲಕ್ಷ್ಮಿಯನ್ನು ಪೂಜಿಸಬೇಕಾದಲ್ಲಿ ಅವಳನ್ನು ಮಧ್ಯದಲ್ಲಿ ಸ್ಥಾಪನೆಮಾಡಿ, ಅವಳ ದಕ್ಷಿಣ ಮತ್ತು ವಾಮ ಪಾರ್ಶ್ವಗಳಲ್ಲಿ ಕ್ರಮಶಃ ಮಹಾಕಾಳೀ ಮತ್ತು ಮಹಾಸರಸ್ವತೀ ಇವರ ಪೂಜೆಯನ್ನು ಮಾಡಬೇಕು. ಹಿಂದುಗಡೆಯಲ್ಲಿ ಮೂರು ಜೋಡಿ ದೇವತೆಗಳ ಪೂಜೆಯನ್ನು ಮಾಡಬೇಕು.

೧೯. ಮಹಾಲಕ್ಷ್ಮಿಯ ಹಿಂದೆ ಮಧ್ಯಭಾಗದಲ್ಲಿ ಸರಸ್ವತಿಯ ಜೊತೆಗೆ ಬ್ರಹ್ಮನ ಪೂಜೆಯಾಗಲಿ; ಅವರ ದಕ್ಷಿಣಪಾರ್ಶ್ವದಲ್ಲಿ ಲಕ್ಷ್ಮಿಯ ಸಹಿತ ವಿಷ್ಣುವಿನ ಪೂಜೆಯೂ ನಡೆಯಲಿ. ಮಹಾಲಕ್ಷ್ಮಿಯೇ ಮೊದಲಾದ ಮೂವರು ದೇವಿಯರ ಎದುರುಗಡೆ ಕೆಳಗೆ ಹೇಳಿದ ಮೂವರು ದೇವಿಯರನ್ನು ಪೂಜಿಸತಕ್ಕದ್ದು.

೨೦. ಮಧ್ಯದಲ್ಲಿರುವ ಮಹಾಲಕ್ಷ್ಮಿಯ ಎದುರುಗಡೆ ಮಧ್ಯಭಾಗದಲ್ಲಿ ಹದಿನೆಂಟು ಭುಜಗಳುಳ್ಳ ಮಹಾಲಕ್ಷ್ಮಿಯ ಪೂಜೆಯನ್ನು ಮಾಡಲಿ. ಅವಳ ವಾಮಭಾಗದಲ್ಲಿ ಹತ್ತುಮುಖಗಳುಳ್ಳ ಮಹಾಕಾಳಿಯ ಮತ್ತು ದಕ್ಷಿಣಭಾಗದಲ್ಲಿ ಎಂಟು ಭುಜಗಳುಳ್ಳ ಮಹಾಸರಸ್ವತಿಯ ಪೂಜೆಯನ್ನು ಮಾಡಲಿ.

ಅಷ್ಟಾದಶಭುಜಾ ಚೈಷಾ ಯದಾ ಪೂಜ್ಯಾ ನರಾಧಿಪ ।
ದಶಾನನಾ ಚಾಷ್ಟಭುಜಾ ದಕ್ಷಿಣೋತ್ತರಯೋಸ್ತದಾ ॥ ೨೧ ॥

ಕಾಲಮೃತ್ಯೂ ಚ ಸಂಪೂಜ್ಯೌ ಸರ್ವಾರಿಷ್ಟಪ್ರಶಾಂತಯೇ ।
ಯದಾ ಚಾಷ್ಟಭುಜಾ ಪೂಜ್ಯಾ ಶುಂಭಾಸುರನಿಬರ್ಹಿಣೀ ॥ ೨೨ ॥

ನವಾಸ್ಯಾಃ ಶಕ್ತಯಃ ಪೂಜ್ಯಾಸ್ತದಾ ರುದ್ರವಿನಾಯಕೌ ।
ನಮೋ ದೇವ್ಯಾ ಇತಿ ಸ್ತೋತ್ರೈರ್ಮಹಾಲಕ್ಷ್ಮೀಂ
ಸಮರ್ಚಯೇತ್ ॥ ೨೩ ॥

ಅವತಾರತ್ರಯಾರ್ಚಾಯಾಂ ಸ್ತೋತ್ರಮಂತ್ರಾಸ್ತದಾಶ್ರಯಾಃ ।
ಅಷ್ಟಾದಶಭುಜಾ ಚೈಷಾ ಪೂಜ್ಯಾ ಮಹಿಷಮರ್ದಿನೀ ॥ ೨೪ ॥

ಮಹಾಲಕ್ಷ್ಮೀರ್ಮಹಾಕಾಲೀ ಸೈವ ಪ್ರೋಕ್ತಾ ಸರಸ್ವತೀ ।
ಈಶ್ವರೀ ಪುಣ್ಯಪಾಪಾನಾಂ ಸರ್ವಲೋಕಮಹೇಶ್ವರೀ ॥ ೨೫ ॥

ಮಹಿಷಾಂತಕರೀ ಯೇನ ಪೂಜಿತಾ ಸ ಜಗತ್ಪ್ರಭುಃ ।
ಪೂಜಯೇಜ್ಜಗತಾಂ 'ಧಾತ್ರೀಂ ಚಂಡಿಕಾಂ ಭಕ್ತವತ್ಸಲಾಮ್ ॥ ೨೬ ॥

ಅರ್ಘ್ಯಾದಿಭಿರಲಂಕಾರೈರ್ಗಂಧಪುಷ್ಪೈಸ್ತಥಾಽಕ್ಷತೈಃ ।
ಧೂಪೈರ್ದೀಪೈಶ್ಚ ನೈವೇದ್ಯೈರ್ನಾನಾಭಕ್ಷ್ಯಸಮನ್ವಿತೈಃ ॥ ೨೭ ॥.

ರುಧಿರಾಕ್ತೇನ ಬಲಿನಾ ಮಾಂಸೇನ ಸುರಯಾ ನೃಪ ।
ಬಲಿಮಾಂಸಾದಿಪೂಜೇಯಂ ವಿಪ್ರವರ್ಜ್ಯಾ ಮಯೇರಿತಾ ॥ ೨೮ ॥

೨೧-೨೩. ಹೇ ನರಾಧಿಪನೇ, ಹದಿನೆಂಟು ಭುಜಗಳುಳ್ಳ ಮಹಾಲಕ್ಷ್ಮಿ ಅಥವಾ ಹತ್ತು ಮುಖಗಳುಳ್ಳ ಕಾಳಿ ಅಥವಾ ಎಂಟು ಭುಜಗಳುಳ್ಳ ಸರಸ್ವತಿ ಕೇವಲ ಇವರ ಪೂಜೆಯನ್ನು ಮಾಡಬೇಕಾದಲ್ಲಿ ಎಲ್ಲಾ ಅರಿಷ್ಟಗಳ ಶಾಂತಿಗೋಸ್ಕರ ಇವರ ದಕ್ಷಿಣ ಪಾರ್ಶ್ವದಲ್ಲಿ ಕಾಲನ ಮತ್ತು ವಾಮಭಾಗ ದಲ್ಲಿ ಮೃತ್ಯುವಿನ ಪೂಜೆಯನ್ನು ಮಾಡಬೇಕು. ಶುಂಭಾಸುರನನ್ನು ಸಂಹಾರ ಮಾಡಿದ ಎಂಟು ಭುಜಗಳುಳ್ಳ ದೇವಿಯ ಪೂಜೆಯನ್ನು ಮಾಡಬೇಕಾದಲ್ಲಿ ಅವಳ ಜೊತೆಗೆ ಅವಳ ನವಶಕ್ತಿಗಳ (ಬ್ರಾಹ್ಮೀ, ಮಾಹೇಶ್ವರಿ, ಕೌಮಾರೀ, ವೈಷ್ಣವೀ, ವಾರಾಹೀ, ನಾರಸಿಂಹೀ, ಐಂದ್ರೀ, ಶಿವದೂತೀ ಮತ್ತು ಚಾಮುಂಡಾ - ಇವು ನವಶಕ್ತಿಗಳು) ಮತ್ತು ವಾಮಪಾರ್ಶ್ವದಲ್ಲಿ ರುದ್ರ ಮತ್ತು ಗಣೇಶರ ಪೂಜೆಯನ್ನು ಮಾಡಬೇಕು. ''ನಮೋ ದೇವ್ಯೈ'' ಈ ಸ್ತೋತ್ರದಿಂದ ಮಹಾಲಕ್ಷ್ಮಿಯ ಪೂಜೆಯನ್ನು ಮಾಡಬೇಕು.

೨೪-೨೫. ಅವಳ ಮೂರು ಅವತಾರಗಳನ್ನು ಪೂಜಿಸುವ ಸಮಯದಲ್ಲಿ ಆಯಾ ಅವತಾರವನ್ನು ಆಶ್ರಯಿಸಿರುವ ಯಾವ ಸ್ತೋತ್ರ-ಮಂತ್ರಗಳು ಇವೆಯೋ ಅವುಗಳನ್ನೇ ಉಪಯೋಗಿಸಬೇಕು. ಹದಿನೆಂಟು ಭುಜ ಗಳುಳ್ಳವಳೂ ಮಹಿಷಾಸುರಮರ್ದಿನಿಯೂ ಆದ ಮಹಾಲಕ್ಷ್ಮಿಯೇ ವಿಶೇಷ ರೂಪದಿಂದ ಪೂಜನೀಯಳು; ಏಕೆಂದರೆ ಅವಳೇ ಮಹಾಲಕ್ಷ್ಮೀ, ಮಹಾಕಾಳೀ ಮತ್ತು ಮಹಾಸರಸ್ವತೀ ಎಂದು ಕರೆಯಲ್ಪಡುತ್ತಾಳೆ. ಅವಳೇ ಪಾಪಪುಣ್ಯಗಳ ಅಧೀಶ್ವರಿಯು, ಮತ್ತು ಸರ್ವಲೋಕಗಳ ಮಹೇಶ್ವರಿಯು.

೨೬. ಯಾವನು ಮಹಿಷಾಸುರನನ್ನು ಸಂಹಾರ ಮಾಡಿದ ಮಹಾಲಕ್ಷ್ಮಿ ಯನ್ನು ಭಕ್ತಿಪೂರ್ವಕವಾಗಿ ಪೂಜಿಸಿದ್ದಾನೋ ಅವನೇ ಜಗತ್ತಿನ ಸ್ವಾಮಿಯು. ಆದ್ದರಿಂದ ಜಗತ್ತನ್ನು ಧರಿಸಿರುವ ಭಕ್ತವತ್ಸಲೆಯೂ ಭಗವತಿಯೂ ಆದ ಚಂಡಿಕಾದೇವಿಯನ್ನು ಅವಶ್ಯವಾಗಿ ಪೂಜಿಸಬೇಕು.

೨೭-೩.೫. ಅರ್ಘ್ಯವೇ ಮೊದಲಾದವುಗಳಿಂದ, ಭೂಷಣಗಳಿಂದ, ಗಂಧ, ಪುಷ್ಪ, ಅಕ್ಷತೆ, ಧೂಪ, ದೀಪ ಮತ್ತು ನಾನಾ ಪ್ರಕಾರವಾದ ಭಕ್ಷ್ಯ

ತೇಷಾಂ ಕಿಲ ಸುರಾಮಾಂಸೈರ್ನೋಕ್ತಾ ಪೂಜಾ ನೃಪ ಕ್ವಚಿತ್ ।
ಪ್ರಣಾಮಾಽಚಮನೀಯೇನ ಚಂದನೇನ ಸುಗಂಧಿನಾ ॥ ೨೯ ॥

ಸಕರ್ಪೂರೈಶ್ಚ ತಾಂಬೂಲೈರ್ಭಕ್ತಿಭಾವಸಮನ್ವಿತೈಃ ।
ವಾಮಭಾಗೇಽಗ್ರತೋ ದೇವ್ಯಾಶ್ಛಿನ್ನಶೀರ್ಷಂ ಮಹಾಸುರಮ್ ॥ ೩೦ ॥

ಪೂಜಯೇನ್ಮಹಿಷಂ ಯೇನ ಪ್ರಾಪ್ತಂ ಸಾಯುಜ್ಯಮೀಶಯಾ ।
ದಕ್ಷಿಣೇ ಪುರತಃ ಸಿಂಹಂ ಸಮಗ್ರಂ ಧರ್ಮಮೀಶ್ವರಮ್ ॥ ೩೧ ॥

ವಾಹನಂ ಪೂಜಯೇದ್ದೇವ್ಯಾ ಧೃತಂ ಯೇನ ಚರಾಚರಮ್ ।
ಕುರ್ಯಾಚ್ಚ ಸ್ತವನಂ ಧೀಮಾಂಸ್ತಸ್ಯಾ ಏಕಾಗ್ರಮಾನಸಃ ॥ ೩೨ ॥

ತತಃ ಕೃತಾಂಜಲಿರ್ಭೂತ್ವಾ ಸ್ತುವೀತ ಚರಿತೈರಿಮೈಃ ।
ಏಕೇನ ವಾ ಮಧ್ಯಮೇನ ನೈಕೇನೇತರಯೋರಿಹ ॥ ೩೩ ॥

ಚರಿತಾರ್ಧಂ ತು ನ ಜಪೇಜ್ಜಪಂಛಿದ್ರಮವಾಪ್ನುಯಾತ್ ।
ಪ್ರದಕ್ಷಿಣಾನಮಸ್ಕಾರಾನ್ ಕೃತ್ವಾ ಮೂರ್ಧ್ನಿ ಕೃತಾಂಜಲಿಃ ॥ ೩೪ ॥

ಕ್ಷಮಾಪಯೇಜ್ಜಗದ್ಧಾತ್ರೀಂ ಮುಹುರ್ಮುಹುರತಂದ್ರಿತಃ ।
ಪ್ರತಿಶ್ಲೋಕಂ ಚ ಜುಹುಯಾತ್ಪಾಯಸಂ ತಿಲಸರ್ಪಿಷಾ ॥ ೩೫ ॥

ಪದಾರ್ಥಗಳು ಇವುಗಳಿಂದ ಕೂಡಿದ ನೈವೇದ್ಯಗಳಿಂದ, ರಕ್ತಸಿಂಚಿತವಾದ ಬಲಿಯಿಂದ, ಮಾಂಸದಿಂದ ಮತ್ತು ಸುರೆಯಿಂದ ಕೂಡಾ ದೇವಿಯ ಪೂಜೆಯನ್ನು ಮಾಡಬಹುದು. ರಾಜನೇ, ಬಲಿ ಮಾಂಸಾದಿಗಳಿಂದ ಮಾಡಲ್ಪಡುವ ಪೂಜೆಯು ಬ್ರಾಹ್ಮಣೇತರರಿಗಾಗಿ ಹೇಳಲ್ಪಟ್ಟಿದೆ. ಬ್ರಾಹ್ಮಣರಿಗೆ ಮಾಂಸದಿಂದ ಮತ್ತು ಮದಿರೆಯಿಂದ ಮಾಡುವ ಪೂಜೆಯು ಅನ್ವಯಿಸುವುದಿಲ್ಲ. ಪ್ರಣಾಮ, ಆಚಮನಕ್ಕಾಗಿ ಯೋಗ್ಯಜಲ, ಸುಗಂಧಿತ ಚಂದನ, ಕರ್ಪೂರ ಮತ್ತು ತಾಂಬೂಲ ಇವೇ ಮೊದಲಾದ ಸಾಮಗ್ರಿಗಳನ್ನು ಭಕ್ತಿಪೂರ್ವಕವಾಗಿ ನಿವೇದನೆ ಮಾಡಿ ದೇವಿಯ ಪೂಜೆಯನ್ನು ಮಾಡಬೇಕು. ದೇವಿಯ ಎದುರು ಎಡಭಾಗದಲ್ಲಿ ಭಗವತಿಯಲ್ಲೇ ಐಕ್ಯನಾದ, ತುಂಡರಿಸಿದ ಶಿರಸ್ಸುಳ್ಳ ಮಹಾದೈತ್ಯ ಮಹಿಷಾಸುರನ ಪೂಜೆಯನ್ನೂ ಮಾಡಬೇಕು. ಇದೇ ಪ್ರಕಾರ ದೇವಿಯ ಎದುರು ಬಲಭಾಗದಲ್ಲಿ ಷಡ್‌ವಿಧ ಐಶ್ವರ್ಯಗಳಿಂದ ಕೂಡಿದ, ಸಂಪೂರ್ಣ ಧರ್ಮದ ಪ್ರತೀಕವಾಗಿರುವ ಅವಳ ವಾಹನವಾದ ಸಿಂಹದ ಪೂಜೆಯನ್ನೂ ಮಾಡಬೇಕು; ಅದೇ ಈ ಚರಾಚರ ಜಗತ್ತನ್ನು ಧರಿಸಿದೆ. ತದನಂತರ ಬುದ್ಧಿವಂತ ಪುರುಷನು ಏಕಾಗ್ರಚಿತ್ತನಾಗಿ ದೇವಿಯ ಸ್ತುತಿಯನ್ನು ಮಾಡಲಿ. ಆಮೇಲೆ ಕೈಜೋಡಿಸಿ ಹಿಂದೆ ಹೇಳಿದ ಮೂರೂ ಚರಿತ್ರೆಗಳ ಮೂಲಕ ಭಗವತಿಯ ಗುಣಗಾನವನ್ನು ಮಾಡಲಿ. ಯಾರಾದರೂ ಒಂದೇ ಚರಿತ್ರದ ಮೂಲಕ ಸ್ತುತಿ ಮಾಡಲು ಇಚ್ಛಿಪಡುವುದಾದರೆ ಕೇವಲ ಮಧ್ಯಮ ಚರಿತ್ರದ ಪಠನದ ಮೂಲಕ ಮಾಡಲಿ. ಆದರೆ ಪ್ರಥಮ ಮತ್ತು ತೃತೀಯ ಚರಿತ್ರಗಳಲ್ಲಿ ಒಂದರ ಪಠನವನ್ನು ಮಾಡಬಾರದು. ಯಾವನು ಅರ್ಧ ಚರಿತ್ರದ ಪಠನವನ್ನು ಮಾಡುತ್ತಾನೋ ಅವನ ಪಠನವು ಸಫಲವಾಗುವುದಿಲ್ಲ. ಪಠನವು ಮುಗಿದ ಮೇಲೆ ಸಾಧಕನು ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ, ಆಲಸ್ಯವನ್ನು ತ್ಯಜಿಸಿ ತಲೆಯಮೇಲೆ ಕೈಜೋಡಿಸಿ ಪುನಃ ಪುನಃ ಅಪರಾಧಗಳನ್ನು ಮನ್ನಿಸುವಂತೆ ಜಗದಂಬೆಗೆ ಕ್ಷಮಾ ಪ್ರಾರ್ಥನೆಯನ್ನು ಮಾಡಲಿ. ಸಪ್ತಶತಿಯ ಪ್ರತಿಯೊಂದು ಶ್ಲೋಕವೂ ಮಂತ್ರರೂಪದಲ್ಲಿದೆ. ಆದ್ದರಿಂದ ಎಳ್ಳಿನಿಂದ ಮತ್ತು ತುಪ್ಪದಿಂದ ಕೂಡಿದ ಪಾಯಸವನ್ನು ಆಹುತಿಕೊಡಲಿ.

ಜುಹುಯಾತ್ ಸ್ತೋತ್ರಮಂತ್ರೈರ್ವಾ ಚಂಡಿಕಾಯೈ ಶುಭಂ ಹವಿಃ ।
ಭೂಯೋ ನಾಮಪದೈರ್ದೇವೀಂ ಪೂಜಯೇತ್ಸುಸಮಾಹಿತಃ ॥ ೩೬ ॥

ಪ್ರಯತಃ ಪ್ರಾಂಜಲಿಃ ಪ್ರಹ್ವಃ ಪ್ರಣಮ್ಯಾರೋಪ್ಯ ಚಾತ್ಮನಿ ।
ಸುಚಿರಂ ಭಾವಯೇದೀಶಾಂ ಚಂಡಿಕಾಂ ತನ್ಮಯೋ ಭವೇತ್ ॥ ೩೭ ॥

ಏವಂ ಯಃ ಪೂಜಯೇದ್ಭಕ್ತ್ಯಾ ಪ್ರತ್ಯಹಂ ಪರಮೇಶ್ವರೀಮ್ ।
ಭುಕ್ತ್ವಾ ಭೋಗಾನ್ ಯಥಾಕಾಮಂ
ದೇವೀಸಾಯುಜ್ಯಮಾಪ್ನುಯಾತ್ ॥ ೩೮ ॥

ಯೋ ನ ಪೂಜಯತೇ ನಿತ್ಯಂ ಚಂಡಿಕಾಂ ಭಕ್ತವತ್ಸಲಾಮ್ ।
ಭಸ್ಮೀಕೃತ್ಯಾಸ್ಯ ಪುಣ್ಯಾನಿ ನಿರ್ದಹೇತ್ಪರಮೇಶ್ವರೀ ॥ ೩೯ ॥

ತಸ್ಮಾತ್ಪೂಜಯ ಭೂಪಾಲ ಸರ್ವಲೋಕಮಹೇಶ್ವರೀಮ್ ।
ಯಥೋಕ್ತೇನ ವಿಧಾನೇನ ಚಂಡಿಕಾಂ ಸುಖಮಾಪ್ಸ್ಯಸಿ ॥ ೪೦ ॥

॥ ಇತಿ ವೈಕೃತಿಕ ರಹಸ್ಯಂ ಸಂಪೂರ್ಣಾಮ್ ॥

೩೬. ಅಥವಾ ಸಪ್ತಶತಿಗಳಲ್ಲಿ ಯಾವ ಸ್ತೋತ್ರಗಳು ಬಂದಿವೆಯೋ ಅವುಗಳ ಮಂತ್ರಗಳಿಂದ ಚಂಡಿಕೆಗೋಸ್ಕರ ಪವಿತ್ರ ಹವಿಸ್ಸಿನ ಹೋಮವನ್ನು ಮಾಡಲಿ. ಹೋಮದ ಅನಂತರ ಏಕಾಗ್ರಚಿತ್ತದಿಂದ ಮಹಾಲಕ್ಷ್ಮೀದೇವಿಯ ನಾಮಮಂತ್ರಗಳನ್ನು ಉಚ್ಚರಿಸುತ್ತಾ ಪುನಃ ಅವಳ ಪೂಜೆಯನ್ನು ಮಾಡಲಿ.

೩೭. ಆಮೇಲೆ ಮನಸ್ಸನ್ನೂ, ಇಂದ್ರಿಯಗಳನ್ನೂ ವಶದಲ್ಲಿಟ್ಟುಕೊಂಡು ಕೈಮುಗಿದುಕೊಂಡು, ವಿನೀತ ಭಾವದಿಂದ ದೇವಿಗೆ ಪ್ರಣಾಮ ಮಾಡಲಿ; ಮತ್ತು ಅಂತಃಕರಣದಲ್ಲಿ ಆ ಸರ್ವೇಶ್ವರಿ ಚಂಡಿಕಾದೇವಿಯನ್ನು ಸ್ಥಾಪನೆಮಾಡಿ ಚಿರಕಾಲ ಚಿಂತನೆ ಮಾಡುತ್ತ ಅವಳಲ್ಲೇ ತನ್ಮಯನಾಗಲಿ.

೩೮. ಈ ಪ್ರಕಾರವಾಗಿ ಯಾವನು ಪ್ರತಿದಿನವೂ ಭಕ್ತಿಪೂರ್ವಕವಾಗಿ ಪರಮೇಶ್ವರಿಯ ಪೂಜೆಯನ್ನು ಮಾಡುತ್ತಾನೋ ಅವನು ಮನೋವಾಂಛಿತ ಭೋಗಗಳನ್ನು ಭೋಗಿಸಿ ಕೊನೆಯಲ್ಲಿ ದೇವಿಯಲ್ಲೇ ಐಕ್ಯನಾಗುತ್ತಾನೆ.

೩೯. ಯಾವನು ಭಕ್ತವತ್ಸಲೆಯಾದ ಚಂಡಿಕೆಯ ಪೂಜೆಯನ್ನು ಪ್ರತಿದಿನವೂ ಮಾಡುವುದಿಲ್ಲವೋ, ಪರಮೇಶ್ವರಿಯು ಅವನ ಪುಣ್ಯಗಳನ್ನೆಲ್ಲಾ ಸುಟ್ಟು ಭಸ್ಮ ಮಾಡುತ್ತಾಳೆ.

೪೦. ಆದ್ದರಿಂದ ರಾಜನೆ, ನೀನು ಸರ್ವಲೋಕಮಹೇಶ್ವರಿಯಾದ ಚಂಡಿಕೆಯನ್ನು ಶಾಸ್ತ್ರೋಕ್ತವಾಗಿ ಪೂಜಿಸು. ಅವಳು ನಿನಗೆ ಸುಖವನ್ನು ಕೊಡುತ್ತಾಳೆ.

ಹೀಗೆ ವೈಕೃತಿಕ ರಹಸ್ಯವು ಮುಗಿಯಿತು.

# ಮೂರ್ತಿರಹಸ್ಯಮ್

ಋಷಿರುವಾಚ

ಓಮ್ । ನಂದಾ ಭಗವತೀ ನಾಮ ಯಾ ಭವಿಷ್ಯತಿ ನಂದಜಾ ।
ಸ್ತುತಾ ಸಾ ಪೂಜಿತಾ ಭಕ್ತ್ಯಾ ವಶೀಕುರ್ಯಾಜ್ಜಗತ್ತ್ರಯಮ್ ॥ ೧ ॥

ಕನಕೋತ್ತಮಕಾಂತಿಃ ಸಾ ಸುಕಾಂತಿಕನಕಾಂಬರಾ ।
ದೇವೀ ಕನಕವರ್ಣಾಭಾ ಕನಕೋತ್ತಮಭೂಷಣಾ ॥ ೨ ॥

ಕಮಲಾಂಕುಶಪಾಶಾಬ್ಜೈರಲಂಕೃತಚತುರ್ಭುಜಾ ।
ಇಂದಿರಾ ಕಮಲಾ ಲಕ್ಷ್ಮೀಃ ಸಾ ಶ್ರೀ ರುಕ್ಮಾಂಬುಜಾಸನಾ ॥ ೩ ॥

ಯಾ ರಕ್ತದಂತಿಕಾ ನಾಮ ದೇವೀ ಪ್ರೋಕ್ತಾ ಮಯಾಽನಘ ।
ತಸ್ಯಾಃ ಸ್ವರೂಪಂ ವಕ್ಷ್ಯಾಮಿ ಶೃಣು ಸರ್ವಭಯಾಪಹಮ್ ॥ ೪ ॥

ರಕ್ತಾಂಬರಾ ರಕ್ತವರ್ಣಾ ರಕ್ತಸರ್ವಾಂಗಭೂಷಣಾ ।
ರಕ್ತಾಯುಧಾ ರಕ್ತನೇತ್ರಾ ರಕ್ತಕೇಶಾಽತಿಭೀಷಣಾ ॥ ೫ ॥

ರಕ್ತತೀಕ್ಷ್ಣನಖಾ ರಕ್ತದಶನಾ ರಕ್ತದಂತಿಕಾ ।
ಪತಿಂ ನಾರೀವಾನುರಕ್ತಾ ದೇವೀ ಭಕ್ತಂ ಭಜೇಜ್ಜನಮ್ ॥ ೬ ॥

ವಸುಧೇವ ವಿಶಾಲಾ ಸಾ ಸುಮೇರುಯುಗಲಸ್ತನೀ ।
ದೀರ್ಘೌ ಲಂಬಾವತಿಸ್ಥೂಲೌ ತಾವತೀವ ಮನೋಹರೌ ॥ ೭ ॥

ಕರ್ಕಶಾವತಿಕಾಂತೌ ತೌ ಸರ್ವಾನಂದಪಯೋನಿಧೀ ।
ಭಕ್ತಾನ್ ಸಂಪಾಯಯೇದ್ದೇವೀ ಸರ್ವಕಾಮದುಘೌ ಸ್ತನೌ ॥ ೮ ॥

# ಮೂರ್ತಿರಹಸ್ಯ

೧. ಋಷಿಯು ಹೇಳಿದನು : ರಾಜನೇ, ನಂದನ ಮಗಳಾಗಿ ಹುಟ್ಟುವ ನಂದಾದೇವಿಯ ಪೂಜೆಯನ್ನು ಮತ್ತು ಸ್ತುತಿಯನ್ನು ಭಕ್ತಿಯಿಂದ ಮಾಡಿದಲ್ಲಿ ಅವಳೇ ಮೂರೂ ಲೋಕಗಳನ್ನು ಉಪಾಸಕನ ಅಧೀನವಾಗಿ ಮಾಡುತ್ತಾಳೆ.

೨. ಅವಳ ಅಂಗಗಳ ಕಾಂತಿಯು ಕನಕದಂತೆ ಉತ್ತಮವಾಗಿದೆ. ಅವಳು ಸುವರ್ಣವರ್ಣದ ಸುಂದರ ವಸ್ತ್ರವನ್ನು ಧರಿಸಿರುತ್ತಾಳೆ. ಅವಳ ವರ್ಣವು ಚಿನ್ನದ ವರ್ಣದಂತಿದೆ; ಮತ್ತು ಅವಳು ಸುವರ್ಣದಿಂದ ಮಾಡಿದ ಉತ್ತಮ ಆಭರಣಗಳನ್ನೇ ಧರಿಸಿರುತ್ತಾಳೆ.

೩. ಅವಳ ನಾಲ್ಕು ಕೈಗಳಲ್ಲಿ ಕಮಲ, ಅಂಕುಶ, ಪಾಶ ಮತ್ತು ಶಂಖ ಇವು ಇವೆ. ಅವಳು ಇಂದಿರಾ, ಕಮಲಾ, ಲಕ್ಷ್ಮೀ, ಶ್ರೀ ಮತ್ತು ರುಕ್ಮಾಂ-ಬುಜಾಸನಾ ಇವೇ ಮೊದಲಾದ ಹೆಸರುಗಳಿಂದ ಕರೆಯಲ್ಪಡುತ್ತಾಳೆ.

೪. ನಿಷ್ಪಾಪನಾದ ನರೇಶನೇ, ಮೊದಲು ನಾನು ರಕ್ತದಂತಿಕಾ ಎಂಬ ಹೆಸರಿನಿಂದ ಯಾವ ದೇವಿಯ ವಿಷಯವನ್ನು ಹೇಳಿದ್ದೆನೋ ಅವಳ ಸರ್ವ ಭಯನಿವಾರಕವಾದ ಸ್ವರೂಪದ ವರ್ಣನೆಯನ್ನು ಈಗ ಮಾಡುತ್ತೇನೆ. ಕೇಳು.

೫-೬. ಅವಳು ಕೆಂಪುಬಣ್ಣದ ವಸ್ತ್ರವನ್ನು ಧರಿಸಿರುತ್ತಾಳೆ. ಅವಳ ಶರೀರದ ಬಣ್ಣವೂ ಕೆಂಪು, ಮತ್ತು ಅವಳ ಅಂಗಗಳಲ್ಲಿರುವ ಎಲ್ಲಾ ಆಭರಣಗಳೂ ಕೆಂಪು. ಅವಳ ಅಸ್ತ್ರಶಸ್ತ್ರಗಳು, ಕಣ್ಣುಗಳು, ತಲೆಯ ಕೂದಲು, ಮೊನಚಾದ ಉಗುರು ಮತ್ತು ಹಲ್ಲುಗಳು ಎಲ್ಲವೂ ರಕ್ತವರ್ಣದವುಗಳು. ಆದ್ದರಿಂದಲೇ ಅವಳು ರಕ್ತದಂತಿಕಾ ಎಂದು ಕರೆಯಲ್ಪಡುತ್ತಾಳೆ. ಮತ್ತು ನೋಡಲು ಅತ್ಯಂತ ಭಯಾನಕವಾಗಿದ್ದಾಳೆ. ಹೇಗೆ ಸ್ತ್ರೀಯು ತನ್ನ ಪತಿಯ ಮೇಲೆ ಅನುರಾಗವಿಡುತ್ತಾಳೋ ಹಾಗೆ ದೇವಿಯು ತನ್ನ ಭಕ್ತನ ಮೇಲೆ ಸ್ನೇಹವಿಟ್ಟು ಅವನ ಸೇವೆಯನ್ನು ಮಾಡುತ್ತಾಳೆ.

೭-೮. ರಕ್ತದಂತಿಕಾ ದೇವಿಯು ಆಕಾರ ಭೂಮಿಯಂತೆ ವಿಶಾಲವಾದದ್ದು. ಅವಳ ಸ್ತನದ್ವಯಗಳು ಸುಮೇರು ಪರ್ವತದಂತೆ ಇವೆ. ಅವಳ ಸ್ತನಗಳು ದೀರ್ಘವಾಗಿಯೂ, ಅಗಲವಾಗಿಯೂ, ಅತ್ಯಂತ ಸ್ಥೂಲ

ಖಡ್ಗಂ ಪಾತ್ರಂ ಚ ಮುಸಲಂ ಲಾಂಗಲಂ ಚ ಬಿಭರ್ತಿ ಸಾ ।
ಆಖ್ಯಾತಾ ರಕ್ತಚಾಮುಂಡಾ ದೇವೀ ಯೋಗೇಶ್ವರೀತಿ ಚ ॥ ೯ ॥

ಅನಯಾ ವ್ಯಾಪ್ತಮಖಿಲಂ ಜಗತ್ ಸ್ಥಾವರಜಂಗಮಮ್ ।
ಇಮಾಂ ಯಃ ಪೂಜಯೇದ್ಭಕ್ತ್ಯಾ ಸ ವ್ಯಾಪ್ನೋತಿ
ಚರಾಚರಮ್ ॥ ೧೦ ॥

(ಭುಕ್ತ್ವಾ ಭೋಗಾನ್ ಯಥಾಕಾಮಂ
ದೇವೀಸಾಯುಜ್ಯಮಾಪ್ನುಯಾತ್)

ಅಧೀತೇ ಯ ಇಮಂ ನಿತ್ಯಂ ರಕ್ತದಂತ್ಯಾ ವಪುಸ್ತ್ವಮ್ ।
ತಂ ಸಾ ಪರಿಚರೇದ್ದೇವೀ ಪತಿಂ ಪ್ರಿಯಮಿವಾಂಗನಾ ॥ ೧೧ ॥

ಶಾಕಂಭರೀ ನೀಲವರ್ಣಾ ನೀಲೋತ್ಪಲವಿಲೋಚನಾ ।
ಗಂಭೀರನಾಭಿಸ್ತ್ರಿವಲೀವಿಭೂಷಿತ ತನೂದರೀ ॥ ೧೨ ॥

ಸುಕರ್ಕಶಸಮೋತ್ತುಂಗವೃತ್ತಪೀನಘನಸ್ತನೀ ।
ಮುಷ್ಟಿಂ ಶಿಲೀಮುಖಾಪೂರ್ಣಂ ಕಮಲಂ ಕಮಲಾಲಯಾ ॥ ೧೩ ॥

ಪುಷ್ಪಪಲ್ಲವಮೂಲಾದಿಫಲಾಢ್ಯಂ ಶಾಕಸಂಚಯಮ್ ।
ಕಾಮ್ಯಾನಂತರಸೈರ್ಯುಕ್ತಂ ಕ್ಷುತ್ತೃಣ್ಮೃತ್ಯುಭಯಾಪಹಮ್ ॥ ೧೪ ॥

ಕಾರ್ಮುಕಂ ಚ ಸ್ಫುರತ್ಕಾಂತಿ ಬಿಭ್ರತೀ ಪರಮೇಶ್ವರೀ ।
ಶಾಕಂಭರೀ ಶತಾಕ್ಷೀ ಸಾ ಸೈವ ದುರ್ಗಾ ಪ್ರಕೀರ್ತಿತಾ ॥ ೧೫ ॥

ವಾಗಿಯೂ ಮತ್ತು ಬಹಳ ಮನೋಹರವಾಗಿಯೂ ಇವೆ. ಕಠೋರವಾಗಿದ್ದರೂ ಅತ್ಯಂತ ಸುಂದರವೂ ಮತ್ತು ಪೂರ್ಣಾನಂದದ ಸಮುದ್ರವೂ ಆಗಿವೆ. ಎಲ್ಲಾ ಕಾಮನೆಗಳನ್ನೂ ಪೂರ್ತಿ ಮಾಡುವ ಈ ಸ್ತನದ್ವಯಗಳನ್ನು ದೇವಿಯು ತನ್ನ ಭಕ್ತರಿಗೆ ಉಣಿಸುತ್ತಾಳೆ.

೯. ಅವಳು ತನ್ನ ನಾಲ್ಕು ಕೈಗಳಲ್ಲಿ ಖಡ್ಗ, ಪಾನಪಾತ್ರೆ, ಒನಕೆ ಮತ್ತು ನೇಗಿಲು ಇವುಗಳನ್ನು ಹಿಡಿದಿರುತ್ತಾಳೆ. ಇವಳೇ ರಕ್ತಚಾಮುಂಡಾ ಮತ್ತು ಯೋಗೇಶ್ವರೀದೇವೀ ಎಂದೂ ಕರೆಯಲ್ಪಡುತ್ತಾಳೆ.

೧೦. ಅವಳ ಮೂಲಕವೇ ಸಂಪೂರ್ಣ ಚರಾಚರ ಜಗತ್ತು ವ್ಯಾಪಿಸಲ್ಪಟ್ಟಿದೆ: ಯಾವನು ಈ ರಕ್ತದಂತಿಕಾದೇವಿಯನ್ನು ಭಕ್ತಿಪೂರ್ವಕವಾಗಿ ಪೂಜಿಸುತ್ತಾನೆಯೋ ಅವನು ಚರಾಚರ ಜಗತ್ತನ್ನು ವ್ಯಾಪಿಸುತ್ತಾನೆ.

೧೧. (ಅವನು ಯಥೇಷ್ಟವಾಗಿ ಭೋಗಗಳನ್ನು ಭೋಗಿಸಿ, ಕೊನೆಯಲ್ಲಿ ದೇವಿಯಲ್ಲಿ ಐಕ್ಯವಾಗುತ್ತಾನೆ.) ಯಾವನು ಪ್ರತಿದಿನವೂ ರಕ್ತದಂತಿಕಾದೇವಿಯ ಸ್ತೋತ್ರವನ್ನು ಪಠಿಸುತ್ತಾನೆಯೋ ಅವನ ಸೇವೆಯನ್ನು - ಪತಿವ್ರತಾ ನಾರಿಯು ತನ್ನ ಪ್ರಿಯತಮ ಪತಿಯ ಪರಿಚರ್ಯೆಯನ್ನು ಮಾಡುವಂತೆ - ದೇವಿಯು ಪ್ರೇಮಪೂರ್ವಕವಾಗಿ (ಸಂರಕ್ಷಣ ರೂಪದಲ್ಲಿ) ಮಾಡುತ್ತಾಳೆ.

೧೨. ಶಾಕಂಭರೀದೇವಿಯ ಶರೀರದ ಕಾಂತಿಯು ನೀಲವರ್ಣದ್ದಾಗಿದೆ. ಅವಳ ಕಣ್ಣುಗಳು ನೀಲಕಮಲದಂತಿವೆ. ನಾಭಿಯು ಗಂಭೀರವಾಗಿದೆ. ತ್ರಿವಲಿಯಿಂದ ವಿಭೂಷಿತವಾದ ಅವಳ ಉದರವು ಸೂಕ್ಷ್ಮವಾಗಿದೆ.

೧೩-೧೪. ಅವಳ ಸ್ತನದ್ವಯಗಳು ಅತ್ಯಂತ ಕಠೋರವಾಗಿಯೂ, ಎಲ್ಲಾ ಕಡೆಗಳಿಂದಲೂ ಒಂದೇ ರೀತಿಯಾಗಿಯೂ, ಎತ್ತರವಾಗಿಯೂ, ಗೋಲಾಕಾರವಾಗಿಯೂ, ಸ್ಥೂಲವಾಗಿಯೂ ಇದ್ದು ಪರಸ್ಪರ ಅಂಟಿಕೊಂಡಂತಿವೆ. ಆ ಪರಮೇಶ್ವರಿಯು ಕಮಲದಲ್ಲಿ ವಾಸಿಸುತ್ತಾಳೆ; ಮತ್ತು ಕೈಗಳಲ್ಲಿ ಬಾಣಗಳಿಂದ ತುಂಬಿದ ಮುಷ್ಟಿ, ಕಮಲದ ಹೂ, ಶಾಕಸಮೂಹ ಮತ್ತು ಪ್ರಕಾಶಮಾನವಾದ ಧನುಸ್ಸು ಇವನ್ನು ಹಿಡಿದಿದ್ದಾಳೆ. ಆ ಶಾಕ ಸಮೂಹವು ಅನಂತ ಮನೋವಾಂಛಿತ ರಸಗಳಿಂದ ಕೂಡಿ ಹಸಿವು, ಬಾಯಾರಿಕೆ ಮತ್ತು ಮೃತ್ಯುಭಯ - ಇವನ್ನು ನಿವಾರಿಸಲು ಸಮರ್ಥವಾಗಿದ್ದು, ಹೂವು, ಚಿಗುರು, ಗೆಡ್ಡೆಗೆಣಸು ಮತ್ತು ಹಣ್ಣು ಇವುಗಳಿಂದ ಕೂಡಿದೆ. ಅವಳೇ ಶಾಕಂಭರೀ, ಶತಾಕ್ಷೀ ಮತ್ತು ದುರ್ಗಾ ಎಂಬುದಾಗಿ ಕರೆಯಲ್ಪಟ್ಟಿದ್ದಾಳೆ.

ವಿಶೋಕಾ ದುಷ್ಟದಮನೀ ಶಮನೀ ದುರಿತಾಪದಾಮ್ ।
ಉಮಾ ಗೌರೀ ಸತೀ ಚಂಡೀ ಕಾಲಿಕಾ ಸಾ ಚ ಪಾರ್ವತೀ ॥ ೧೬ ॥

ಶಾಕಂಭರೀ ಸ್ತುವನ್ ಧ್ಯಾಯನ್ ಜಪನ್ ಸಂಪೂಜಯನ್ನಮನ್ ।
ಅಕ್ಷಯ್ಯಮಶ್ನುತೇ ಶೀಘ್ರಮನ್ನಪಾನಾಮೃತಂ ಫಲಮ್ ॥ ೧೭ ॥

ಭೀಮಾಽಪಿ ನೀಲವರ್ಣಾ ಸಾ ದಂಷ್ಟ್ರಾದಶನಭಾಸುರಾ ।
ವಿಶಾಲಲೋಚನಾ ನಾರೀ ವೃತ್ತಪೀನಪಯೋಧರಾ ॥ ೧೮ ॥

ಚಂದ್ರಹಾಸಂ ಚ ಡಮರುಂ ಶಿರಃ ಪಾತ್ರಂ ಚ ಬಿಭ್ರತೀ ।
ಏಕವೀರಾ ಕಾಲರಾತ್ರಿಃ ಸೈವೋಕ್ತಾ ಕಾಮದಾ ಸ್ತುತಾ ॥ ೧೯ ॥

ತೇಜೋಮಂಡಲದುರ್ಧರ್ಷಾ ಭ್ರಾಮರೀ ಚಿತ್ರಕಾಂತಿಭೃತ್ ।
ಚಿತ್ರಾನುಲೇಪನಾ ದೇವೀ ಚಿತ್ರಾಭರಣಭೂಷಿತಾ ॥ ೨೦ ॥

ಚಿತ್ರಭ್ರಮರಪಾಣಿಃ ಸಾ ಮಹಾಮಾರೀತಿ ಗೀಯತೇ ।
ಇತ್ಯೇತಾ ಮೂರ್ತಯೋ ದೇವ್ಯಾ ಯಾಃ ಖ್ಯಾತಾ
ವಸುಧಾಧಿಪ ॥ ೨೧ ॥

೧೬. ಅವಳು ಶೋಕರಹಿತಳು, ದುಷ್ಟರನ್ನು ನಿಗ್ರಹಿಸುವವಳು ಮತ್ತು ಪಾಪವನ್ನೂ ವಿಪತ್ತನ್ನೂ ಶಾಂತಮಾಡುವವಳು. ಅವಳೇ ಉಮಾ, ಗೌರೀ ಸತೀ, ಚಂಡೀ, ಕಾಲಿಕಾ ಮತ್ತು ಪಾರ್ವತೀ.

೧೭. ಯಾವ ಮನುಷ್ಯನು ಶಾಕಂಭರೀದೇವಿಯ ಸ್ತುತಿ, ಧ್ಯಾನ, ಜಪ, ಪೂಜೆ ಮತ್ತು ವಂದನೆ ಇವುಗಳನ್ನು ಮಾಡುತ್ತಾನೋ ಅವನು ಶೀಘ್ರವೇ ಅಮೃತಸಮಾನವಾದ ಅನ್ನ-ಪಾನೀಯಗಳೆಂಬ ಅಕ್ಷಯಫಲವನ್ನು ಹೊಂದುತ್ತಾನೆ.

೧೮. ಈ ನಾರಿಯು ಭಯಂಕರವಾಗಿದ್ದರೂ ಇವಳ ಮೈಬಣ್ಣ ನೀಲಿ. ಅವಳ ದವಡೆ ಮತ್ತು ಹಲ್ಲುಗಳು ಹೊಳೆಯುತ್ತಿರುತ್ತವೆ. ಅವಳ ಕಣ್ಣುಗಳು ದೊಡ್ಡದಾಗಿವೆ. ಕುಚಗಳು ಗೋಲಾಕಾರವಾಗಿದ್ದು ಸ್ಥೂಲವಾಗಿವೆ.

೧೯. ಅವಳು ತನ್ನ ಕರಗಳಲ್ಲಿ ಚಂದ್ರಹಾಸವೆಂಬ ಹೆಸರಿನ ಖಡ್ಗ, ಡಮರು, ಮಸ್ತಕ ಮತ್ತು ಪಾನಪಾತ್ರೆ ಇವನ್ನು ಹಿಡಿದಿದ್ದಾಳೆ. ಅವಳೇ ಏಕವೀರಾ, ಕಾಲರಾತ್ರಿ ಮತ್ತು ಕಾಮದಾ ಎಂದು ಕರೆಯಲ್ಪಡುತ್ತಾಳೆ ಮತ್ತು ಈ ಹೆಸರುಗಳಿಂದ ಪ್ರಶಂಸಿಸಲ್ಪಡುತ್ತಾಳೆ.

೨೦. ಭ್ರಾಮರೀದೇವಿಯ ಕಾಂತಿಯು ಅನೇಕ ಬಣ್ಣಗಳಿಂದ ಕೂಡಿದ್ದು ವೈವಿಧ್ಯವನ್ನು ಹೊಂದಿದೆ. ಅವಳು ತನ್ನ ತೇಜೋಮಂಡಲದಿಂದಾಗಿ ನೋಡಲಸಾಧ್ಯಳಾಗಿದ್ದಾಳೆ. ಅವಳ ಸುಗಂಧಿತ ದ್ರವ್ಯಗಳಿಂದ ಕೂಡಿದ ಚಂದನದ ಲೇಪವು ಅನೇಕ ಬಣ್ಣಗಳಿಂದ ಕೂಡಿದೆ; ಮತ್ತು ಅವಳು ಚಿತ್ರವಿಚಿತ್ರ ಅಲಂಕಾರಗಳಿಂದ ವಿಭೂಷಿತಳಾಗಿದ್ದಾಳೆ.

೨೧. ಚಿತ್ರಭ್ರಮರಪಾಣಿ ಮತ್ತು ಮಹಾಮಾರೀ ಇವೇ ಮೊದಲಾದ ಹೆಸರುಗಳಿಂದ ಅವಳ ಮಹಿಮೆಯ ಗುಣಗಾನವು ಮಾಡಲ್ಪಡುತ್ತದೆ. ರಾಜನ್, ಈ ಪ್ರಕಾರವಾಗಿ ಜಗನ್ಮಾತೆ ಚಂಡಿಕಾದೇವಿಯ ಈ ಮೂರ್ತಿಗಳು ಹೇಳಲ್ಪಟ್ಟಿವೆ.

ಜಗನ್ಮಾತುಶ್ಚಂಡಿಕಾಯಾಃ ಕೀರ್ತಿತಾಃ ಕಾಮಧೇನವಃ ।
ಇದಂ ರಹಸ್ಯಂ ಪರಮಂ ನ ವಾಚ್ಯಂ ಕಸ್ಯಚಿತ್ತ್ವಯಾ ॥ ೨೨ ॥

ವ್ಯಾಖ್ಯಾನಂ ದಿವ್ಯಮೂರ್ತೀನಾಮಭೀಷ್ಟಫಲದಾಯಕಮ್ ।
ತಸ್ಮಾತ್ ಸರ್ವಪ್ರಯತ್ನೇನ ದೇವೀಂ ಜಪ ನಿರಂತರಮ್ ॥ ೨೩ ॥

ಸಪ್ತಜನ್ಮಾರ್ಜಿತೈರ್ಘೋರೈರ್ಬ್ರಹ್ಮಹತ್ಯಾಸಮೈರಪಿ ।
ಪಾಠಮಾತ್ರೇಣ ಮಂತ್ರಾಣಾಂ ಮುಚ್ಯತೇ ಸರ್ವಕಿಲ್ಬಿಷೈಃ ॥ ೨೪ ॥

ದೇವ್ಯಾ ಧ್ಯಾನಂ ಮಯಾಽಽಖ್ಯಾತಂ ಗುಹ್ಯಾತ್ ಗುಹ್ಯತರಂ ಮಹತ್।
ತಸ್ಮಾತ್ ಸರ್ವಪ್ರಯತ್ನೇನ ಸರ್ವಕಾಮಫಲಪ್ರದಮ್ ॥ ೨೫ ॥

(ಏತಸ್ಯಾಸ್ತ್ವಂ ಪ್ರಸಾದೇನ ಸರ್ವಮಾನ್ಯೋ ಭವಿಷ್ಯಸಿ ।
ಸರ್ವರೂಪಮಯೀ ದೇವೀ ಸರ್ವಂ ದೇವೀಮಯಂ ಜಗತ್ ।
ಅತೋಽಹಂ ವಿಶ್ವರೂಪಾಂ ತಾಂ ನಮಾಮಿ ಪರಮೇಶ್ವರೀಮ್ ॥

॥ ಇತಿ ಮೂರ್ತಿರಹಸ್ಯಂ ಸಂಪೂರ್ಣಮ್ ॥

೨೨. ಅವಳ ಕೀರ್ತನೆಯನ್ನು ಮಾಡಿದಲ್ಲಿ ಕಾಮಧೇನುವಿನಂತೆ ಎಲ್ಲ ಆಶೆಗಳನ್ನೂ ಪೂರ್ಣಮಾಡುತ್ತಾಳೆ. ಇದು ಪರಮಗೋಪ್ಯವಾದ ರಹಸ್ಯ, ಇದನ್ನು ನೀನು ಬೇರೆ ಯಾರಿಗೂ ಹೇಳಕೂಡದು.

೨೩. ದಿವ್ಯಮೂರ್ತಿಗಳ ಈ ಆಖ್ಯಾನವು ಮನೋವಾಂಛಿತ ಫಲಗಳನ್ನು ಕೊಡುತ್ತದೆ. ಆದುದರಿಂದ ನೀನು ಪೂರ್ಣಪ್ರಯತ್ನವನ್ನು ಮಾಡಿ ನಿರಂತರವೂ ದೇವಿಯ ಜಪಾರಾಧನೆಯಲ್ಲಿ ತೊಡಗು.

೨೪. ಸಪ್ತಶತಿಯ ಮಂತ್ರಗಳ ಪಠನಮಾತ್ರದಿಂದ ಮನುಷ್ಯನು ಏಳು ಜನ್ಮಗಳಲ್ಲಿ ಸಂಪಾದಿಸಿದ ಬ್ರಹ್ಮಹತ್ಯಾಸದೃಶವಾದ ಘೋರಪಾತಕಗಳಿಂದಲೂ ಮತ್ತು ಸಮಸ್ತ ಕಲ್ಮಷಗಳಿಂದಲೂ ಮುಕ್ತನಾಗುತ್ತಾನೆ.

೨೫. ಆದ್ದರಿಂದ ನಾನು ಪೂರ್ಣಪ್ರಯತ್ನವನ್ನು ಮಾಡಿ ಎಲ್ಲ ರೀತಿಯ ಆಶೆಗಳ ಫಲಗಳನ್ನೂ ಕೊಡುವ ದೇವಿಯ ಗೋಪ್ಯಕ್ಕಿಂತಲೂ ಗೋಪನೀಯವಾದ, ಧ್ಯಾನದ ವರ್ಣನೆಯನ್ನು ಮಾಡಿದ್ದೇನೆ.

(ಅವಳ ಪ್ರಸಾದದಿಂದ ನೀನು ಸರ್ವಮಾನ್ಯನಾಗುವೆ. ದೇವಿಯು ಸರ್ವರೂಪಮಯಿಯು ಮತ್ತು ಸಂಪೂರ್ಣ ಜಗತ್ತು ದೇವೀಮಯವು. ಆದುದರಿಂದ ನಾನು ಆ ವಿಶ್ವರೂಪಳಾದ ಪರಮೇಶ್ವರಿಯನ್ನು ನಮಸ್ಕರಿಸುತ್ತೇನೆ.)

ಹೀಗೆ ಮೂರ್ತಿರಹಸ್ಯವು ಮುಗಿಯಿತು.

# ಅಪರಾಧಕ್ಷಮಾಪಣಸ್ತೋತ್ರಮ್

ಅಪರಾಧಶತಂ ಕೃತ್ವಾ ಜಗದಂಬೇತಿ ಚೋಚ್ಚರೇತ್ ।
ಯಾಂ ಗತಿಂ ಸಮವಾಪ್ನೋತಿ ನ ತಾಂ ಬ್ರಹ್ಮಾದಯಃ ಸುರಾಃ ॥ ೧ ॥

ಸಾಪರಾಧೋಽಸ್ಮಿ ಶರಣಂ ಪ್ರಾಪ್ತಸ್ತ್ವಾಂ ಜಗದಂಬಿಕೇ ।
ಇದಾನೀಮನುಕಂಪ್ಯೋಽಹಂ ಯಥೇಚ್ಛಸಿ ತಥಾ ಕುರು ॥ ೨ ॥

ಅಜ್ಞಾನಾದ್ವಿಸ್ಮೃತೇರ್ಭ್ರಾಂತ್ಯಾ ಯನ್ನ್ಯೂನಮಧಿಕಂ ಕೃತಮ್ ।
ತತ್ಸರ್ವಂ ಕ್ಷಮ್ಯತಾಂ ದೇವಿ ಪ್ರಸೀದ ಪರಮೇಶ್ವರಿ ॥ ೩ ॥

ಕಾಮೇಶ್ವರಿ ಜಗನ್ಮಾತಃ ಸಚ್ಚಿದಾನಂದವಿಗ್ರಹೇ ।
ಗೃಹಾಣಾರ್ಚಾಮಿಮಾಂ ಪ್ರೀತ್ಯಾ ಪ್ರಸೀದ ಪರಮೇಶ್ವರಿ ॥ ೪ ॥

ಸರ್ವರೂಪಮಯೀ ದೇವೀ ಸರ್ವಂ ದೇವೀಮಯಂ ಜಗತ್ ।
ಅತೋಽಹಂ ವಿಶ್ವರೂಪಾಂ ತ್ವಾಂ ನಮಾಮಿ ಪರಮೇಶ್ವರೀಮ್ ॥ ೫ ॥

ಯದಕ್ಷರಂ ಪರಿಭ್ರಷ್ಟಂ ಮಾತ್ರಾಹೀನಂ ಚ ಯದ್ಭವೇತ್ ।
ಪೂರ್ಣಂ ಭವತು ತತ್ಸರ್ವಂ ತ್ವತ್ಪ್ರಸಾದಾನ್ಮಹೇಶ್ವರಿ ॥ ೬ ॥

ಯದತ್ರ ಪಾಠೇ ಜಗದಂಬಿಕೇ ಮಯಾ
ವಿಸರ್ಗಬಿಂದ್ವಕ್ಷರಹೀನಮೀರಿತಮ್ ।
ತದಸ್ತು ಸಂಪೂರ್ಣತಮಂ ಪ್ರಸಾದತಃ
ಸಂಕಲ್ಪಸಿದ್ಧಿಶ್ಚ ಸದೈವ ಜಾಯತಾಮ್ ॥ ೭ ॥

# ಅಪರಾಧಕ್ಷಮಾಪಣಸ್ತೋತ್ರ

೧. ನೂರು ಅಪರಾಧಗಳನ್ನು ಮಾಡಿದ್ದರೂ ಯಾವನು 'ಹೇ ಜಗದಂಬೆ' ಎಂದುಚ್ಚರಿಸುವನೊ ಅವನು ಪಡೆಯುವ ಗತಿಯನ್ನು ಬ್ರಹ್ಮಾದಿ ದೇವತೆಗಳೂ ಪಡೆಯಲಾರರು.

೨. ಜಗದಂಬಿಕೆ, ನಿನ್ನನ್ನು ಶರಣುಹೊಂದಿರುವ ನಾನು (ಹಿಂದೆ) ಅಪರಾಧಗಳನ್ನು ಮಾಡಿರುತ್ತೇನೆ. ಈಗ, ನಿನ್ನ ಅನುಕಂಪೆಗೆ ಯೋಗ್ಯ ನಾಗಿರುತ್ತೇನೆ. ನಿನ್ನಿಚ್ಛೆ ಬಂದಂತೆ ಮಾಡು.

೩. ಅಜ್ಞಾನದಿಂದಾಗಲಿ, ವಿಸ್ಮರಣದಿಂದಾಗಲಿ, ಭ್ರಾಂತಿಯಿಂದಾಗಲಿ (ಈ ಸಪ್ತಶತೀ ಪಾರಾಯಣಕ್ರಮದಲ್ಲಿ) ನ್ಯೂನಾಧಿಕ್ಯಗಳೆಂಬ ದೋಷಗಳನ್ನು ಮಾಡಿದ್ದರೂ-ಹೇ ದೇವಿ, ಪರಮೇಶ್ವರಿ-ಎಲ್ಲವನ್ನೂ ಕ್ಷಮಿಸಿ ಪ್ರಸನ್ನಳಾಗು !

೪. ಹೇ ಕಾಮೇಶ್ವರಿ, ಜಗನ್ಮಾತೆ, ಸಚ್ಚಿದಾನಂದಸ್ವರೂಪಿಣಿ, (ನನ್ನ) ಈ ಪೂಜೆಯನ್ನು ಪ್ರೀತಿಯಿಂದ ಸ್ವೀಕರಿಸು; ಹೇ ಪರಮೇಶ್ವರಿ, ಪ್ರಸನ್ನಳಾಗು.

೫. ದೇವಿಯು ಸರ್ವರೂಪಮಯಿಯು, ಜಗತ್ತೆಲ್ಲವೂ ದೇವೀ ಮಯವು. ಆದುದರಿಂದ, ವಿಶ್ವರೂಪಳೂ ಪರಮೇಶ್ವರಿಯೂ ಆದ ನಿನ್ನನ್ನು ನಾನು ನಮಸ್ಕರಿಸುತ್ತೇನೆ.

೬. ಹೇ ಪರಮೇಶ್ವರಿ, (ಈ ಪಾರಾಯಣದಲ್ಲಿ) ಅಕ್ಷರವನ್ನು ಬಿಡುವುದು, ಮಾತ್ರಾಕಾಲವನ್ನು ಕಡಮೆಮಾಡುವುದು ಮೊದಲಾದ ಯಾವ ದೋಷಗಳುಂಟಾಗಿವೆಯೊ ಅವೆಲ್ಲವೂ ನಿನ್ನ ಅನುಗ್ರಹದಿಂದ ಪರಿಹೋಗಲಿ.

೭. ಹೇ ಜಗದಂಬಿಕೆ, ಈ ಪಾರಾಯಣದಲ್ಲಿ ವಿಸರ್ಗ, ಬಿಂದು, ಅಕ್ಷರ ಇವುಗಳನ್ನು ಬಿಟ್ಟು ಯಾವ ತಪ್ಪು ಉಚ್ಚಾರಣೆಯನ್ನು ನಾನು ಮಾಡಿರುವೆನೊ ಅದೆಲ್ಲವೂ (ನಿನ್ನ) ಕೃಪೆಯಿಂದ ಅತ್ಯಂತ ಸಂಪೂರ್ಣವಾಗಿ ಆಗಲಿ. ಮತ್ತು ಸಂಕಲ್ಪಗಳು ಯಾವಾಗಲೂ ಸಿದ್ಧಿಸಲಿ.

ಯನ್ಮಾತ್ರಾಬಿಂದುಬಿಂದುದ್ವಿತಯಪದಪದದ್ವಂದ್ವವರ್ಣಾದಿಹೀನಂ
ಭಕ್ತ್ಯಾಽಭಕ್ತ್ಯಾನುಪೂರ್ವಂ ಪ್ರಸಭಕೃತಿವಶಾದ್ ವ್ಯಕ್ತಮವ್ಯಕ್ತಮಂಬ ।
ಮೋಹಾದಜ್ಞಾನತೋ ವಾ ಪಠಿತಮಪಠಿತಂ ಸಾಂಪ್ರತಂ ತೇ
ಸ್ತವೇಽಸ್ಮಿನ್
ತತ್ಸರ್ವಂ ಸಾಂಗಮಾಸ್ತಾಂ ಭಗವತಿ ವರದೇ ತ್ವತ್ಪ್ರಸಾದಾತ್
ಪ್ರಸೀದ ॥ ೮ ॥

ಪ್ರಸೀದ ಭಗವತ್ಯಂಬ ಪ್ರಸೀದ ಭಕ್ತವತ್ಸಲೇ ।
ಪ್ರಸಾದಂ ಕುರು ಮೇ ದೇವಿ ದುರ್ಗೇ ದೇವಿ ನಮೋಽಸ್ತುತೇ ॥ ೯ ॥

॥ ಇತಿ ಅಪರಾಧಕ್ಷಮಾಪಣಸ್ತೋತ್ರಮ್ ಸಂಪೂರ್ಣಮ್ ॥

೮. ಹೇ ತಾಯೇ, ಈ ಸಪ್ತಶತೀಸ್ತೋತ್ರವನ್ನು ಬೇಗ ಬೇಗ ಪಾರಾಯಣ ಮಾಡುವಾಗ ಮಾತ್ರಾಕಾಲದ ವ್ಯತ್ಯಾಸ, ಅನುಸ್ವಾರ ವಿಸರ್ಗಗಳ ಸ್ಖಾಲಿತ್ಯ, ಪದವನ್ನಾಗಲಿ, ಪದಗಳೆರಡನ್ನಾಗಲಿ, ಅಕ್ಷರಾದಿಗಳನ್ನಾಗಲಿ ಬಿಟ್ಟುಬಿಡುವುದು, ಸಮಾಸಪದಗಳನ್ನು ಒಡೆಯಬಾರದ ಕಡೆ ಅವುಗಳನ್ನು ಒಡೆಯುವುದು, ಬೇರೆಯಾಗಿರುವ ಪದಗಳನ್ನು ಸೇರಿಸುವುದು, ಅರ್ಥದ ಮೇಲೆ ಗಮನವಿಡದೆ ಸುಮ್ಮನೆ ಓದುವುದು - ಇವೇ ಮೊದಲಾದ ಯಾವ ದೋಷಗಳನ್ನು ಸ್ಪಷ್ಟವಾಗಿಯಾಗಲಿ, ಅಸ್ಪಷ್ಟವಾಗಿಯಾಗಲಿ ಮಾಡಿರುವೆನೋ ಅವುಗಳೂ, ಮೋಹದಿಂದಾಗಲಿ, ಅಜ್ಞಾನದಿಂದಾಗಲಿ ಪಠಿಸಿದ್ದು ಅಥವಾ ಬಿಟ್ಟಿದ್ದು - ಇವುಗಳೂ ನಿನ್ನ ಅನುಗ್ರಹದಿಂದ ಸರಿಹೋಗಿ ಪಾರಾಯಣವೆಲ್ಲವೂ ಸಾಂಗವಾಗಲಿ. ಹೇ ಭಗವತಿ, ವರದಾತೆ, ಪ್ರಸನ್ನಳಾಗು !

೯. ತಾಯಿ, ಭಗವತಿ, ಭಕ್ತರಲ್ಲಿ ವಾತ್ಸಲ್ಯವುಳ್ಳ ದೇವಿಯೆ, ನನ್ನಲ್ಲಿ ಅನುಗ್ರಹಮಾಡು. ದೇವಿ, ದುರ್ಗೇ, ನಿನಗೆ ನಮಸ್ಕರಿಸುವೆನು.

ಹೀಗೆ ಅಪರಾಧಕ್ಷಮಾಪಣಸ್ತೋತ್ರವು ಮುಗಿಯಿತು.

# ಕೆಲವು ದೇವೀಸ್ತೋತ್ರಗಳು

## ಆನಂದಲಹರೀ

ಭವಾನಿ ಸ್ತೋತುಂ ತ್ವಾಂ ಪ್ರಭವತಿ ಚತುರ್ಭಿರ್ನ ವದನೈಃ
ಪ್ರಜಾನಾಮೀಶಾನಸ್ತ್ರಿಪುರಮಥನಃ ಪಂಚಭಿರಪಿ ।
ನ ಷಡ್ಭಿಃ ಸೇನಾನೀರ್ದಶಶತಮುಖೈರಪ್ಯಹಿಪತಿ-
ಸ್ತದಾಽನ್ಯೇಷಾಂ ಕೇಷಾಂ ಕಥಯ ಕಥಮಸ್ಮಿನ್ನವಸರಃ ॥ ೧ ॥

ಘೃತಕ್ಷೀರದ್ರಾಕ್ಷಾ ಮಧುಮಧುರಿಮಾ ಕೈರಪಿ ಪದೈ-
ರ್ವಿಶಿಷ್ಯಾನಾಖ್ಯೇಯೋ ಭವತಿ ರಸನಾಮಾತ್ರವಿಷಯಃ ।
ತಥಾ ತೇ ಸೌಂದರ್ಯಂ ಪರಮಶಿವದೃಙ್ಮಾತ್ರವಿಷಯಃ
ಕಥಂಕಾರಂ ಬ್ರೂಮಃ ಸಕಲನಿಗಮಾಗೋಚರಗುಣೇ ॥ ೨ ॥

ಮುಖೇ ತೇ ತಾಂಬೂಲಂ ನಯನಯುಗಲೇ ಕಜ್ಜಲಕಲಾ
ಲಲಾಟೇ ಕಾಶ್ಮೀರಂ ವಿಲಸತಿ ಗಲೇ ಮೌಕ್ತಿಕಲತಾ ।
ಸ್ಫುರತ್ಕಾಂಚೀಶಾಟೀ ಪೃಥುಕಟಿತಟೇ ಹಾಟಕಮಯೀ
ಭಜಾಮಿ ತ್ವಾಂ ಗೌರೀಂ ನಗಪತಿಕಿಶೋರೀಮವಿರತಮ್ ॥ ೩ ॥

ವಿರಾಜನ್ಮಂದಾರದ್ರುಮಕುಸುಮಹಾರಸ್ತನತಟೀ
ನದದ್ವೀಣಾನಾದಶ್ರವಣವಿಲಸತ್ಕುಂಡಲಗುಣಾ ।
ನತಾಂಗೀ ಮಾತಂಗೀರುಚಿರಗತಿಭಂಗೀ ಭಗವತೀ
ಸತೀ ಶಂಭೋರಂಭೋರುಹಚಟುಲಚಕ್ಷುರ್ವಿಜಯತೇ ॥ ೪ ॥

# ಆನಂದಲಹರೀ

೧. ಹೇ ಭವಾನಿ, ನಿನ್ನನ್ನು ಸ್ತೋತ್ರಮಾಡಲು ಚತುರ್ಮುಖ ಬ್ರಹ್ಮನಿಗಾಗಲಿ, ಪ್ರಜೆಗಳಿಗೆ ಈಶನೂ ಮೂರು ಲೋಕಗಳಿಗೂ ಲಯ ಕರ್ತನೂ ಪಂಚಾನನನೂ ಆದ ಶಿವನಿಗಾಗಲಿ, ದೇವಸೇನಾಪತಿಯಾದ ಷಣ್ಮುಖನಿಗಾಗಲಿ, ಸಹಸ್ರಮುಖಗಳಿಂದ ಕೂಡಿದ ನಾಗರಾಜನಿಗಾಗಲಿ ಸಾಧ್ಯವಾಗಲಿಲ್ಲ, ಹೀಗಿದ್ದ ಮೇಲೆ ಮತ್ತಾರು ಈ ಸ್ತುತಿಕರ್ತವ್ಯದಲ್ಲಿ ಶಕ್ತರಾದಾರು. ಹೇಳು ?

೨. ಹೇ ದೇವಿ, ನಾಲಗೆಯಿಂದ ಮಾತ್ರ ತಿಳಿಯಬಹುದಾದ ತುಪ್ಪ, ಹಾಲು, ದ್ರಾಕ್ಷಾರಸ, ಜೇನುತುಪ್ಪ ಮೊದಲಾದವುಗಳ ವಿಧವಿಧವಾದ ಸಿಹಿರುಚಿಯನ್ನು ಮಾತಿನಿಂದ ವರ್ಣಿಸಲು ಸಾಧ್ಯವಿಲ್ಲ. ಹಾಗೆಯೇ ನಿನ್ನ ಸೌಂದರ್ಯವನ್ನು ನೋಡಿ ತಿಳಿಯಲು ಪರಮೇಶ್ವರನಿಂದ ಮಾತ್ರವೇ ಸಾಧ್ಯ. ಸಕಲ ಶಾಸ್ತ್ರಗಳಿಗೂ ಆಗೋಚರವಾದ ಗುಣಗಳುಳ್ಳವಳೆ, (ನಾನು) ಹೇಗೆ ತಾನೇ ಅದನ್ನು ವರ್ಣಿಸಬಲ್ಲೆನು?

೩. ನಿನ್ನ ಮುಖದಲ್ಲಿನ ತಾಂಬೂಲವು, ಕಣ್ಣುಗಳಲ್ಲಿನ ಕಾಡಿಗೆಯು, ಹಣೆಯ ಮೇಲಿನ ಕುಂಕುಮವು, ಕೊರಳಿನಲ್ಲಿನ ಮುತ್ತಿನ ಹಾರವು, ದಿವ್ಯವಾದ ರೇಷ್ಮೆಯುಡಿಗೆಯು, ಸೊಂಟದಲ್ಲಿನ ಬಂಗಾರದ ಉಡ್ಯಾಣವು, (ಎಲ್ಲವೂ ಒಂದಕ್ಕಿಂತ ಒಂದು) ಸುಂದರವಾಗಿ ಪ್ರಕಾಶಿಸುತ್ತಿರುವವು. ಪರ್ವತರಾಜಕುಮಾರಿಯೂ ಗೌರಿಯೂ ಆದ ನಿನ್ನನ್ನು ಅವಿರತವಾಗಿ ನಾನು ಭಜಿಸುತ್ತೇನೆ.

೪. ಭಗವತಿಯಾದ ಮತ್ತು ಶಿವಸತಿಯಾದ ನಿನ್ನ ಕಮಲಸದೃಶವಾದ ಕಣ್ಣುಗಳು ಯಾವಾಗಲೂ ಚಂಚಲವಾಗಿರುವುವು. ನಿನ್ನ ಎದೆಯ ಮೇಲೆ ಸುಂದರವಾದ ಮಂದಾರ ಪುಷ್ಪಮಾಲೆಯು ಶೋಭಿಸುತ್ತಿರುವುದು. ಪ್ರಿಯವಾದ ವೀಣಾನಾದವೇ ನಿನ್ನ ಕಿವಿಗಳಲ್ಲಿ ಕುಂಡಲಗಳಂತೆ ಯಾವಾಗಲೂ ಶೋಭಿಸುತ್ತಿರುವುದು. ಸ್ವಲ್ಪ ಬಗ್ಗಿರುವ ನಿನ್ನ ನಡಿಗೆಯ ವಿನ್ಯಾಸವು ಹೆಣ್ಣಾನೆಯ ನಡಿಗೆಯಂತಿರುವುದು. ಇಂತಹ ನಿನಗೆ (ಯಾವಾಗಲೂ) ಜಯವಾಗಲಿ.

ನವೀನಾರ್ಕಭ್ರಾಜನ್ಮಣಿಕನಕಭೂಷಾಪರಿಕರೈ-
ರ್ವೃತಾಂಗೀ ಸಾರಂಗೀರುಚಿರನಯನಾಽಂಗೀಕೃತಶಿವಾ ।
ತಟಿತ್ಪೀತಾ ಪೀತಾಂಬರಲಲಿತಮಂಜೀರಸುಭಗಾ
ಮಮಾಪರ್ಣಾ ಪೂರ್ಣಾ ನಿರವಧಿಸುಖೈರಸ್ತು ಸುಮುಖೀ ॥ ೫ ॥

ಹಿಮಾದ್ರೇಃ ಸಂಭೂತಾ ಸುಲಲಿತಕರೈಃ ಪಲ್ಲವಯುತಾ
ಸುಪುಷ್ಪಾ ಮುಕ್ತಾಭಿರ್ಭ್ರಮರಕಲಿತಾ ಚಾಲಕಭರೈಃ ।
ಕೃತಸ್ಥಾಣುಸ್ಥಾನಾ ಕುಚಫಲನತಾ ಸೂಕ್ತಿಸರಸಾ
ರುಜಾಂ ಹಂತ್ರೀಂ ಗಂತ್ರೀ ವಿಲಸತಿ ಚಿದಾನಂದಲತಿಕಾ ॥ ೬ ॥

ಸಪರ್ಣಾಮಾಕೀರ್ಣಾಂ ಕತಿಪಯಗುಣೈಃ ಸಾದರಮಿಹ
ಶ್ರಯಂತ್ಯನ್ಯೇ ವಲ್ಲೀಂ ಮಮ ತು ಮತಿರೇವಂ ವಿಲಸತಿ
ಅಪರ್ಣೈಕಾ ಸೇವ್ಯಾ ಜಗತಿ ಸಕಲೈರ್ಯತ್ಪರಿವೃತಃ
ಪುರಾಣೋ ಹಿ ಸ್ಥಾಣುಃ ಫಲತಿ ಕಿಲ ಕೈವಲ್ಯಪದವೀಮ್ ॥ ೭ ॥

ವಿಧಾತ್ರೀ ಧರ್ಮಾಣಾಂ ತ್ವಮಸಿ ಸಕಲಾಮ್ನಾಯಜನನೀ
ತ್ವಮರ್ಥಾನಾಂ ಮೂಲಂ ಧನದನಮನೀಯಾಂಘ್ರಿಕಮಲೇ ।
ತ್ವಮಾದಿಃ ಕಾಮಾನಾಂ ಜನನಿ ಕೃತಕಂದರ್ಪವಿಜಯೇ
ಸತಾಂ ಮುಕ್ತೇರ್ಬೀಜಂ ತ್ವಮಸಿ ಪರಮಬ್ರಹ್ಮಮಹಿಷೀ ॥ ೮ ॥

೫. ಬಾಲಸೂರ್ಯನಂತೆ ಹೊಳೆಯುತ್ತಿರುವ ರತ್ನ - ಚಿನ್ನಗಳಿಂದ ಮಾಡಿದ ಆಭರಣಗಳಿಂದ ಅಲಂಕರಿಸಲ್ಪಟ್ಟ ಅವಯವಗಳುಳ್ಳವಳೂ, ಹೆಣ್ಣುಜಿಂಕೆಯ ಕಣ್ಣುಗಳಂತೆ ಸುಂದರವಾದ ಕಣ್ಣುಗಳುಳ್ಳವಳೂ, ಶಿವನನ್ನೇ ಅರ್ಧಶರೀರವಾಗಿ ಮಾಡಿಕೊಂಡಿರುವಳೂ, ಮಿಂಚಿನಂತೆ ಹೊಳೆಯುತ್ತಿರುವವಳೂ, ಪೀತಾಂಬರದಿಂದ ಸುಂದರವಾದ ನೂಪುರಗಳಿಂದ ಶೋಭಿಸುತ್ತಿರುವವಳೂ, ಸುಮುಖಿಯೂ ಆದ ಅಪರ್ಣೆಯು ನಿರತಿಶಯ ಸುಖಗಳಿಂದ ನನ್ನನ್ನು ಪೂರ್ಣಗೊಳಿಸಲಿ.

೬. ಹಿಮವತ್ಪರ್ವತದಲ್ಲಿ ಹುಟ್ಟಿದ, ಸುಂದರವಾದ ಕೈಗಳನ್ನೇ ಚಿಗುರಾಗಿ ಹೊಂದಿರುವ (ಧರಿಸಿರುವ), ಮುತ್ತುಗಳನ್ನೇ ಹೂವಾಗಿ ಹೊಂದಿರುವ, ವೃಕ್ಷವನ್ನೇ (ಶಿವನನ್ನೇ) ತನ್ನ ಆಶ್ರಯವಾಗಿ ಮಾಡಿಕೊಂಡಿರುವ, ಕುಚಗಳೆಂಬ ಫಲಗಳ ಭಾರದಿಂದ ಬಗ್ಗಿರುವ, ಸುಮಧುರವಾದ ಮಾತುಗಳೆಂಬ ರಸದಿಂದ ಕೂಡಿರುವ, ರೋಗಗಳನ್ನು ಅಪಹರಿಸುವ, ಚಲಿಸುತ್ತಿರುವ ಚಿದಾನಂದವೆಂಬ ಲತೆಯು ಪ್ರಕಾಶಿಸುತ್ತಿದೆ !

೭. ಈ ಲೋಕದಲ್ಲಿ ಜನರು ಅನೇಕ ಗುಣಗಳುಳ್ಳ, ಇತರ ಗಿಡಗಳನ್ನು ಭಕ್ತಿಯಿಂದ ಆಶ್ರಯಿಸುವರು. ಆದರೆ ಜಗತ್ತಿನಲ್ಲಿ ಅಪರ್ಣೆಯೊಬ್ಬಳೇ ಎಲ್ಲರಿಂದಲೂ ಪೂಜ್ಯಳೆಂದು ನನ್ನ ಮನಸ್ಸು ಸಂತೋಷಗೊಳ್ಳುತ್ತದೆ : ಏಕೆಂದರೆ ಸರ್ವವ್ಯಾಪಕನೂ, ಪುರಾಣಪುರುಷನೂ ಆದ ಶಿವನು (ಹೀಗೆ ಅವಳನ್ನು ಅರ್ಚಿಸುವವರಿಗೆ) ಕೈವಲ್ಯಪದವಿಯೆಂಬ ಫಲವನ್ನು ಅನುಗ್ರಹಿಸುವುದಿಲ್ಲವೇನು?

೮. ಕುಬೇರನಿಂದ ನಮಸ್ಕರಿಸಲ್ಪಟ್ಟ ಪಾದಕಮಲಗಳುಳ್ಳವಳೇ, ಕಂದರ್ಪನು ಜಯಿಸುವಂತೆ ಮಾಡಿದವಳೆ, ಪರಬ್ರಹ್ಮಸ್ವರೂಪಿಯಾದ ಶಿವನ ರಾಣಿಯು ನೀನು, ಸಕಲ ವೇದಗಳ ಜನನಿ, ಧರ್ಮರಕ್ಷಕಳು, ಸಕಲೈಶ್ವರ್ಯಗಳ ಮೂಲವು; ಎಲ್ಲಾ ಆಶೆಗಳಿಗೂ ನೀನೇ ಆದಿಯು, ನೀನೇ ಸತ್ಪುರುಷರಿಗೆ ಮುಕ್ತಿಪ್ರದಾಯಕಳು.

ಪ್ರಭೂತಾ ಭಕ್ತಿಸ್ತೇ ಯದಪಿ ನ ಮಮಾಲೋಲಮನಸ-
ಸ್ತ್ವಯಾ ತು ಶ್ರೀಮತ್ಯಾ ಸದಯಮವಲೋಕ್ಯೋಽಹಮಧುನಾ ।
ಪಯೋದಃ ಪಾನೀಯಂ ದಿಶತಿ ಮಧುರಂ ಚಾತಕಮುಖೇ
ಭೃಶಂ ಶಂಕೇ ಕೈರ್ವಾ ವಿಧಿಭಿರನುನೀತಾ ಮಮ ಮತಿಃ ॥ ೯ ॥

ಕೃಪಾಽಪಾಂಗಾಲೋಕಂ ವಿತರ ಸರಸಾ ಸಾಧುಚರಿತೇ
ನ ತೇ ಯುಕ್ತೋಪೇಕ್ಷಾ ಮಯಿ ಶರಣದೀಕ್ಷಾಮುಪಗತೇ ।
ನ ಚೇದಿಷ್ಟಂ ದದ್ಯಾದನುಪದಮಹೋ ಕಲ್ಪಲತಿಕಾ
ವಿಶೇಷಃ ಸಾಮಾನ್ಯೈಃ ಕಥಮಿತರವಲ್ಲೀಪರಿಕರೈಃ ॥ ೧೦ ॥

ಮಹಾಂತಂ ವಿಶ್ವಾಸಂ ತವ ಚರಣಪಂಕೇರುಹಯುಗೇ
ನಿಧಾಯಾನ್ಯನ್ನೈವಾಶ್ರಿತಮಿಹ ಮಯಾ ದೈವತಮುಮೇ ।
ತಥಾಽಪಿ ತ್ವಚ್ಚೇತೋ ಯದಿ ಮಯಿ ನ ಜಾಯೇತ ಸದಯಂ
ನಿರಾಲಂಬೋ ಲಂಬೋದರಜನನಿ ಕಂ ಯಾಮಿ ಶರಣಮ್ ॥ ೧೧ ॥

ಅಯಃ ಸ್ಪರ್ಶೇ ಲಗ್ನಂ ಸಪದಿ ಲಭತೇ ಹೇಮಪದವೀಂ
ಯಥಾ ರಥ್ಯಾಪಾಥಃ ಶುಚಿ ಭವತಿ ಗಂಗೌಘ ಮಿಲಿತಮ್ ।
ತಥಾ ತತ್ತತ್ಪಾಪೈರತಿಮಲಿನಮಂತರ್ಮಮ ಯದಿ
ತ್ವಯಿ ಪ್ರೇಮ್ಣಾ ಸಕ್ತಂ ಕಥಮಿವ ನ ಜಾಯೇತ ವಿಮಲಮ್ ॥ ೧೨ ॥

ತ್ವದನ್ಯಸ್ಮಾದಿಚ್ಛಾವಿಷಯಫಲಲಾಭೇ ನ ನಿಯಮ-
ಸ್ತ್ವಮಜ್ಞಾನಾಮಿಚ್ಛಾಧಿಕಮಪಿ ಸಮರ್ಥಾ ವಿತರಣೇ ।
ಇತಿ ಪ್ರಾಹುಃ ಪ್ರಾಂಚಃ ಕಮಲಭವನಾದ್ಯಾಸ್ತ್ವಯಿ ಮನ-
ಸ್ತ್ವದಾಸಕ್ತಂ ನಕ್ತಂದಿವಮುಚಿತಮೀಶಾನಿ ಕುರು ತತ್ ॥ ೧೩ ॥

೯. ಚಂಚಲಮನಸ್ಕನಾದ ನನಗೆ ನಿನ್ನಲ್ಲಿ ಅತಿಶಯವಾದ ಭಕ್ತಿಯಿಲ್ಲದಿದ್ದರೂ ನಾನು ಈಗ ಶ್ರೀಮತಿಯಾದ ನಿನ್ನಿಂದ ಸಕರುಣವಾಗಿ ನೋಡಲ್ಪಡಲು ಯೋಗ್ಯನು; (ಏಕೆಂದರೆ) ಮೋಡವು ಜಾತಕಪಕ್ಷಿಯ ಬಾಯೊಳಕ್ಕೆ (ಅದು ಅದಕ್ಕಾಗಿ ಪ್ರಾರ್ಥಿಸುವ ಯೋಗ್ಯತೆಯಿಲ್ಲದಿದ್ದರೂ) ಸಿಹಿನೀರನ್ನು ಸುರಿಯುವುದಿಲ್ಲವೇನು? ಯಾವ ವಿಧಿಲೀಲೆಯಿಂದ ನನ್ನ ಮನಸ್ಸು (ನಿನ್ನ ಕಡೆಗೆ) ಸೆಳೆಯಲ್ಪಟ್ಟಿದೆ ಎಂಬುದನ್ನರಿಯದೆ ಬಹುವಾಗಿ ಶಂಕಿಸುತ್ತಿದ್ದೇನೆ.

೧೦. ಹೇ ಸಾಧುಚರಿತೆ, ನಿನ್ನ ದಯಾಪೂರಿತ ಕಡೆಗಣ್ಣೋಟವನ್ನು ನನ್ನೆಡೆಗೂ ಸ್ವಲ್ಪ ಪ್ರಸರಿಸು. ನಿನ್ನಲ್ಲಿ ನಾನು ಶರಣದೀಕ್ಷೆಯಿಂದ ಬದ್ಧನಾಗಿರುವೆನೆಂಬುದನ್ನು ತಿಳಿದೂ ನೀನು ಯುಕ್ತಾಯುಕ್ತತೆಯನ್ನು ಅಪೇಕ್ಷಿಸುವುದು ಸರಿಯಲ್ಲ. ಇಷ್ಟಪ್ರದಾಯಕವೆಂದು ಅನ್ವರ್ಥನಾಮವುಳ್ಳ ಕಲ್ಪಲತೆಯು ಇಷ್ಟಾರ್ಥಗಳನ್ನು ಈಡೇರಿಸದಿದ್ದರೆ ಅದಕ್ಕೂ ಸಾಮಾನ್ಯವಾದೊಂದು ಬಳ್ಳಿಗೂ ಏನು ವ್ಯತ್ಯಾಸ?

೧೧. ಹೇ ಉಮೆ, ಲಂಬೋದರಜನನಿ, ನಿನ್ನ ಪಾದಪದ್ಮಗಳಲ್ಲಿ ಮಹಾವಿಶ್ವಾಸವನ್ನಿಟ್ಟಿರುವ ನಾನು ಈ ಲೋಕದಲ್ಲಿ ಮತ್ತಾವ ದೇವತೆಯನ್ನೂ ಆಶ್ರಯಿಸಿಯೇ ಇಲ್ಲ ! ಹಾಗಿದ್ದರೂ ನಿನ್ನ ಮನಸ್ಸು ನನ್ನಲ್ಲಿ ಕರುಣೆದೋರದಿದ್ದರೆ ನಿರಾಶ್ರಯನಾಗುವ ನಾನು ಮತ್ತಾರನ್ನು ತಾನೇ ಶರಣುಹೊಗಲಿ?

೧೨. ಹೇಗೆ ಸ್ಪರ್ಶಮಣಿಯಿಂದ ಸ್ಪರ್ಶಿಸಲ್ಪಟ್ಟ ಕಬ್ಬಿಣವು ಚಿನ್ನವಾಗುವುದೋ, ಹೇಗೆ ದಾರಿಯ ಮಗ್ಗುಲಿನ ಚರಂಡಿಯ ನೀರು ಗಂಗೆಯಲ್ಲಿ ಸೇರಿದರೆ ಶುದ್ಧವಾಗುವುದೋ, ಹಾಗೆ ಅನೇಕ ಪಾಪಗಳಿಂದ ಅತಿ ಮಲಿನವಾಗಿದ್ದರೂ ನನ್ನ ಹೃದಯವು ನಿನ್ನಲ್ಲಿ ಭಕ್ತಿಯನ್ನು ಪಡೆಯಿತೆಂದರೆ, ಹೇಗೆ ತಾನೇ ನಿರ್ಮಲವಾಗುವುದಿಲ್ಲ?

೧೩. ಹೇ ಈಶಾನಿ, ಕಮಲದಲ್ಲಿ ಹುಟ್ಟಿದ ಬ್ರಹ್ಮನೇ ಮೊದಲಾದ ಪೂರ್ವಜರು ಹೇಳುವಂತೆ, ಬೇರೆ ದೇವತೆಗಳ ಉಪಾಸನೆಯು ನಿಯಮದಂತೆ ಇಚ್ಛಾಫಲವನ್ನು ಮಾತ್ರ ಕೊಡುವುದು. ನೀನಾದರೋ ಅಜ್ಞಾನಿ ಭಕ್ತರ ಇಚ್ಛೆಗಿಂತ ಹೆಚ್ಚಾದುದನ್ನೇ ಕೊಡುವುದರಲ್ಲಿ ಸಮರ್ಥಳು. ಆದಕಾರಣ ಹಗಲಿರುಳೂ ನಾನು ನಿನ್ನಲ್ಲೇ ಆಸಕ್ತನಾಗಿರುವುದೇ ಉಚಿತ; ಅದನ್ನು ಅನುಗ್ರಹಿಸು.

ಸ್ಫುರನ್ನಾನಾರತ್ನಸ್ಫಟಿಕಮಯಭಿತ್ತಿಪ್ರತಿಫಲ-
ತ್ವದಾಕಾರಂ ಚಂಚಚ್ಛಶಧರಕಲಾಸೌಧಶಿಖರಮ್ ।
ಮುಕುಂದಬ್ರಹ್ಮೇಂದ್ರಪ್ರಭೃತಿಪರಿವಾರಂ ವಿಜಯತೇ
ತವಾಗಾರಂ ರಮ್ಯಂ ತ್ರಿಭುವನಮಹಾರಾಜಗೃಹಿಣಿ ॥ ೧೪ ॥

ನಿವಾಸಃ ಕೈಲಾಸೇ ವಿಧಿಶತಮುಖಾದ್ಯಾಃ ಸ್ತುತಿಕರಾಃ
ಕುಟುಂಬಂ ತ್ರೈಲೋಕ್ಯಂ ಕೃತಕರಪುಟಃ ಸಿದ್ಧಿನಿಕರಃ ।
ಮಹೇಶಃ ಪ್ರಾಣೇಶಸ್ತದವನಿಧರಾಧೀಶತನಯೇ
ನ ತೇ ಸೌಭಾಗ್ಯಸ್ಯ ಕ್ವಚಿದಪಿ ಮನಾಗಸ್ತಿ ತುಲನಾ ॥ ೧೫ ॥

ವೃಷೋ ವೃದ್ಧೋ ಯಾನಂ ವಿಷಮಶನಮಾಶಾ ನಿವಸನಂ
ಶ್ಮಶಾನಂ ಕ್ರೀಡಾಭೂರ್ಭುಜಗನಿವಹೋ ಭೂಷಣವಿಧಿಃ ।
ಸಮಗ್ರಾ ಸಾಮಗ್ರೀ ಜಗತಿ ವಿದಿತೈವ ಸ್ಮರರಿಪೋ-
ರ್ಯದೇತಸ್ಯೈಶ್ವರ್ಯಂ ತವ ಜನನಿ ಸೌಭಾಗ್ಯಮಹಿಮಾ ॥ ೧೬ ॥

ಅಶೇಷಬ್ರಹ್ಮಾಂಡಪ್ರಲಯವಿಧಿನೈಸರ್ಗಿಕಮತಿಃ
ಶ್ಮಶಾನೇಷ್ವಾಸೀನಃ ಕೃತಭಸಿತಲೇಪಃ ಪಶುಪತಿಃ ।
ದಧೌ ಕಂಠೇ ಹಾಲಾಹಲಮಖಿಲಭೂಗೋಲಕೃಪಯಾ
ಭವತ್ಯಾಃ ಸಂಗತ್ಯಾಃ ಫಲಮಿತಿ ಚ ಕಲ್ಯಾಣಿ ಕಲಯೇ ॥ ೧೭ ॥

ತ್ವದೀಯಂ ಸೌಂದರ್ಯಂ ನಿರತಿಶಯಮಾಲೋಕ್ಯ ಪರಯಾ
ಭಿಯೈವಾಸೀದ್ಗಂಗಾ ಜಲಮಯತನುಃ ಶೈಲತನಯೇ ।
ತದೇತಸ್ಯಾಸ್ತಸ್ಮಾದ್ವದನಕಮಲಂ ವೀಕ್ಷ್ಯ ಕೃಪಯಾ
ಪ್ರತಿಷ್ಠಾಮಾತನ್ವನ್ನಿಜಶಿರಸಿ ವಾಸೇನ ಗಿರಿಶಃ ॥ ೧೮ ॥

೧೪. ತ್ರಿಲೋಕೇಶ್ವರನ ಮಡದಿಯಾದ ಶಿವೆ, ನಿನ್ನ ನೆಲೆಯು ಬಲು ರಮ್ಯವಾದುದು. (ನಿನ್ನ ಮನೆಯಲ್ಲಿ) ನಿನ್ನ ಆಕಾರವು, ಪ್ರಕಾಶಿಸುತ್ತಿರುವ ನಾನಾ ರತ್ನಗಳಿಂದ ಹಾಗೂ ಸ್ಫಟಿಕಶಿಲೆಯಿಂದ ಮಾಡಲ್ಪಟ್ಟ ಗೋಡೆಗಳಿಂದ ಪ್ರತಿಫಲಿಸಲ್ಪಡುವುದು. ಚಂದ್ರನ ಚಂಚಲವಾದ ಬೆಳಕು ಆ ಗೃಹದ ಶಿಖರದ ಮೇಲೆ ಯಾವಾಗಲೂ ಪ್ರಕಾಶಿಸುತ್ತಿರುವುದು. (ಅಲ್ಲಿ) ವಿಷ್ಣು, ಬ್ರಹ್ಮ, ಇಂದ್ರ ಮೊದಲಾದ ದೇವತೆಗಳೆಲ್ಲರೂ ವಿರಾಜಿಸುತ್ತಿರುವರು.

೧೫. ಹೇ ಪರ್ವತರಾಜತನಯೇ, ನಿನ್ನ ನಿವಾಸವಾದರೋ ಕೈಲಾಸ ಶಿಖರವು. ನಿನ್ನನ್ನು ಸ್ತುತಿಸುವವರು ಬ್ರಹ್ಮ, ಇಂದ್ರ ಮೊದಲಾದ ದೇವತೆಗಳು. ಮೂರು ಲೋಕಗಳೇ ನಿನ್ನ ಕುಟುಂಬವು. ಕೈಮುಗಿದು ನಿಂತಿರುವವರು ಸಿದ್ಧಪುರುಷರು. ಮಹೇಶ್ವರನೇ ನಿನ್ನ ಪತಿಯು. (ಹೀಗಿರುವಾಗ) ನಿನ್ನ ಸೌಭಾಗ್ಯಕ್ಕೆ ಸಮಾನವಾದದ್ದು ಇನ್ನು ಯಾವುದಿದೆ?

೧೬. ಹೇ ಜನನಿ, (ಶಿವನಿಗೆ) ಮುದಿಯಾದ ವೃಷಭವೇ ವಾಹನವು; ವಿಷವೇ ಆಹಾರವು; ಆಕಾಶವೇ ವಸ್ತ್ರವು; ಸ್ಮಶಾನವೇ ಕ್ರೀಡಾಭೂಮಿಯು; ಸರ್ಪಸಮೂಹವೇ ಆಭರಣಗಳು; ಜಗತ್ತಿನಲ್ಲಿರುವ ಎಲ್ಲವನ್ನೂ ತಿಳಿದು ಸ್ಮರನೆಂಬ ಅಸುರನ ವೈರಿಯಾದ ಈ ಶಿವನ (ಸರ್ವಜ್ಞತ್ವರೂಪದ) ಐಶ್ವರ್ಯವು ನಿನ್ನ ಸೌಭಾಗ್ಯದ ಮಹಿಮೆಯೇ ಸರಿ.

೧೭. ಪಶುಪತಿಯು ಭಸ್ಮಧಾರಿಯಾಗಿ ಸ್ಮಶಾನದಲ್ಲಿ ಕುಳಿತಿರುವನು. ಅವನ ಸ್ವಭಾವವೇ ಅಶೇಷಬ್ರಹ್ಮಾಂಡಕ್ಕೂ ಪ್ರಲಯವನ್ನುಂಟು ಮಾಡುವುದು. (ಆದರೂ) ಸಮಸ್ತಲೋಕಗಳ ಮೇಲೂ ಕೃಪೆಮಾಡಿ ಹಾಲಾಹಲವೆಂಬ ವಿಷವನ್ನು ಕಂಠದಲ್ಲೇ ಧರಿಸಿರುವನು. ಹೇ ಕಲ್ಯಾಣಿ, (ಬಹುಶಃ) ಇವೆಲ್ಲ ನಿನ್ನ ಸಹವಾಸದ ಫಲವೇ ಎಂದು ತಿಳಿಯುತ್ತೇನೆ.

೧೮. ಹೇ ಗಿರಿತನಯೇ, ನಿರತಿಶಯವಾದ ನಿನ್ನ ಸೌಂದರ್ಯವನ್ನು ನೋಡಿ ಹೆದರಿ ಗಂಗೆಯು ಜಲಮಯಶರೀರವನ್ನು ಹೊಂದಿದಳು. ಅವಳ (ದುಃಖಿತ) ಮುಖಕಮಲವನ್ನು ನೋಡಿ ಶಿವನು ಕೃಪೆಯಿಟ್ಟು ಅವಳಿಗೆ ತನ್ನ ಜಟೆಯಲ್ಲಿ ವಾಸವನ್ನು ಕಲ್ಪಿಸಿಕೊಟ್ಟನು.

ವಿಶಾಲಶ್ರೀಖಂಡದ್ರವಮೃಗಮದಾಕೀರ್ಣಘುಸೃಣ-
ಪ್ರಸೂನವ್ಯಾಮಿಶ್ರಂ ಭಗವತಿ ತವಾಭ್ಯಂಗಸಲಿಲಮ್ ।
ಸಮಾದಾಯ ಸ್ರಷ್ಟಾ ಚಲಿತಪದಪಾಂಸೂನ್ನಿಜಕರೈಃ
ಸಮಾಧತ್ತೇ ಸೃಷ್ಟಿಂ ವಿಬುಧಪುರಪಂಕೇರುಹದೃಶಾಮ್ ॥ ೧೯ ॥

ವಸಂತೇ ಸಾನಂದೇ ಕುಸುಮಿತಲತಾಭಿಃ ಪರಿವೃತೇ
ಸ್ಫುರನ್ನಾನಾಪದ್ಮೇ ಸರಸಿ ಕಲಹಂಸಾಲಿಸುಭಗೇ ।
ಸಖೀಭಿಃ ಖೇಲಂತೀಂ ಮಲಯಪವನಾಂದೋಲಿತಜಲೇ
ಸ್ಮರೇದ್ಯಸ್ತ್ವಾಂ ತಸ್ಯಾ ಜ್ವರಜನಿತಪೀಡಾಽಪಸರತಿ ॥ ೨೦ ॥

॥ ಇತಿ ಆನಂದಲಹರೀ ಸಂಪೂರ್ಣಮ್ ॥

೧೯. ಹೇ ಭಗವತಿ, ಶ್ರೀಗಂಧದ್ರವ, ಕಸ್ತೂರಿ, ಕೇಸರಿ ಹಾಗೂ ಪುಷ್ಪಗಳು-ಇವುಗಳಿಂದ ಕೂಡಿದ ನಿನ್ನ ಸ್ನಾನದ ನೀರನ್ನು, ಹಾಗೂ ನಿನ್ನ ಪಾದಧೂಳಿಯನ್ನು, ತನ್ನ ಕೈಗಳಿಂದ ತೆಗೆದುಕೊಂಡು, ಕಮಲದಂತೆ ಕಣ್ಣುಳ್ಳ ದೇವತಾಸ್ತ್ರೀಯರನ್ನು ಬ್ರಹ್ಮನು ಸೃಷ್ಟಿಸಿದನು.

೨೦. ವಸಂತಕಾಲದಲ್ಲಿ ಹೂಬಿಟ್ಟಿರುವ ಬಳ್ಳಿಗಳ ನಡುವೆ, ನಾನಾ ವಿಧದ ಪದ್ಮಗಳಿಂದಲೂ, ಹಂಸಗಳ ಮತ್ತು ಭ್ರಮರಗಳ ಗುಂಪಿನಿಂದಲೂ ಕೂಡಿ ಮಲಯಮಾರುತದಿಂದ ಸಣ್ಣ ಅಲೆಗಳೇಳುತ್ತಿರುವ ಸರೋವರದಲ್ಲಿ, ಗೆಳತಿಯರ ಜೊತೆಗೆ ಆನಂದದಿಂದ ಕ್ರೀಡಿಸುತ್ತಿರುವ ನಿನ್ನನ್ನು ಯಾವನು ಸ್ಮರಿಸುವನೋ ಅವನ ಜ್ವರಜನ್ಯವೇ ಮೊದಲಾದ ಪೀಡೆಗಳೆಲ್ಲವೂ ಪರಿಹಾರವಾಗುವುವು.

ಹೀಗೆ ಆನಂದಲಹರೀ ಸ್ತೋತ್ರವು ಮುಗಿಯಿತು.

# ಕನಕಧಾರಾಸ್ತೋತ್ರಮ್

ಅಂಗಂ ಹರೇಃ ಪುಲಕಭೂಷಣಮಾಶ್ರಯಂತೀ
ಭೃಂಗಾಂಗನೇವ ಮುಕುಲಾಭರಣಂ ತಮಾಲಮ್ ।
ಅಂಗೀಕೃತಾಖಿಲವಿಭೂತಿರಪಾಂಗಲೀಲಾ
ಮಾಂಗಲ್ಯದಾಽಸ್ತು ಮಮ ಮಂಗಲದೇವತಾಯಾಃ ॥ ೧ ॥

ಮುಗ್ಧಾ ಮುಹುರ್ವಿದಧತೀ ವದನೇ ಮುರಾರೇಃ
ಪ್ರೇಮತ್ರಪಾಪ್ರಣಿಹಿತಾನಿ ಗತಾಗತಾನಿ ।
ಮಾಲಾದೃಶೋರ್ಮಧುಕರೀವ ಮಹೋತ್ಪಲೇ ಯಾ
ಸಾ ಮೇ ಶ್ರಿಯಂ ದಿಶತು ಸಾಗರಸಂಭವಾಯಾಃ ॥ ೨ ॥

ವಿಶ್ವಾಮರೇಂದ್ರಪದವಿಭ್ರಮದಾನದಕ್ಷ-
ಮಾನಂದಹೇತುರಧಿಕಂ ಮುರವಿದ್ವಿಷೋಽಪಿ ।
ಈಷನ್ನಿಷೀದತು ಮಯಿ ಕ್ಷಣಮೀಕ್ಷಣಾರ್ಧ-
ಮಿಂದೀವರೋದರಸಹೋದರಮಿಂದಿರಾಯಾಃ ॥ ೩ ॥

ಆಮೀಲಿತಾಕ್ಷಿಮಧಿಗಮ್ಯ ಮುದಾ ಮುಕುಂದ-
ಮಾನಂದಕಂದಮನಿಮೇಷಮನಂಗತಂತ್ರಮ್ ।
ಆಕೇಕರಸ್ಥಿತಕನೀನಿಕಪಕ್ಷ್ಮನೇತ್ರಂ
ಭೂತ್ಯೈ ಭವೇನ್ಮಮ ಭುಜಂಗಶಯಾಂಗನಾಯಾಃ ॥ ೪ ॥

ಬಾಹ್ವಂತರೇ ಮಧುಜಿತಃ ಶ್ರಿತಕೌಸ್ತುಭೇ ಯಾ
ಹಾರಾವಲೀವ ಹರಿನೀಲಮಯೀ ವಿಭಾತಿ ।
ಕಾಮಪ್ರದಾ ಭಗವತೋಽಪಿ ಕಟಾಕ್ಷಮಾಲಾ
ಕಲ್ಯಾಣಮಾವಹತು ಮೇ ಕಮಲಾಲಯಾಯಾಃ ॥ ೫ ॥

# ಕನಕಧಾರಾಸ್ತೋತ್ರ

೧. ಮೊಗ್ಗುಗಳನ್ನೇ ಆಭರಣವಾಗಿ ಹೊಂದಿರುವ ತಮಾಲವೃಕ್ಷವನ್ನು ಹೆಣ್ಣುದುಂಬಿಯು ಹೇಗೆ ಆಶ್ರಯಿಸುವುದೋ ಹಾಗೆ ರೋಮಾಂಚನವನ್ನು ಆಭರಣವನ್ನಾಗಿ ಹೊಂದಿರುವ ಶ್ರೀಹರಿಯ ಶರೀರವನ್ನು ಆಶ್ರಯಿಸಿರುವ, ಸಮಸ್ತವೈಭವಗಳನ್ನೂ ತನ್ನ ಅಂಗವಾಗಿ ಮಾಡಿಕೊಂಡಿರುವ, ಮಂಗಳ ದೇವತೆಯ ಚಂಚಲವಾದ ಕಡೆಗಣ್ಣೋಟವು ನನಗೆ ಮಾಂಗಲ್ಯವನ್ನು ಕೊಡಲಿ.

೨. ವಿಷ್ಣುವಿನ ಮುಖದಲ್ಲಿ ಮೋಹಗೊಂಡು ಅಡಿಗಡಿಗೆ ಪ್ರೇಮ ದಿಂದಲೂ ಲಜ್ಜೆಯಿಂದಲೂ ಇಡಲಾಗುವ, ಚಂಚಲವಾದ ನೋಟಗಳನ್ನು ಬೀರುತ್ತ ಇರುವ, ದೊಡ್ಡದಾದ ಕನ್ನೈದಿಲೆಯಲ್ಲಿ ಹೆಣ್ಣುದುಂಬಿಯಂತೆ ಇರುವ ಮಹಾಲಕ್ಷ್ಮಿಯ ಕಣ್ಣೋಟದ ಸಾಲು ನನಗೆ ಸಿರಿಯನ್ನು ಹೆಚ್ಚಾಗಿ ಕೊಡಲಿ.

೩. ಸಮಸ್ತ ದೇವತೆಗಳಿಗೂ ಒಡೆಯನಾದ ಇಂದ್ರನಿಗೆ ಅವನ ಪದವಿಯ ಆಧಿಕ್ಯವನ್ನು ದಾನಮಾಡುವುದರಲ್ಲಿ ವಿಚಕ್ಷಣವಾದ, ಮುರಾರಿಯಾದ ಮಹಾವಿಷ್ಣುವಿಗೂ ಅತ್ಯಂತ ಆನಂದಕ್ಕೆ ಕಾರಣವಾಗಿರುವ, ಕಮಲಗರ್ಭಕ್ಕೆ ಸದೃಶವಾಗಿರುವ, ಮಹಾಲಕ್ಷ್ಮಿಯ ಅರೆಗಣ್ಣೋಟವು ನನ್ನಲ್ಲಿ ಸ್ವಲ್ಪವಾದರೂ ಬೀರಲ್ಪಡಲಿ!

೪. ಆನಂದದಿಂದ ಅರೆಮುಚ್ಚಿದ ನಯನಗಳನ್ನುಳ್ಳ ಮುಕುಂದನನ್ನು ಸೇರಿ, ಅವನ ಆನಂದಕ್ಕೆ ಕಾರಣವಾಗಿರುವ, ಎವೆಯಿಕ್ಕದಿರುವ, ಮನ್ಮಥನ ವಿದ್ಯೆಯೇ ಮೂರ್ತಿವೆತ್ತಂತಿರುವ, ಅರೆಮುಚ್ಚಿ ಅರೆದೆರೆದಿರುವ, ರೆಪ್ಪೆಗಳನ್ನೇ ರೆಕ್ಕೆಗಳನ್ನಾಗಿ ಹೊಂದಿದ ಕಣ್ಣುಗುಡ್ಡೆಯಿಂದ ಒಡಗೂಡಿದ, ಮಹಾಲಕ್ಷ್ಮಿಯ ನೇತ್ರವು ನನಗೆ ಐಶ್ವರ್ಯವನ್ನು ಕೊಡಲಿ!

೫. ಕಮಲಾಲಯೆಯಾದ ಮಹಾಲಕ್ಷ್ಮಿಯ ಯಾವ ಕಟಾಕ್ಷ ಮಾಲೆಯು ಕೌಸ್ತುಭವನ್ನು ಧರಿಸಿದ ಮಹಾವಿಷ್ಣುವಿನ ಎದೆಯ ಮೇಲಿರುವ ಇಂದ್ರನೀಲಮಣಿಗಳ ಹಾರದಂತೆ ಕಂಗೊಳಿಸುತ್ತಿರುವುದೊ, ಭಗವಂತನಿಗೂ ಇಷ್ಟಾರ್ಥವನ್ನು ಸಲ್ಲಿಸಬಲ್ಲುದೊ, ಅದು ನನಗೆ ಮಂಗಳವನ್ನುಂಟು ಮಾಡಲಿ.

ಕಾಲಾಂಬುದಾಲಿಲಲಿತೋರಸಿ ಕೈಟಭಾರೇ-
ರ್ಧಾರಾಧರೇ ಸ್ಫುರತಿ ಯಾ ತಟಿದಂಗನೇವ ।
ಮಾತುಃ ಸಮಸ್ತಜಗತಾಂ ಮಹನೀಯಮೂರ್ತಿ-
ರ್ಭದ್ರಾಣಿ ಮೇ ದಿಶತು ಭಾರ್ಗವನಂದನಾಯಾಃ ॥ ೬ ॥

ಪ್ರಾಪ್ತಂ ಪದಂ ಪ್ರಥಮತಃ ಖಲು ಯತ್ಪ್ರಭಾವಾ-
ನ್ಮಾಂಗಲ್ಯಭಾಜಿ ಮಧುಮಾಥಿನಿ ಮನ್ಮಥೇನ ।
ಮಯ್ಯಾಪತೇತ್ತದಿಹ ಮಂಥರಮೀಕ್ಷಣಾರ್ಧಂ
ಮಂದಾಲಸಂ ಚ ಮಕರಾಲಯಕನ್ಯಕಾಯಾಃ ॥ ೭ ॥

ದದ್ಯಾದ್ದಯಾನುಪವನೋ ದ್ರವಿಣಾಂಬುಧಾರಾಮ್
ಅಸ್ಮಿನ್ನಕಿಂಚನವಿಹಂಗಶಿಶೌ ವಿಷಣ್ಣೇ ।
ದುಷ್ಕರ್ಮಘರ್ಮಮಪನೀಯ ಚಿರಾಯ ದೂರಂ
ನಾರಾಯಣಪ್ರಣಯಿನೀನಯನಾಂಬುವಾಹಃ ॥ ೮ ॥

ಇಷ್ಟಾ ವಿಶಿಷ್ಟಮತಯೋಽಪಿ ಯಯಾ ದಯಾರ್ದ್ರ-
ದೃಷ್ಟ್ಯಾ ತ್ರಿವಿಷ್ಟಪಪದಂ ಸುಲಭಂ ಲಭಂತೇ ।
ದೃಷ್ಟಿಃ ಪ್ರಹೃಷ್ಟಕಮಲೋದರದೀಪ್ತಿರಿಷ್ಟಾಂ
ಪುಷ್ಟಿಂ ಕೃಷೀಷ್ಟ ಮಮ ಪುಷ್ಕರವಿಷ್ಟರಾಯಾಃ ॥ ೯ ॥

ಗೀರ್ದೇವತೇತಿ ಗರುಡಧ್ವಜಸುಂದರೀತಿ
ಶಾಕಂಭರೀತಿ ಶಶಿಶೇಖರವಲ್ಲಭೇತಿ ।
ಸೃಷ್ಟಿಸ್ಥಿತಿಪ್ರಲಯಕೇಲಿಷು ಸಂಸ್ಥಿತಾಯೈ
ತಸ್ಯೈ ನಮಸ್ತ್ರಿಭುವನೈಕಗುರೋಸ್ತರುಣ್ಯೈ ॥ ೧೦ ॥

೬. ಕಪ್ಪುಮೇಘವಂತಿರುವ, ಕೈಟಭಾರಿ ಮಹಾವಿಷ್ಣುವಿನ ಸುಂದರವಾದ ಎದೆಯ ಮೇಲೆ - ಮೋಡದಲ್ಲಿ ಬೆಳಗುವ ಮಿಂಚಿನಂತೆ - ಭೃಗುನಂದನಳೂ ಸಮಸ್ತ ಜಗನ್ಮಾತೆಯೂ ಆದ ಮಹಾಲಕ್ಷ್ಮಿಯ ಯಾವ ದಿವ್ಯಮಂಗಲ ಮೂರ್ತಿಯು ಬೆಳಗುತ್ತಿರುವುದೋ, ಅದು ನನಗೆ ಮಂಗಳವನ್ನು ಕೊಡಲಿ!

೭. ಮಧುವೈರಿಯೂ, ಸಕಲ ಮಂಗಳಗಳಿಗೆ ಪಾತ್ರೆಯಂತಿರುವವನೂ ಆದ ಮಹಾವಿಷ್ಣುವಿನಲ್ಲಿ ಯಾವುದರ ಪ್ರಭಾವದಿಂದ ಮನ್ಮಥನಿಗೂ ಒಂದು ಸ್ಥಾನ ಸಿಕ್ಕಿತೋ ಅಂತಹ, ಸಮುದ್ರಕನ್ನಿಕೆಯ ಅರೆನೋಟವೂ ನನ್ನಲ್ಲಿ ಮಂದವಾಗಿಯೂ ನಿಧಾನವಾಗಿಯೂ ಆಲಸ್ಯದಿಂದಲೂ ಬೀಳಲಿ !

೮. ದಯೆಯೆಂಬ ವಾಯುವನ್ನು ಅನುಸರಿಸಿರುವ, ನಾರಾಯಣ ಪತ್ನಿಯ ದೃಷ್ಟಿಯೆಂಬ ಮೇಘವು, ದುಷ್ಕರ್ಮವೆಂಬ ಬೇಸಗೆಯನ್ನು ಬಹುಕಾಲ ಬಹುದೂರ ಹೋಗಲಾಡಿಸಿ, ದಾರಿದ್ರ್ಯದಿಂದ ಕೂಡಿ ಕಂಗೆಟ್ಟಿರುವ ಈ ಚಾತಕಪಕ್ಷಿಯ ಮೇಲೆ, ಐಶ್ವರ್ಯವೆಂಬ ಮಳೆಯನ್ನು ಕರೆಯಲಿ !

೯. ಯಾವ ದಯಾರ್ದ್ರದೃಷ್ಟಿಯಿಂದ, ವಿಶೇಷಜ್ಞಾನಿಗಳಾದವರು ಕೂಡ, ಇಚ್ಛಿಸಲ್ಪಟ್ಟರೆ, ಸ್ವರ್ಗಲೋಕವನ್ನು ಸುಲಭವಾಗಿ ಸೇರುವರೋ ಅಂತಹ, ಅರಳಿರುವ ಕಮಲದ ಗರ್ಭದಂತೆ ಪ್ರಕಾಶಮಾನವಾದ, ಮಹಾಲಕ್ಷ್ಮಿಯ ನೋಟವು, ನನಗಿಷ್ಟವಾದ ಪುಷ್ಟಿಯನ್ನು ಕೊಡಲಿ !

೧೦. ವಾಗ್ದೇವತೆಯಾದ (ಸರಸ್ವತಿಯೆಂದೂ), ಗರುಡಧ್ವಜನ ಪತ್ನಿಯಾದ (ಲಕ್ಷ್ಮಿಯೆಂದೂ), ಚಂದ್ರಶೇಖರನ ವಲ್ಲಭೆಯಾದ ಶಾಕಂಭರಿಯೆಂದೂ (ಪ್ರಸಿದ್ಧಳಾಗಿ) ಸೃಷ್ಟಿ-ಸ್ಥಿತಿ-ಲಯಗಳೆಂಬ ಆಟದಲ್ಲಿ ಯಾವಳು ನೆಲೆಸಿದ್ದಾಳೆಯೋ ಅಂತಹ, ಮೂರು ಜಗತ್ತುಗಳಿಗೂ ಏಕಮಾತ್ರ ಪಿತೃವಾದ (ಭಗವಂತನ) ಆ ಪತ್ನಿಗೆ ನಮಸ್ಕಾರ !

ಶ್ರುತ್ಯೈ ನಮೋಽಸ್ತು ಶುಭಕರ್ಮಫಲಪ್ರಸೂತ್ಯೈ
ರತ್ಯೈ ನಮೋಽಸ್ತು ರಮಣೀಯಗುಣಾರ್ಣವಾಯೈ ।
ಶಕ್ತ್ಯೈ ನಮೋಽಸ್ತು ಶತಪತ್ರನಿಕೇತನಾಯೈ
ಪುಷ್ಟ್ಯೈ ನಮೋಽಸ್ತು ಪುರುಷೋತ್ತಮವಲ್ಲಭಾಯೈ ॥ ೧೧ ॥

ನಮೋಽಸ್ತು ನಾಲೀಕನಿಭಾನನಾಯೈ
ನಮೋಽಸ್ತು ದುಗ್ಧೋದಧಿಜನ್ಮಭೂಮ್ಯೈ ।
ನಮೋಽಸ್ತು ಸೋಮಾಮೃತಸೋದರಾಯೈ
ನಮೋಽಸ್ತು ನಾರಾಯಣವಲ್ಲಭಾಯೈ ॥ ೧೨ ॥

ಸಂಪತ್ಕರಾಣಿ ಸಕಲೇಂದ್ರಿಯನಂದನಾನಿ
ಸಾಮ್ರಾಜ್ಯದಾನವಿಭವಾನಿ ಸರೋರುಹಾಕ್ಷಿ ।
ತ್ವದ್ವಂದನಾನಿ ದುರಿತಾಹರಣೋದ್ಯತಾನಿ
ಮಾಮೇವ ಮಾತರನಿಶಂ ಕಲಯಂತು ಮಾನ್ಯೇ ॥ ೧೩ ॥

ಯತ್ಕಟಾಕ್ಷಸಮುಪಾಸನಾವಿಧಿಃ
ಸೇವಕಸ್ಯ ಸಕಲಾರ್ಥಸಂಪದಃ ।
ಸಂತನೋತಿ ವಚನಾಂಗಮಾನಸೈ-
ಸ್ತ್ವಾಂ ಮುರಾರಿಹೃದಯೇಶ್ವರೀಂ ಭಜೇ ॥ ೧೪ ॥

ಸರಸಿಜನಿಲಯೇ ಸರೋಜಹಸ್ತೇ
ಧವಲತಮಾಂಶುಕಗಂಧಮಾಲ್ಯಶೋಭೇ ।
ಭಗವತಿ ಹರಿವಲ್ಲಭೇ ಮನೋಜ್ಞೇ
ತ್ರಿಭುವನಭೂತಿಕರಿ ಪ್ರಸೀದ ಮಹ್ಯಮ್ ॥ ೧೫ ॥

೧೧. ಶುಭಕರ್ಮಫಲವನ್ನು ಕೊಡುವ ಶ್ರುತಿರೂಪಳಾದ ದೇವಿಗೆ ನಮಸ್ಕಾರ ! ರಮಣೀಯ ಗುಣಗಳಿಗೆ ಸಮುದ್ರದಂತಿರುವ ರತಿಗೆ ನಮಸ್ಕಾರ ! ಶತದಳ ಪದ್ಮವನ್ನೇ ಆಲಯವನ್ನಾಗಿ ಹೊಂದಿರುವ ಶಕ್ತಿಗೆ ನಮಸ್ಕಾರ ! ಪುರುಷೋತ್ತಮನ ವಲ್ಲಭೆಯಾದ ಪುಷ್ಟಿರೂಪದೇವಿಗೆ ನಮಸ್ಕಾರ!

೧೨. ಕಮಲದಂತೆ ಮುಖವುಳ್ಳವಳಿಗೆ ನಮಸ್ಕಾರ ! ಕ್ಷೀರಸಾಗರದಲ್ಲಿ ಜನಿಸಿದ ದೇವಿಗೆ ನಮಸ್ಕಾರ ! ಚಂದ್ರನಿಗೂ ಅಮೃತಕ್ಕೂ ಸೋದರಿಯಾದವಳಿಗೆ ನಮಸ್ಕಾರ ! ಶ್ರೀಮನ್ನಾರಾಯಣನ ಪ್ರಿಯಪತ್ನಿಗೆ ನಮಸ್ಕಾರ !

೧೩. ಹೇ ಮಾತೆ, ಹೇ ಕಮಲನಯನೆ, ಮಾನ್ಯಳೆ, ಸಂಪತ್ತನ್ನು ಉಂಟುಮಾಡಬಲ್ಲ, ಸಕಲೇಂದ್ರಿಯಗಳಿಗೂ ಆನಂದವನ್ನು ಕೊಡಬಲ್ಲ, ಸಾಮ್ರಾಜ್ಯವನ್ನೇ ದಾನಮಾಡುವುದರಲ್ಲಿ ನಿರತವಾಗಿರುವ, ಪಾಪಗಳನ್ನು ನಾಶಮಾಡುವುದರಲ್ಲಿ ಉದ್ಯುಕ್ತವಾಗಿರುವ, ನನ್ನಿಂದ ನಿನಗೆ ಮಾಡಲ್ಪಟ್ಟಿರುವ ನಮಸ್ಕಾರಗಳು ನನ್ನನ್ನೇ ಸದಾ ಸೇರಲಿ !

೧೪. ಯಾರ ಕೃಪಾಕಟಾಕ್ಷವನ್ನು ಉಪಾಸಿಸಿದರೆ ಸೇವಕನಾದವನಿಗೆ ಸಕಲ ಪದಾರ್ಥರೂಪದ ಸಂಪತ್ತು ದೊರಕುವುದೊ, ಅಂತಹ ಶ್ರೀಹರಿಯ ಹೃದಯೇಶ್ವರಿಯಾದ ನಿನ್ನನ್ನು ಕಾಯದಿಂದಲೂ, ವಾಕ್ಕಿನಿಂದಲೂ, ಮನಸ್ಸಿನಿಂದಲೂ ಭಜಿಸುತ್ತೇನೆ.

೧೫. ಹೇ ಪದ್ಮಾಸನೇ, ಪದ್ಮವನ್ನು ಕೈಯಲ್ಲಿ ಧರಿಸಿರುವವಳೇ, ಅತ್ಯಂತ ಬಿಳಿದಾದ ವಸ್ತ್ರವನ್ನೂ, ಗಂಧಮಾಲೆಯನ್ನೂ ಧರಿಸಿ ಶೋಭಿಸುತ್ತಿರುವವಳೇ, ಭಗವತಿ, ಶ್ರೀಹರಿಪ್ರಿಯಳೇ, ಸುಂದರಳೇ, ಮೂಜಗಗಳಿಗೂ ಐಶ್ವರ್ಯದಾತೃವೇ, ನನ್ನಲ್ಲಿ ಪ್ರಸನ್ನಳಾಗು !

ದಿಗ್ಘಸ್ತಿಭಿಃ ಕನಕಕುಂಭಮುಖಾವಸೃಷ್ಟ-
ಸ್ವರ್ವಾಹಿನೀವಿಮಲಚಾರುಜಲಪ್ಲುತಾಂಗೀಮ್ ।
ಪ್ರಾತರ್ನಮಾಮಿ ಜಗತಾಂ ಜನನೀಮಶೇಷ-
ಲೋಕಾಧಿನಾಥಗೃಹಿಣೀಮಮೃತಾಬ್ಧಿಪುತ್ರೀಮ್ ॥ ೧೬ ॥

ಕಮಲೇ ಕಮಲಾಕ್ಷವಲ್ಲಭೇ ತ್ವಂ
ಕರುಣಾಪೂರತರಂಗಿತೈರಪಾಂಗೈಃ ।
ಅವಲೋಕಯ ಮಾಮಕಿಂಚನಾನಾಂ
ಪ್ರಥಮಂ ಪಾತ್ರಮಕೃತ್ರಿಮಂ ದಯಾಯಾಃ ॥ ೧೭ ॥

ಸ್ತುವಂತಿ ಯೇ ಸ್ತುತಿಭಿರಮೀಭಿರನ್ವಹಂ
ತ್ರಯೀಮಯೀಂ ತ್ರಿಭುವನಮಾತರಂ ರಮಾಮ್ ।
ಗುಣಾಧಿಕಾ ಗುರುತರಭಾಗ್ಯಭಾಜಿನೋ
ಭವಂತಿ ತೇ ಭುವಿ ಬುಧಭಾವಿತಾಶಯಾಃ ॥ ೧೮ ॥

॥ ಇತಿ ಕನಕಧಾರಾಸ್ತೋತ್ರಮ್ ಸಂಪೂರ್ಣಮ್ ॥

೧೬. ದಿಗ್ಗಜಗಳು ಸುವರ್ಣಕುಂಭಗಳ ಮುಖದಿಂದ ಸುರಿಸುತ್ತಿರುವ ಗಂಗೆಯ, ಪರಿಶುದ್ದವೂ, ಸುಂದರವೂ ಆದ ನೀರಿನಿಂದ ತೊಯ್ದ ಅವಯುವ ಗಳನ್ನುಳ್ಳ, ಲೋಕಗಳಿಗೆಲ್ಲ ಏಕೈಕನಾಥನ ಗೃಹಿಣಿಯೂ ಜಗಜ್ಜನನಿಯೂ ಅಮೃತಸಮುದ್ರದ ಪುತ್ರಿಯೂ ಆದ (ಮಹಾಲಕ್ಷ್ಮಿ)ಯನ್ನು ಪ್ರಾತಃ ಕಾಲದಲ್ಲಿ ನಮಸ್ಕರಿಸುತ್ತೇನೆ.

೧೭. ಹೇ ಕಮಲಾದೇವಿ, ಶ್ರೀಹರಿವಲ್ಲಭೆ, ದರಿದ್ರರ ದಯಾದೃಷ್ಟಿಗೂ ಸಹಜವಾಗಿಯೇ ಪ್ರಥಮಪಾತ್ರನಾಗಿರುವ ನನ್ನನ್ನು ನಿನ (ನಿನ್ನ) ಕರುಣೆಯೆಂಬ ಅಲೆಗಳಿಂದ ಕೂಡಿರುವ ಪ್ರವಾಹದಂತಿರುವ ಕಡೆಗಣ್ಣೋಟ ದಿಂದ ವೀಕ್ಷಿಸು!

೧೮. ಯಾರು ಈ ಸ್ತೋತ್ರಗಳ ಮೂಲಕ ಹಗಲಿರುಳೂ ತ್ರಯೀ ವಿದ್ಯಾಸ್ವರೂಪಳೂ, ತ್ರಿಭುವನಜನನಿಯೂ ಆದ ಲಕ್ಷ್ಮಿಯನ್ನು ಸ್ತುತಿಸುವರೋ ಅವರು ಅತ್ಯಂತ ಗುಣಶಾಲಿಗಳೂ, ಅತ್ಯಂತ ಭಾಗ್ಯಶಾಲಿಗಳೂ, ಜ್ಞಾನಿಗಳ ಧ್ಯಾನಕ್ಕೆ ಆಶ್ರಯರೂ ಆಗುವರು.

ಹೀಗೆ ಕನಕಧಾರಾಸ್ತೋತ್ರವು ಮುಗಿಯಿತು.

# ಕರ್ಪೂರಾದಿಸ್ತೋತ್ರಮ್

ಕರ್ಪೂರಂ ಮಧ್ಯಮಾಂತ್ಯಸ್ವರಪರಿರಹಿತಂ ಸೇಂದುವಾಮಾಕ್ಷಿಯುಕ್ತಂ
ಬೀಜಂ ತೇ ಮಾತರೇತತ್ತ್ರಿಪುರಹರವಧು ತ್ರಿಃಕೃತಂ ಯೇ ಜಪಂತಿ ।
ತೇಷಾಂ ಗದ್ಯಾನಿ ಪದ್ಯಾನಿ ಚ ಮುಖಕುಹರಾದುಲ್ಲಸಂತ್ಯೇವ ವಾಚಃ
ಸ್ವಚ್ಛಂದಂ ಧ್ವಾಂತಧಾರಾಧರರುಚಿರುಚಿರೇ ಸರ್ವಸಿದ್ಧಿಂ
ಗತಾನಾಮ್ ॥ ೧ ॥

ಈಶಾನಸ್ಸೇಂದುವಾಮಶ್ರವಣಪರಿಗತೋ ಬೀಜಮನ್ಯನ್ಮಹೇಶಿ
ದ್ವಂದ್ವಂ ತೇ ಮಂದಚೇತಾ ಯದಿ ಜಪತಿ ಜನೋ
ವಾರಮೇಕಂ ಕದಾಚಿತ್ ।
ಜಿತ್ವಾ ವಾಚಾಮಧೀಶಂ ಧನದಮಪಿ ಚಿರಂ
ಮೋಹಯನ್ನಂಬುಜಾಕ್ಷೀ-
ವೃಂದಂ ಚಂದ್ರಾರ್ಧಚೂಡೇ ಪ್ರಭವತಿ ಸ ಮಹಾಘೋರ-
ಬಾಣಾವತಂಸೇ ॥ ೨ ॥

ಈಶೋ ವೈಶ್ವಾನರಸ್ಥಃ ಶಶಧರವಿಲಸದ್ವಾಮನೇತ್ರೇಣ ಯುಕ್ತೋ
ಬೀಜಂ ತೇ ದ್ವಂದ್ವಮನ್ಯದ್ ವಿಗಲಿತಚಿಕುರೇ ಕಾಲಿಕೇ
ಯೇ ಜಪಂತಿ ।
ದ್ವೇಷ್ಟಾರಂ ಘ್ನಂತಿ ತೇ ಚ ತ್ರಿಭುವನಮಪಿ ತೇ ವಶ್ಯಭಾವಂ ನಯಂತಿ
ಸೃಕ್ಕದ್ವಂದ್ವಾಸ್ರಧಾರಾದ್ವಯಧರವದನೇ ದಕ್ಷಿಣೇ ತ್ರ್ಯಕ್ಷರೇತಿ ॥ ೩ ॥

# ಕರ್ಪೂರಾದಿಸ್ತೋತ್ರ

೧. ಹೇ ಮಾತೆ, ಹೇ ತ್ರಿಪುರಹರವಧು! ''ಕರ್ಪೂರಂ'' ಎಂಬ ಪದದಲ್ಲಿ ಮಧ್ಯದ ರೇಫಯುಕ್ತ ಪಕಾರವನ್ನೂ ಅಂತ್ಯದಲ್ಲಿರುವ ಅನುಸ್ವಾರವನ್ನೂ ಅಕಾರ ಊಕಾರ ಅಕಾರ ಎಂಬ ಎಲ್ಲ ಸ್ವರಗಳನ್ನೂ ಬಿಟ್ಟರೆ ಉಳಿಯುವ ಕ್ರ್ ಎಂಬ ಅಕ್ಷರಕ್ಕೆ ಅರ್ಧಚಂದ್ರವನ್ನೂ ವಾಮಾಕ್ಷಿಯೆಂದು ಹೆಸರುಳ್ಳ ಈಕಾರವನ್ನೂ ಸೇರಿಸಿದಾಗ ಉಂಟಾಗುವ (ಕ್ರೀಂ ಎಂಬ) ಈ ನಿನ್ನ ಬೀಜಾಕ್ಷರವನ್ನು ಯಾರು ಮೂರು ಸಲ ಜಪಿಸುವರೊ (ಇದರಿಂದಲೇ) ಎಲ್ಲ ಸಿದ್ಧಿಗಳನ್ನೂ ಪಡೆದ ಅವರ ಬಾಯೆಂಬ ಗುಹೆಯಿಂದ-ನೀಲ ಮೇಘದ ಕಾಂತಿಯಿಂದ ಕೂಡಿ ಸುಂದರಳಾದವಳೇ - ಗದ್ಯರೂಪವಾದ ಮತ್ತು ಪದ್ಯರೂಪವಾದ ವಾಕ್ಕುಗಳು ಪ್ರವಹಿಸುತ್ತವೆ.

೨. ಹೇ ಮಹೇಶಶಕ್ತಿ, ಮಂದಬುದ್ಧಿಯಾದವನೂ ಕೂಡ ಒಂದು ವೇಳೆ ಚಂದ್ರಬಿಂದುಯುಕ್ತವಾದ ಊಕಾರದಿಂದ ಕೂಡಿದ ಹಕಾರವೆಂಬ ಮತ್ತೊಂದು ಬೀಜಾಕ್ಷರವನ್ನು (ಎಂದರೆ ಹೂಂ ಎಂಬ ಮಂತ್ರವನ್ನು) ದ್ವಂದ್ವಮಾಡಿ ('ಹೂಂಹೂಂ' ಎಂದು) ಒಂದೇಸಲವಾದರೂ ಜಪಿಸಿದರೆ ಆಗ ವಾಗಧೀಶನಾದ ಬೃಹಸ್ಪತಿಯನ್ನೂ, ಧನದಾನಿಯಾದ ಕುಬೇರನನ್ನೂ ಗೆದ್ದು, ಕಮಲನಯನರಾದ ಯುವತಿಯರ ಸಮೂಹವನ್ನೇ - ಹೇ ಅರ್ಧ ಚಂದ್ರಧಾರಿ, ಮಹಾಘೋರವಾದ ಬಾಣಗಳನ್ನು ಕರ್ಣಕುಂಡಲಗಳನ್ನಾಗಿ ಮಾಡಿಕೊಂಡಿರುವವಳೇ - ಮೋಹಗೊಳಿಸಲು ಸಮರ್ಥನಾಗುತ್ತಾನೆ.

೩. ಕೂದಲನ್ನು ಕೆದರಿಕೊಂಡಿರುವ ಮತ್ತು ತುಟಿಗಳ ತುದಿಯಲ್ಲಿ ರಕ್ತಧಾರೆಯಿಂದ ಶೋಭಿತಳಾದ ಕಾಳಿಕಾದೇವಿಯೇ, ವೈಶ್ವಾನರದಲ್ಲಿರುವ (ಎಂದರೆ ರ-ಕಾರಯುಕ್ತವಾದ) ಚಂದ್ರಬಿಂದುವಿನೊಡನೆ ಸೇರಿದ, ವಾಮ ನೇತ್ರವೆಂದು ಹೆಸರುಳ್ಳ ಈಕಾರಸಹಿತವಾದ ಈಶಸಂಜ್ಞೆಯುಳ್ಳ (ಹಕಾರವು) - ಎಂದರೆ 'ಹ್ರೀಂ' ಎಂಬುದು - ನಿನ್ನ ಬೀಜಾಕ್ಷರವು. ಯಾರು ಇದರ ದ್ವಂದ್ವವನ್ನು (ಹ್ರೀಂಹ್ರೀಂ) ಜಪಿಸುತ್ತಾರೋ ಮತ್ತು ಮೂರಕ್ಷರವುಳ್ಳ ದಕ್ಷಿಣಾ ಎಂಬ ಹೆಸರಿನವಳೇ (ಎಂದು ಜಪಿಸುತ್ತಾರೊ) ಅವರು ಶತ್ರುಗಳನ್ನು ನಾಶ ಮಾಡುತ್ತಾರೆ ಮತ್ತು ಮೂರು ಲೋಕಗಳನ್ನು ವಶಪಡಿಸಿಕೊಳ್ಳುತ್ತಾರೆ.

ಊರ್ಧ್ವೇ ವಾಮೇ ಕೃಪಾಣಂ ಕರಕಮಲತಲೇ ಛಿನ್ನಮುಂಡಂ ತಥಾಽಧಃ
ಸವ್ಯೇ ಚಾಭೀರ್ವರಂ ಚ ತ್ರಿಜಗದಘಹರೇ ದಕ್ಷಿಣೇ ಕಾಲಿಕೇ ಚ ।
ಜಪ್ತ್ವೈತನ್ನಾಮ ಯೇ ವಾ ತವ ಮನುವಿಭವಂ ಭಾವಯಂತ್ಯೇತದಂಬ
ತೇಷಾಮಷ್ಟೌ ಕರಸ್ಥಾಃ ಪ್ರಕಟಿತರದನೇ ಸಿದ್ಧಯಸ್ತ್ರ್ಯಂಬಕಸ್ಯ ॥ ೪ ॥

ವರ್ಗಾದ್ಯಂ ವಹ್ನಿಸಂಸ್ಥಂ ವಿಧುರತಿಲಲಿತಂ ತತ್ತ್ರಯಂ ಕೂರ್ಚಯುಗ್ಮಂ
ಲಜ್ಜಾದ್ವಂದ್ವಂ ಚ ಪಶ್ಚಾತ್ ಸ್ಮಿತಮುಖಿ ತದಧಷ್ಠದ್ವಯಂ ಯೋಜಯಿತ್ವಾ।
ಮಾತರ್ಯೇ ಯೇ ಜಪಂತಿ ಸ್ಮರಹರಮಹಿಲೇ ಭಾವಯಂತಸ್ಸ್ವರೂಪಂ
ತೇ ಲಕ್ಷ್ಮೀಲಾಸ್ಯಲೀಲಾಕಮಲದಲದೃಶಃ ಕಾಮರೂಪಾ ಭವಂತಿ ॥ ೫ ॥

ಪ್ರತ್ಯೇಕಂ ವಾ ದ್ವಯಂ ವಾ ತ್ರಯಮಪಿ ಚ ಪರಂ ಬೀಜಮತ್ಯಂತಗುಹ್ಯಂ
ತ್ವನ್ನಾಮ್ನಾ ಯೋಜಯಿತ್ವಾ ಸಕಲಮಪಿ ಸದಾ ಭಾವಯಂತೋ ಜಪಂತಿ।
ತೇಷಾಂ ನೇತ್ರಾರವಿಂದೇ ವಿಹರತಿ ಕಮಲಾ ವಕ್ತ್ರಶುಭ್ರಾಂಶುಬಿಂಬೇ
ವಾಗ್ದೇವೀ ದೇವಿ ಮುಂಡಸ್ರಗತಿಶಯಲಸತ್ಕಂಠಿ ಪೀನಸ್ತನಾಢ್ಯೇ ॥ ೬ ॥

ವದಾಮಸ್ತೇ ಕಿಂ ವಾ ಜನನಿ ವಯಮುಚ್ಚೈರ್ಜಡಧಿಯೋ
ನ ಧಾತಾ ನಾಪೀಶೋ ಹರಿರಪಿ ನ ತೇ ವೇತ್ತಿ ಪರಮಮ್ ।
ತಥಾಽಪಿ ತ್ವದ್ಭಕ್ತಿರ್ಮುಖರಯತಿ ಚಾಸ್ಮಾಕಮಮಿತೇ
ತದೇತತ್ ಕ್ಷಂತವ್ಯಂ ನ ಖಲು ಪಶುರೋಷಃ ಸಮುಚಿತಃ ॥ ೭ ॥

೪. ಮೂರು ಲೋಕಗಳ ಪಾಪವನ್ನು ನಾಶಪಡಿಸುವವಳೇ, ಪ್ರಕಟಿತವಾದ ದಶನಪಂಕ್ತಿಯುಳ್ಳ ತಾಯೇ, ದಕ್ಷಿಣಕಾಳಿಯೇ, ಎಡಮೇಲ್ಗೈಯಲ್ಲಿ ಕತ್ತಿಯನ್ನೂ, ಎಡದ ಕೆಳಗೈಯಲ್ಲಿ ಛಿನ್ನಮಸ್ತಕವನ್ನೂ, ಬಲಗೈಗಳಲ್ಲಿ ಅಭಯಮುದ್ರೆಗಳನ್ನೂ ಧರಿಸಿರುವ ನಿನ್ನ ರೂಪವನ್ನು ಮತ್ತು (ಹ್ರೀಂಕಾರಾದಿ) ನಿನ್ನ ಮಂತ್ರವೈಭವವನ್ನು ಯಾರು ಚಿಂತಿಸುತ್ತಾರೋ, (ದಕ್ಷಿಣಕಾಳಿಯೆಂಬ) ಈ ಹೆಸರನ್ನು ಜಪಿಸುತ್ತಾರೋ, ಅವರಿಗೆ ಈಶ್ವರನ (ಅಣಿಮಾದಿ) ಅಷ್ಟಸಿದ್ಧಿಗಳು ಕರಗತವಾಗುತ್ತವೆ.

೫. ಮಂದಹಾಸಯುಕ್ತಮುಖವುಳ್ಳವಳೇ, ಮದನಾಂತಕ ಮೋಹಿನಿಯೇ, ಮಾತೆಯೇ, ವಹ್ನಿಸ್ಥವಾದ (ಎಂದರೆ ರಕಾರದ ಮೇಲಿರುವ) ಚಂದ್ರಬಿಂದುವಿನಿಂದಲೂ, ದೀರ್ಘ-ಈ-ಕಾರದಿಂದಲೂ ಕೂಡಿರುವ ಪಂಚ ವರ್ಗಗಳ ಪ್ರಥಮಾಕ್ಷರವನ್ನು (ಎಂದರೆ ಕ್ರೀಂಕಾರವನ್ನು) ಮೂರು ಬಾರಿ, ಕೂರ್ಚವೆಂಬ ಹೆಸರಿನ ಹೂಂಕಾರವನ್ನು ಎರಡು ಬಾರಿ, ಲಜ್ಜಾ ಎಂಬ ಹೆಸರಿನ ಹ್ರೀಂಕಾರವನ್ನು ಎರಡು ಸಲ, ಇದಾದನಂತರ ದ್ವಯವೆಂಬ ಸಂಜ್ಞೆಯುಳ್ಳ ಸ್ವಾಹಾ-ಶಬ್ದವನ್ನು ಸೇರಿಸಿ, ಯಾರು ಜಪಿಸುತ್ತಾರೋ ಮತ್ತು ನಿನ್ನ ಸ್ವರೂಪವನ್ನು ಯಾರು ಧ್ಯಾನಿಸುತ್ತಾರೋ ಅವರು ಲಾಸ್ಯವಾಡುತ್ತಿರುವ ಲಕ್ಷ್ಮಿಯ ಕಮಲದಳಗಳಂತೆ ದೃಷ್ಟಿಯನ್ನು ಹೊಂದಿ ಕಾಮದೇವನಿಗೆ ಸದೃಶವಾದ ರೂಪವನ್ನು ಪಡೆಯುತ್ತಾರೆ.

೬. ಹೇ ದೇವಿ, ಪೀನಪಯೋಧರಿ, ಕಂಠದಲ್ಲಿ ಮುಂಡಹಾರವನ್ನು ಧರಿಸಿ ಅತಿಶಯವಾಗಿ ಶೋಭಿಸುತ್ತಿರುವವಳೇ, ಅತ್ಯಂತ ಗುಪ್ತವಾದ (ಹಿಂದೆ ಹೇಳಿದ ಕ್ರೀಂಕಾರಾದಿ) ಬೀಜಾಕ್ಷರಗಳನ್ನು ಒಂದೊಂದು ಬಾರಿ ಎರಡೆರಡು ಬಾರಿ ಅಥವಾ ಮೂರುಮೂರು ಬಾರಿ ನಿನ್ನ (ದಕ್ಷಿಣಕಾಳಿಯೆಂಬ) ಹೆಸರಿನೊಡನೆ ಸೇರಿಸಿ ಸಕಲವನ್ನೂ ಯಾವಾಗಲೂ ಚಿಂತಿಸುತ್ತ ಜಪಿಸುತ್ತಾರೋ ಅವರ ನಯನಕಮಲಗಳಲ್ಲಿ ಲಕ್ಷ್ಮಿಯು ವಿಹರಿಸುತ್ತಾಳೆ ಮತ್ತು ಚಂದ್ರವದನದಲ್ಲಿ ವಾಗ್ದೇವಿಯು (ವಿಹರಿಸುತ್ತಾಳೆ).

೭. ಹೇ ಅಮಿತೇ, ನಿನ್ನ ಯಥಾರ್ಥ ತತ್ತ್ವವನ್ನು ಬ್ರಹ್ಮನಾಗಲಿ, ಈಶ್ವರನಾಗಲಿ, ವಿಷ್ಣುವಾಗಲಿ ಅರಿಯರೆಂದಮೇಲೆ ಅತ್ಯಂತವಾಗಿ ಮಂದಬುದ್ಧಿಗಳಾಗಿರುವ ನಾವು ಹೇಗೆ ತಾನೆ (ಅದನ್ನು) ಬಣ್ಣಿಸಬಲ್ಲೆವು? ಹಾಗಿದ್ದರೂ ನಿನ್ನಲ್ಲಿ ನಮಗಿರುವ ಭಕ್ತಿಯು ನಮ್ಮನ್ನು (ನಿನ್ನ ಸ್ತುತಿ ಕರ್ತವ್ಯದಲ್ಲಿ) ಪ್ರೇರಿಸುತ್ತಿದೆ. ಈ ಅಪರಾಧವನ್ನು ಕ್ಷಮಿಸಬೇಕು. ಅಜ್ಞಾನಿಗಳಾದ ನಮ್ಮ ವಿಷಯದಲ್ಲಿ ನಿನ್ನ ರೋಷವು ಉಚಿತವಲ್ಲ!

ಪ್ರಸೂತೇ ಸಂಸಾರಂ ಜನನಿ ಭವತೀ ಪಾಲಯತಿ ಚ
ಸಮಸ್ತಂ ಕ್ಷಿತ್ಯಾದಿ ಪ್ರಲಯಸಮಯೇ ಸಂಹರತಿ ಚ ।
ಅತಸ್ತ್ವಂ ಧಾತಾಽಸಿ ತ್ರಿಭುವನಪತಿಃ ಶ್ರೀಪತಿರಪಿ
ಮಹೇಶೋಽಪಿ ಪ್ರಾಯಸ್ಸಕಲಮಪಿ ಕಿಂ ಸ್ತೌಮಿ ಭವತೀಮ್ ॥ ೮ ॥

ಅನೇಕೇ ಸೇವಂತೇ ಭವದಧಿಕಗೀರ್ವಾಣನಿವಹಾನ್
ವಿಮೂಢಾಸ್ತೇ ಮಾತಃ ಕಿಮಪಿ ನ ಹಿ ಜಾನಂತಿ ಪರಮಮ್ ।
ಸಮಾರಾಧ್ಯಾಮಾದ್ಯಾಂ ಹರಿಹರವಿರಿಂಚಾದಿವಿಬುಧೈಃ
ಪ್ರಪನ್ನೋಽಸ್ಮಿ ಸ್ವೈರಂ ರತಿರಸಮಹಾನಂದನಿರತಾಮ್ ॥ ೯ ॥

ಧರಿತ್ರೀ ಕೀಲಾಲಂ ಶುಚಿರಪಿ ಸಮೀರೋಽಪಿ ಗಗನಂ
ತ್ವಮೇಕಾ ಕಲ್ಯಾಣೀ ಗಿರಿಶರಮಣೀ ಕಾಲಿ ಸಕಲಮ್ ।
ಸ್ತುತಿಃ ಕಾ ತೇ ಮಾತರ್ನಿಜಕರುಣಯಾ ಮಾಮಗತಿಕಂ
ಪ್ರಸನ್ನಾ ತ್ವಂ ಭೂಯಾ ಭವಮನು ನ ಭೂಯಾನ್ಮಮ ಜನುಃ ॥ ೧೦ ॥

ಇದಂ ಸ್ತೋತ್ರಂ ಮಾತಸ್ತವ ಮನುಸಮುದ್ಧಾರಣಜನುಃ
ಸ್ವರೂಪಾಖ್ಯಂ ಪಾದಾಂಬುಜಯುಗಲಪೂಜಾವಿಧಿಯುತಮ್ ।
ನಿಶಾರ್ಧಂ ವಾ ಪೂಜಾಸಮಯಮಧಿ ವಾ ಯಸ್ತು ಪಠತಿ
ಪ್ರಲಾಪಸ್ತಸ್ಯಾಪಿ ಪ್ರಸರತಿ ಕವಿತ್ವಾಮೃತರಸಃ ॥ ೧೧ ॥

ಕುರಂಗಾಕ್ಷೀವೃಂದಂ ತಮನುಸರತಿ ಪ್ರೇಮತರಲಂ
ವಶಸ್ತಸ್ಯ ಕ್ಷೋಣೀಪತಿರಪಿ ಕುಬೇರಪ್ರತಿನಿಧಿಃ ।
ರಿಪುಃ ಕಾರಾಗಾರಂ ಕಲಯತಿ ಚ ತಂ ಕೇಲಿಕಲಯಾ
ಚಿರಂ ಜೀವನ್ಮುಕ್ತಃ ಪ್ರಭವತಿ ಸ ಭಕ್ತಃ ಪ್ರತಿಜನುಃ ॥ ೧೨ ॥

॥ ಇತಿ ಕರ್ಪೂರಾದಿ ಸ್ತೋತ್ರಮ್ ಸಂಪೂರ್ಣಮ್ ॥

೮. ಹೇ ತಾಯೇ, ನೀನು ಈ ಜಗತ್ತನ್ನು ಹುಟ್ಟಿಸುತ್ತೀಯೆ ಮತ್ತು ಕಾಪಾಡುತ್ತೀಯೆ; ಹಾಗೆಯೇ ಭೂಮಿಯೇ ಮೊದಲಾದ ಇದೆಲ್ಲವನ್ನೂ ಪ್ರಳಯಕಾಲದಲ್ಲಿ ಸಂಹಾರಮಾಡುತ್ತೀಯೆ. ಆದುದರಿಂದ ನೀನು ಬ್ರಹ್ಮ; (ನೀನು) ಮೂರು ಲೋಕಗಳಿಗೂ ಒಡೆಯನಾದ ಶ್ರೀಪತಿ; (ನೀನು) ಮಹೇಶನೂ ಕೂಡ ಹೌದು. ಬಹುಶಃ ನೀನೇ ಎಲ್ಲವೂ ಆಗಿದ್ದೀಯೆ. ಇಂಥ ನಿನ್ನನ್ನು ಹೇಗೆ ಸ್ತುತಿಸಲಿ?

೯. ಹೇ ಮಾತೆ, ಅನೇಕರು ನಿನಗಿಂತ ಬೇರೆಯಾದ ದೇವತಾಗಣಗಳನ್ನು ಸೇವಿಸುತ್ತಿರುವರು. ಅವರು ಪರಮತತ್ತ್ವವನ್ನು ಸ್ವಲ್ಪವೂ ಅರಿಯದ ವಿಮೂಢರು. ಹರಿ-ಹರ-ಬ್ರಹ್ಮಾದಿ ದೇವತೆಗಳಿಂದ ಆರಾಧಿಸಲ್ಪಡುತ್ತಿರುವ ಜಗದಾದಿ ಕಾರಣಳಾದ ಮತ್ತು ಅತ್ಯಂತವಾಗಿ (ಮಹಾಕಾಲನೊಡನೆ) ರತಿಕ್ರೀಡೆ-ಮದ್ಯಪಾನಾನಂದಗಳಲ್ಲಿ ನಿರತಳಾಗಿರುವ ನಿನ್ನನ್ನು ಶರಣು ಹೊಂದುತ್ತೇನೆ.

೧೦. ಹೇ ಕಾಳೀ, ನೀನೇ ಭೂಮಿ, ನೀರು, ಅಗ್ನಿ, ವಾಯು ಮತ್ತು ಆಕಾಶ; ನೀನು ಅದ್ವಿತೀಯಳು, ಮಂಗಳದಾತೆಯು. ಹೇ ಶಿವಾನಿ, ನೀನೇ ಸಕಲವೂ ಆಗಿರುತ್ತೀಯೆ. ಎಲೆ ತಾಯಿ! ನಿನ್ನನ್ನು ಹೇಗೆ ತಾನೇ ಸ್ತುತಿಸಬಹುದು? ನಿನ್ನ ಅಸಾಧಾರಣ ಕೃಪೆಯಿಂದ ಗತಿಹೀನನಾದ ನನ್ನ ಮೇಲೆ ಈ ಸಂಸಾರದಲ್ಲಿಯೇ ಪ್ರಸನ್ನಳಾಗು! ನನಗೆ ಜನ್ಮವುಂಟಾಗದಿರಲಿ!

೧೧. ಹೇ ತಾಯಿ, ಈ ಸ್ತೋತ್ರವು ನಿನ್ನ ಮಂತ್ರೋದ್ಧಾರಣಗಳಿಗೆ ಜನ್ಮಸ್ಥಾನವು. ನಿನ್ನ ಸ್ವರೂಪದ ಕಥನವನ್ನು ಇದು ಒಳಗೊಂಡಿದೆ. ಹಾಗೆಯೇ ನಿನ್ನ ಪಾದಪದ್ಮಗಳ ಪೂಜಾವಿಧಿಯಿಂದಲೂ ಕೂಡಿದೆ. ಯಾವನು ಇದನ್ನು ಅರ್ಧರಾತ್ರಿಯಲ್ಲಾಗಲಿ, ಪೂಜಾಸಮಯದಲ್ಲಾಗಲಿ ಪಠಿಸುವನೊ ಅವನ ಅರ್ಥಹೀನ ಪ್ರಲಾಪವೂ ಕೂಡ ಕವಿತ್ವಾಮೃತರಸಪೂರ್ಣವಾಗಿಯೇ ಹೊರಬೀಳುತ್ತದೆ!

೧೨. ಜಿಂಕೆಯ ಕಣ್ಣುಗಳಿಗೆ ಸಮಾನವಾದ ಕಣ್ಣುಳ್ಳ ರಮಣಿಯರ ಬೃಂದವು ಅನುರಾಗಯುಕ್ತನಾದ ಅವನನ್ನು ಅನುಸರಿಸುತ್ತದೆ.ರಾಜನೂ ಕೂಡ ಅವನಿಗೆ ವಶನಾಗುತ್ತಾನೆ. (ಅವನು) ಕುಬೇರನ ಪ್ರತಿನಿಧಿಯೇ(ಆಗುತ್ತಾನೆ). ಇವನ ಶತ್ರುವು ಇವನನ್ನು ಕಂಡರೆ ಕಾರಾಗೃಹದಂತೆ ಭಾವಿಸಿ ಹೆದರುವನು. ಮತ್ತು (ಈ ನಿನ್ನ ಭಕ್ತನು) ಜೀವನವನ್ನು ಬಹುಕಾಲ ಆಟದಂತೆ ಅನಾಯಾಸವಾಗಿ ಮುಗಿಸಿ ಸತ್ತಮೇಲೆ ಮುಕ್ತನಾಗಿ ಪುನರ್ಜನ್ಮವನ್ನು ಹೊಂದುವುದಿಲ್ಲ.

ಹೀಗೆ ಕರ್ಪೂರಾದಿ ಸ್ತೋತ್ರವು ಮುಗಿಯಿತು.

# ಕಲ್ಯಾಣವೃಷ್ಟಿಸ್ತವಃ

ಕಲ್ಯಾಣವೃಷ್ಟಿಭಿರಿವಾಮೃತಪೂರಿತಾಭಿ-
ರ್ಲಕ್ಷ್ಮೀಸ್ವಯಂವರಣಮಂಗಲದೀಪಿಕಾಭಿಃ ।
ಸೇವಾಭಿರಂಬ ತವ ಪಾದಸರೋಜಮೂಲೇ
ನಾಕಾರಿ ಕಿಂ ಮನಸಿ ಭಾಗ್ಯವತಾಂ ಜನಾನಾಮ್ ॥ ೧ ॥

ಏತಾವದೇವ ಜನನಿ ಸ್ಪೃಹಣೀಯಮಾಸ್ತೇ
ತ್ವದ್ವಂದನೇಷು ಸಲಿಲಸ್ಥಗಿತೇ ಚ ನೇತ್ರೇ ।
ಸಾನ್ನಿಧ್ಯಮುದ್ಯದರುಣಾಯುತಸೋದರಸ್ಯ
ತ್ವದ್ವಿಗ್ರಹಸ್ಯ ಪರಯಾ ಸುಧಯಾ ಪ್ಲುತಸ್ಯ ॥ ೨ ॥

ಈಶತ್ವನಾಮಕಲುಷಾಃ ಕತಿ ವಾ ನ ಸಂತಿ
ಬ್ರಹ್ಮಾದಯಃ ಪ್ರತಿಭವಂ ಪ್ರಲಯಾಭಿಭೂತಾಃ ।
ಏಕಸ್ಸ ಏವ ಜನನಿ ಸ್ಥಿರಸಿದ್ಧಿರಾಸ್ತೇ
ಯಃ ಪಾದಯೋಸ್ತವ ಸಕೃತ್ ಪ್ರಣತಿಂ ಕರೋತಿ ॥ ೩ ॥

ಲಬ್ಧ್ವಾ ಸಕೃತ್ ತ್ರಿಪುರಸುಂದರಿ ತಾವಕೀನಂ
ಕಾರುಣ್ಯಕಂದಲಿತಕಾಂತಿಭರಂ ಕಟಾಕ್ಷಮ್ ।
ಕಂದರ್ಪಕೋಟಿಸುಭಗಾಸ್ತ್ವಯಿ ಭಕ್ತಿಭಾಜಃ
ಸಂಮೋಹಯಂತಿ ತರುಣೀರ್ಭುವನತ್ರಯೇಽಪಿ ॥ ೪ ॥

ಹ್ರೀಂಕಾರಮೇವ ತವ ನಾಮ ಗೃಣಂತಿ ವೇದಾ
ಮಾತಸ್ತ್ರಿಕೋಣನಿಲಯೇ ತ್ರಿಪುರೇ ತ್ರಿನೇತ್ರೇ ।
ತ್ವತ್ಸಂಸ್ಮೃತೌ ಯಮಭಟಾಭಿಭವಂ ವಿಹಾಯ
ದೀವ್ಯಂತಿ ನಂದನವನೇ ಸಹಲೋಕಪಾಲೈಃ ॥ ೫ ॥

# ಕಲ್ಯಾಣವೃಷ್ಟಿಸ್ತವ

೧. ಹೇ ತಾಯೇ, ಭಾಗ್ಯವಂತರಾದ ಜನರ ಮನಸ್ಸಿನಲ್ಲಿ ಅಮೃತದಿಂದ ಮಂಗಳವೃಷ್ಟಿಗಳ ರೂಪದ, ಲಕ್ಷ್ಮೀಸ್ವಯಂವರದಲ್ಲಿ ಉಪಯೋಗಿಸಿದ ಮಂಗಳ ದೀಪಗಳ ರೂಪದ, ಸೇವೆಗಳು ನಿನ್ನ ಪಾದಕಮಲದ ಬಳಿ ಮಾಡಲ್ಪಡಲಿಲ್ಲವೇ?

೨. ಹೇ ಜನನೀ, (ನಾನು) ಇಷ್ಟನ್ನು ಮಾತ್ರ ಆಶಿಸುತ್ತೇನೆ! ನಿನ್ನನ್ನು ವಂದಿಸುತ್ತಿರುವಾಗ ನನ್ನ ಕಣ್ಣುಗಳು ಕಣ್ಣೀರಿನಿಂದ ಆವೃತವಾಗಿರಲು, ಉದಯಿಸುತ್ತಿರುವ ಸೂರ್ಯನ ಪ್ರಭೆಯ ದಶಸಹಸ್ರದಷ್ಟು ಪ್ರಭೆಯನ್ನುಳ್ಳ ಮತ್ತು ಅತ್ಯಂತವಾದ ಅಮೃತದಲ್ಲಿ ತೋಯ್ದಿರುವ ನಿನ್ನ ದಿವ್ಯಮಂಗಳ ವಿಗ್ರಹದ ಸಾನ್ನಿಧ್ಯವು (ನನಗುಂಟಾಗಬೇಕು).

೩. (ಸಾಮಾನ್ಯವಾದ) ಈಶ್ವರತ್ವವನ್ನು ಹೊಂದಿ ಕಲುಷಿತರಾದ, ಪ್ರತಿಯೊಂದು ಸೃಷ್ಟಿಯಲ್ಲಿಯೂ ಹುಟ್ಟಿ ಪ್ರಲಯಾಭಿಮುಖರಾಗಿ ಹೋಗುತ್ತಿರುವ, ಬ್ರಹ್ಮನೇ ಮೊದಲಾದವರು ಎಷ್ಟು ಮಂದಿಯಿಲ್ಲ? ಆದರೆ ಹೇ ಮಾತೆ, ಯಾವನು ನಿನ್ನ ಪಾದಯುಗ್ಮದಲ್ಲಿ ಒಂದೇ ಒಂದು ಸಲ ಪ್ರಣಾಮವನ್ನು ಮಾಡಿರುವನೋ ಅವನೊಬ್ಬನೇ ಸ್ಥಿರವಾದ ಸಿದ್ಧಿಯನ್ನು ಪಡೆದವನು!

೪. ಹೇ ತ್ರಿಪುರಸುಂದರಿ! ನಿನ್ನಲ್ಲಿ ಭಕ್ತಿಯನ್ನು ಹೊಂದಿರುವವರು ಕಾರುಣ್ಯವೆಂಬ ಮೊಗ್ಗಿನ ಕಾಂತಿಯಿಂದ ತುಂಬಿದ ನಿನ್ನ ಕಟಾಕ್ಷವನ್ನು ಒಂದೇ ಸಲ ಹೊಂದಿ ಕೋಟಿಮನ್ಮಥರ ಸೌಭಾಗ್ಯವನ್ನು ಪಡೆದವರಾಗಿ ಮೂರೂ ಲೋಕದ ತರುಣಿಯರನ್ನೂ ಮೋಹಗೊಳಿಸುವರು.

೫. ಹೇ ಮಾತೆ, ತ್ರಿಕೋಣದಲ್ಲಿ ನೆಲಸಿರುವವಳೇ, ತ್ರಿಪುರೇ, ತ್ರಿನೇತ್ರೇ, ವೇದಗಳು ಹ್ರೀಂಕಾರವನ್ನೇ ನಿನ್ನ ಹೆಸರಾಗಿ ಹೇಳುತ್ತವೆ. (ಮರಣ ಕಾಲದಲ್ಲಿ) ನಿನ್ನ ಸ್ಮರಣೆಯುಂಟಾದರೆ (ಆ ಭಕ್ತರು) ಯಮಭಟರಿಂದ ಸೋಲನ್ನೊಪ್ಪುವುದನ್ನು ತ್ಯಜಿಸಿ, ನಂದನವನದಲ್ಲಿ ಲೋಕಪಾಲಕರೊಡನೆ ಕ್ರೀಡಿಸುತ್ತಾರೆ.

ಹಂತುಃ ಪುರಾಮಧಿಗಲಂ ಪರಿಪೀಯಮಾನಃ
ಕ್ರೂರಃ ಕಥಂ ನ ಭವಿತಾ ಗರಲಸ್ಯ ವೇಗಃ ।
ನಾಶ್ವಾಸನಾಯ ಯದಿ ಮಾತರಿದಂ ತವಾರ್ಧಂ
ದೇಹಸ್ಯ ಶಶ್ವದಮೃತಾಪ್ಲುತಶೀತಲಸ್ಯ ॥ ೬ ॥

ಸರ್ವಜ್ಞತಾಂ ಸದಸಿ ವಾಕ್ಪಟುತಾಂ ಪ್ರಸೂತೇ
ದೇವಿ ತ್ವದಂಘ್ರಿಸರಸೀರುಹಯೋಃ ಪ್ರಣಾಮಃ ।
ಕಿಂ ಚ ಸ್ಫುರನ್ಮಕುಟಮುಜ್ಜ್ವಲಮಾತಪತ್ರಂ
ದ್ವೇ ಚಾಮರೇ ಚ ಮಹತೀಂ ವಸುಧಾಂ ದದಾತಿ ॥ ೭ ॥

ಕಲ್ಪದ್ರುಮೈರಭಿಮತಪ್ರತಿಪಾದನೇಷು
ಕಾರುಣ್ಯವಾರಿಧಿಭಿರಂಬ ಭವತ್ಕಟಾಕ್ಷೈಃ ।
ಆಲೋಕಯ ತ್ರಿಪುರಸುಂದರಿ ಮಾಮನಾಥಂ
ತ್ವಯ್ಯೇವ ಭಕ್ತಿಭರಿತಂ ತ್ವಯಿ ಬದ್ಧತೃಷ್ಣಮ್ ॥ ೮ ॥

ಹಂತೇತರೇಷ್ವಪಿ ಮನಾಂಸಿ ನಿಧಾಯ ಚಾನ್ಯೇ
ಭಕ್ತಿಂ ವಹಂತಿ ಕಿಲ ಪಾಮರದೈವತೇಷು ।
ತ್ವಾಮೇವ ದೇವಿ ಮನಸಾ ಸಮನುಸ್ಮರಾಮಿ
ತ್ವಾಮೇವ ನೌಮಿ ಶರಣಂ ಜನನಿ ತ್ವಮೇವ ॥ ೯ ॥

ಲಕ್ಷ್ಯೇಷು ಸತ್ಸ್ವಪಿ ಕಟಾಕ್ಷನಿರೀಕ್ಷಣಾನಾ-
ಮಾಲೋಕಯ ತ್ರಿಪುರಸುಂದರಿ ಮಾಂ ಕದಾಚಿತ್ ।
ನೂನಂ ಮಯಾ ತು ಸದೃಶಃ ಕರುಣೈಕಪಾತ್ರಂ
ಜಾತೋ ಜನಿಷ್ಯತಿ ಜನೋ ನ ಚ ಜಾಯತೇ ವಾ ॥ ೧೦ ॥

ಹ್ರೀಂ ಹ್ರೀಮಿತಿ ಪ್ರತಿದಿನಂ ಜಪತಾಂ ತವಾಖ್ಯಾಂ
ಕಿಂ ನಾಮ ದುರ್ಲಭಮಿಹ ತ್ರಿಪುರಾಧಿವಾಸೇ ।
ಮಾಲಾಕಿರೀಟಮದವಾರಣಮಾನನೀಯಾ
ತಾನ್ಸೇವತೇ ವಸುಮತೀ ಸ್ವಯಮೇವ ಲಕ್ಷ್ಮೀಃ ॥ ೧೧ ॥

೬. ಹೇ ಮಾತೆ, ಸದಾ ಅಮೃತದಿಂದ ನೆನೆದು ಶೀತವಾಗಿರುವ ಈ ನಿನ್ನ ಅರ್ಧದೇಹದ ಆಶ್ವಾಸನೆಯಿಲ್ಲದಿದ್ದರೆ ತ್ರಿಪುರಹರನು ಗಂಟಲಿನಲ್ಲಿ ಕುಡಿಯುತ್ತಿದ್ದ ವಿಷದ ವೇಗವು ಹೇಗೆ ತಾನೇ ಕ್ರೂರವಾಗುತ್ತಿರಲಿಲ್ಲ?

೭. ಹೇ ದೇವಿ, ನಿನ್ನ ಪಾದಪದ್ಮಗಳಲ್ಲಿ ಮಾಡುವ ಪ್ರಣಾಮವು, ಸಭೆಯಲ್ಲಿ ಸರ್ವಜ್ಞತ್ವ ಮತ್ತು ವಾಕ್ಪಟುತ್ವ - ಇವುಗಳನ್ನುಂಟುಮಾಡುತ್ತದೆ. ಅಷ್ಟೇ ಅಲ್ಲ, ಕಾಂತಿಯುಕ್ತವಾದ ಕಿರೀಟ, ಛತ್ರಿ, ಎರಡು ಚಾಮರಗಳು ಮತ್ತು ವಿಸ್ತಾರವಾದ ರಾಜ್ಯ - ಇವನ್ನೂ ಕೊಡುತ್ತದೆ.

೮. ಹೇ ತಾಯೇ, ಹೇ ತ್ರಿಪುರಸುಂದರಿ, ನಿನ್ನಲ್ಲಿಯೇ ಭಕ್ತಿಯಿಂದ ತುಂಬಿದವನೂ, ನಿನ್ನಲ್ಲಿಯೇ ಸಂಬದ್ಧವಾದ ಆಶೆಗಳುಳ್ಳವನೂ, ಅನಾಥನೂ ಆದ ನನ್ನನ್ನು, ಅಭಿಲಾಷವಿತರಣೆಯಲ್ಲಿ ಕಲ್ಪವೃಕ್ಷಕ್ಕೆ ಸಮವಾದ ಮತ್ತು ಕಾರುಣ್ಯಸಮುದ್ರದಂತಿರುವ ನಿನ್ನ ಕಟಾಕ್ಷಗಳಿಂದ ನೋಡು !

೯. ಇತರ (ಭಕ್ತರು) ಸಾಮಾನ್ಯರಾದ ಅನ್ಯದೇವತೆಗಳಲ್ಲಿ ತಮ್ಮ ಮನಸ್ಸನ್ನಿಟ್ಟು, ಭಕ್ತಿಯನ್ನು ಹೊಂದುವರು. ಹೇ ದೇವಿ, (ನಾನು ಮಾತ್ರ) ನಿನ್ನನ್ನೇ ಮನಸ್ಸಿನಿಂದ ಚೆನ್ನಾಗಿ ಸ್ಮರಿಸುತ್ತೇನೆ. ನಿನ್ನನ್ನೇ ನಮಸ್ಕರಿಸುತ್ತೇನೆ. ಹೇ ತಾಯಿ, ನೀನೇ ನನಗೆ ಶರಣಾಗತಿಸ್ಥಾನ !

೧೦. ನಿನ್ನ ಕಟಾಕ್ಷಗಳು ಬೀಳುವುದಕ್ಕೆ ಯೋಗ್ಯರಾದ ಜನರು ಅನೇಕರಿರ ಬಹುದು. ಆದರೆ, ಹೇ ತ್ರಿಪುರಸುಂದರಿ, ನನ್ನನ್ನೊಮ್ಮೆ ನೋಡು! ಏಕೆಂದರೆ ನಿನ್ನ ಕರುಣೆಗೆ ಏಕಮಾತ್ರಪಾತ್ರನಾದ ನನ್ನಂಥವನು ಖಂಡಿತವಾಗಿ ಹಿಂದೆ ಹುಟ್ಟಿಲ್ಲ, ಈಗ ಹುಟ್ಟಿಲ್ಲ, ಮುಂದೆಯೂ ಹುಟ್ಟನು.

೧೧. ಹೇ ತ್ರಿಪುರಗಳಿಗೆ ಒಡೆಯಳೇ, 'ಹ್ರೀಂ' ಎಂಬ ನಿನ್ನ ಹೆಸರನ್ನು ಪ್ರತಿದಿನವೂ ಜಪಿಸುವವರಿಗೆ ಯಾವುದು ತಾನೇ ದುರ್ಲಭವಾದೀತು? ಕಿರೀಟದಂತೆ ಮಾಲೆಯನ್ನು ಎತ್ತಿಹಿಡಿದಿರುವ ಮದ್ದಾನೆಯು ಯಾವಳನ್ನು ಮಾನಪೂರ್ವಕವಾಗಿ ಕಾಣುವುದೋ ಅಂಥ ಧನನಾಯಿಕೆಯಾದ ಲಕ್ಷ್ಮಿಯೇ ಸ್ವಯಂ ಅವರನ್ನು ಸೇವಿಸುತ್ತಾಳೆ.

ಸಂಪತ್ಕರಾಣಿ ಸಕಲೇಂದ್ರಿಯನಂದನಾನಿ
ಸಾಮ್ರಾಜ್ಯದಾನನಿರತಾನಿ ಸರೋರುಹಾಕ್ಷಿ ।
ತ್ವದ್ವಂದನಾನಿ ದುರಿತಾಹರಣೋದ್ಯತಾನಿ
ಮಾಮೇವ ಮಾತರನಿಶಂ ಕಲಯಂತು ನಾನ್ಯಮ್ ॥ ೧೨ ॥

ಕಲ್ಪೋಪಸಂಹೃತಿಷು ಕಲ್ಪಿತತಾಂಡವಸ್ಯ
ದೇವಸ್ಯ ಖಂಡಪರಶೋಃ ಪರಭೈರವಸ್ಯ ।
ಪಾಶಾಂಕುಶೈಕ್ಷವಶರಾಸನಪುಷ್ಪಬಾಣಾ
ಸಾ ಸಾಕ್ಷಿಣೀ ವಿಜಯತೇ ತವ ಮೂರ್ತಿರೇಕಾ ॥ ೧೩ ॥

ಲಗ್ನಂ ಸದಾ ಭವತು ಮಾತರಿದಂ ತವಾರ್ಧಂ
ತೇಜಃ ಪರಂ ಬಹುಲಕುಂಕುಮಪಂಕಶೋಣಮ್ ।
ಭಾಸ್ವತ್ಕಿರೀಟಮಮೃತಾಂಶುಕಲಾವತಂಸಂ
ಮಧ್ಯೇತ್ರಿಕೋಣನಿಲಯಂ ಪರಮಾಮೃತಾರ್ದ್ರಮ್ ॥ ೧೪ ॥

ಹ್ರೀಂಕಾರಮೇವ ತವ ನಾಮ ತದೇವ ರೂಪಂ
ತ್ವನ್ನಾಮ ದುರ್ಲಭಮಿಹ ತ್ರಿಪುರೇ ಗೃಣಂತಿ ।
ತ್ವತ್ತೇಜಸಾ ಪರಿಣತಂ ವಿಯದಾದಿಭೂತಂ
ಸೌಖ್ಯಂ ತನೋತಿ ಸರಸೀರುಹಸಂಭವಾದೇಃ ॥ ೧೫ ॥

ಹ್ರೀಂಕಾರತ್ರಯಸಂಪುಟೇನ ಮಹತಾ ಮಂತ್ರೇಣ ಸಂದೀಪಿತಂ
ಸ್ತೋತ್ರಂ ಯಃ ಪ್ರತಿವಾಸರಂ ತವ ಪುರೋ
ಮಾತರ್ಜಪೇನ್ಮಂತ್ರವಿತ್ ।
ತಸ್ಯ ಕ್ಷೋಣಿಭುಜೋ ಭವಂತಿ ವಶಗಾ ಲಕ್ಷ್ಮೀಶ್ಚಿರಸ್ಥಾಯಿನೀ
ವಾಣೀ ನಿರ್ಮಲಸೂಕ್ತಿಭಾರಭರಿತಾ ಜಾಗರ್ತಿ
ದೀರ್ಘಂ ವಯಃ ॥ ೧೬ ॥

॥ ಇತಿ ಕಲ್ಯಾಣವೃಷ್ಟಿಸ್ತವಮ್ ಸಂಪೂರ್ಣಮ್ ॥

೧೨. ಹೇ ಕಮಲನಯನೆ, ಹೇ ಮಾತೆ, ಸಂಪತ್ತನ್ನುಂಟುಮಾಡಬಲ್ಲ, ಸಕಲ ಇಂದ್ರಿಯಗಳಿಗೂ ಆನಂದವನ್ನು ಕೊಡಬಲ್ಲ, ಸಾಮ್ರಾಜ್ಯವನ್ನೇ ದಾನ ಮಾಡುವುದರಲ್ಲಿ ನಿರತವಾಗಿರುವ, ಪಾಪಗಳನ್ನು ನಾಶಮಾಡುವುದರಲ್ಲಿ ಉದ್ಯುಕ್ತವಾಗಿರುವ, ನನ್ನಿಂದ ನಿನಗೆ ಮಾಡಲ್ಪಡುವ ವಂದನೆಗಳು ಸದಾ ನನ್ನನ್ನೇ ಸೇರಲಿ, ಇತರರನ್ನಲ್ಲ.

೧೩. ಕಲ್ಪದ ಉಪಸಂಹಾರಕಾಲದಲ್ಲಿ ತಾಂಡವನೃತ್ಯವನ್ನು ಮಾಡು ತ್ತಿರುವ, ಖಂಡಪರಶುಧಾರಿಯೂ ಪ್ರಕಾಶವಂತನೂ ಆದ ಪರಭೈರವನಿಗೆ, ಪಾಶ - ಅಂಕುಶ - ಕಬ್ಬಿನ ಬಿಲ್ಲು - ಹೂವಿನ ಬಾಣಗಳನ್ನು ಧರಿಸಿರುವ ನಿನ್ನ ಮೂರ್ತಿ ಯೊಂದೇ ಸಾಕ್ಷಿಯಾಗಿ ಜಯಿಸುತ್ತಿರುವುದು.

೧೪. ಹೇ ಮಾತೇ, ಅತ್ಯಂತ ತೇಜಸ್ಸುಳ್ಳ, ಕುಂಕುಮದಂತೆ ಬಹುವಾಗಿ ಕೆಂಪಾದ, ಹೊಳೆಯುತ್ತಿರುವ ಕಿರೀಟವನ್ನುಳ್ಳ, ಅಮೃತಕಿರಣಗಳ ಚಂದ್ರನ ಕಲೆಯನ್ನು ಶಿರದಲ್ಲಿ ಧರಿಸಿರುವ, ಪರಮ ಅಮೃತದಿಂದ ನೆನೆದಿರುವ, ಈ ನಿನ್ನ ಅರ್ಧದೇಹವು ತ್ರಿಕೋಣನಿಲಯದಲ್ಲಿ ಸದಾ ನೆಲಸಿರಲಿ.

೧೫. ಹೇ ತ್ರಿಪುರಾಧೀಶ್ವರಿ, ಹ್ರೀಂಕಾರವೇ ನಿನ್ನ ಹೆಸರೆಂದೂ, ಅದೇ ನಿನ್ನ ರೂಪವೆಂದೂ, ಈ ಲೋಕದಲ್ಲಿ ನಿನ್ನ ಹೆಸರು ದುರ್ಲಭವೆಂದೂ ಹೇಳುತ್ತಾರೆ. ಆಕಾಶಾದಿ ಭೂತಗಳೆಲ್ಲವೂ ನಿನ್ನ ತೇಜಸ್ಸಿನಿಂದಲೇ ಪರಿಣಾಮ ವನ್ನು ಹೊಂದಿ ಬ್ರಹ್ಮಾದಿದೇವತೆಗಳಿಗೆ ಸೌಖ್ಯವನ್ನುಂಟು ಮಾಡುತ್ತಿವೆ.

೧೬. ಹೇ ಮಾತೆ, ಮೂರು ಹ್ರೀಂಕಾರಗಳ ಸಂಪುಟದಿಂದ ಕೂಡಿರುವ ಮಹತ್ತಾದ ಮಂತ್ರದಿಂದ ಉದ್ದೀಪಿತವಾದ ಈ ಸ್ತೋತ್ರವನ್ನು ಯಾವನು ಮಂತ್ರವಿದನಾಗಿ ನಿನ್ನ ಮುಂದೆ ಪ್ರತಿದಿನವೂ ಜಪಿಸುವನೋ, ಅವನಿಗೆ ಭೂಪಾಲಕರು ವಶರಾಗುತ್ತಾರೆ, ಲಕ್ಷ್ಮಿಯು ಅವನ ಬಳಿ ಚಿರಕಾಲ ನಿಲ್ಲುತ್ತಾಳೆ, ಸರಸ್ವತಿಯು (ಅವನ ಮಾತು) ನಿರ್ಮಲವಾದ ಸೂಕ್ತಿಗಳ ಭಾರದಿಂದ ತುಂಬಿರುವಂತೆ ಮಾಡುತ್ತಾಳೆ! ಮತ್ತು ಅವನ ಆಯುಸ್ಸು ದೀರ್ಘವಾಗುತ್ತದೆ.

(ಈ ಶ್ಲೋಕಗಳ ಮೊದಲನೆಯ ಅಕ್ಷರಗಳನ್ನು ಸೇರಿಸಿದರೆ - 'ಕಏಈ ಲಹ್ರೀಂ ಹಸಕಹಲಹ್ರೀಂ ಸಕಲಹ್ರೀಂ' ಎಂಬ ಪಂಚದಶಾಕ್ಷರೀ ಮಂತ್ರವು ನಿಷ್ಪನ್ನವಾಗುವುದು. ಆದರೆ ಇದನ್ನು ಸದ್ಗುರುವಿನ ಮೂಲಕ ಪಡೆದೇ ಜಪಿಸಬೇಕು.)

ಹೀಗೆ ಕಲ್ಯಾಣವೃಷ್ಟಿಸ್ತವವು ಮುಗಿಯಿತು.

# ಭವಾನೀಭುಜಂಗಮ್

ಷಡಾಧಾರಪಂಕೇರುಹಾಂತರ್ವಿರಾಜತ್
ಸುಷುಮ್ನಾಂತರಾಲೇಷು ತೇಜೋಲ್ಲಸಂತೀಮ್ ।
ಸುಧಾಮಂಡಲಂ ದ್ರಾವಯಂತೀಂ ಪಿಬಂತೀಂ
ಸುಧಾಮೂರ್ತಿಮೀಡೇ ಮಹಾನಂದರೂಪಾಮ್ ॥ ೧ ॥

ಜ್ವಲತ್ಕೋಟಿಬಾಲಾರ್ಕಭಾಸಾಽರುಣಾಂಗೀಂ
ಸುಲಾವಣ್ಯಶೃಂಗಾರಶೋಭಾಭಿರಾಮಾಮ್ ।
ಮಹಾಪದ್ಮಕಿಂಜಲ್ಕಮಧ್ಯೇ ವಿರಾಜತ್
ತ್ರಿಕೋಣೋಲ್ಲಸಂತೀಂ ಭಜೇ ಶ್ರೀಭವಾನೀಮ್ ॥ ೨ ॥

ಕ್ವಣತ್ಕಿಂಕಿಣೀನೂಪುರೋದ್ಭಾಸಿರತ್ನ-
ಪ್ರಭಾಲೀಢಲಾಕ್ಷಾರ್ದ್ರಪಾದಾರವಿಂದಮ್ ।
ಅಜೇಶಾಚ್ಯುತಾದ್ಯೈಸ್ಸುರೈಸ್ಸೇವ್ಯಮಾನಂ
ಮಹಾದೇವಿ ಮನ್ಮೂರ್ಧ್ನಿ ತೇ ಭಾವಯಾಮಿ ॥ ೩ ॥

ಸುಶೋಣಾಂಬರಾಬದ್ಧನೀವೀವಿರಾಜನ್-
ಮಹಾರತ್ನಕಾಂಚೀಕಲಾಪಂ ನಿತಂಬಮ್ ।
ಸ್ಫುರದ್ದಕ್ಷಿಣಾವರ್ತನಾಭಿಂ ಚ ತಿಸ್ರೋ
ವಲೀರಂಬ ತೇ ರೋಮರಾಜಿಂ ಭಜೇಽಹಮ್ ॥ ೪ ॥

ಲಸದ್ವೃತ್ತಮುತ್ತುಂಗಮಾಣಿಕ್ಯಕುಂಭೋ-
ಪಮಶ್ರೀಸ್ತನದ್ವಂದ್ವಮಂಬಾಂಬುಜಾಕ್ಷಿ ।
ಭಜೇ ದುಗ್ಧಪೂರ್ಣಾಭಿರಾಮಂ ತ್ವದೀಯಂ
ಮಹಾಹಾರದೀಪ್ತಂ ಸದಾ ವಿಸ್ಮಿತಾಸ್ಯೇ ॥ ೫ ॥

# ಭವಾನೀಭುಜಂಗ

೧. ಆಧಾರವಾದ ಷಟ್ಚಕ್ರಪದ್ಮಗಳ ಒಳಗೆ ವಿರಾಜಿಸುತ್ತಿರುವ, ಸುಷುಮ್ನಾನಾಡಿಯಲ್ಲಿ ತೇಜಸ್ಸಿನಿಂದ ಕಂಗೊಳಿಸುತ್ತಿರುವ, ಸುಧಾಮಂಡಲ ವನ್ನು ಹರಿಯಿಸುತ್ತಿರುವ ಮತ್ತು ಕುಡಿಯುತ್ತಿರುವ ಮಹಾ ಆನಂದರೂಪಳೂ ಸುಧೆಯ ಮೂರ್ತಿಯೂ ಆದ (ಭವಾನಿಯನ್ನು) ಸ್ತುತಿಸುತ್ತೇನೆ.

೨. ಪ್ರಕಾಶಿಸುತ್ತಿರುವ ಕೋಟಿ ಬಾಲಸೂರ್ಯರ ಪ್ರಭೆಯಂತಹ ಪ್ರಭೆಯಿಂದ ಕೆಂಪಾದ ಅವಯವಗಳನ್ನುಳ್ಳ, ಲಾವಣ್ಯದ ಮತ್ತು ಸಿಂಗಾರದ ಶೋಭೆಯಿಂದ ಕೂಡಿ ಸುಂದರಳಾಗಿರುವ, (ಯಂತ್ರದ) ಮಹಾಪದ್ಮದ ಮೊಗ್ಗಿನ ಮಧ್ಯದಲ್ಲಿ ವಿರಾಜಿಸುತ್ತಿರುವ, ತ್ರಿಕೋಣದಲ್ಲಿ ಕಂಗೊಳಿಸುತ್ತಿರುವ ಶ್ರೀಭವಾನಿಯನ್ನು ಭಜಿಸುತ್ತೇನೆ.

೩. ಹೇ ಮಹಾದೇವಿ, ಶಬ್ದಮಾಡುತ್ತಿರುವ ಕಿರುಗೆಜ್ಜೆ-ನೂಪುರಗಳಿಂದ ಹೊಳೆಯುತ್ತಿರುವ, ರತ್ನಗಳ ಪ್ರಭೆಯಿಂದ ಲಿಪ್ತವಾಗಿರುವ, ಲಾಕ್ಷಾರಸದಿಂದ ತೋಯ್ದು, ಬ್ರಹ್ಮ-ವಿಷ್ಣು-ಮಹೇಶ್ವರರೇ ಮೊದಲಾದ ದೇವತೆಗಳಿಂದ ಸೇವಿಸಲ್ಪಡುತ್ತಿರುವ, ನಿನ್ನ ಪಾದಾರವಿಂದವನ್ನು ನನ್ನ ಶಿರಸ್ಸಿನಲ್ಲಿ ಧ್ಯಾನಿಸುತ್ತೇನೆ.

೪. ಹೇ ತಾಯಿ, ಅತ್ಯಂತವಾಗಿ ಕೆಂಪಾದ ಬಟ್ಟೆಯಿಂದ ಕಟ್ಟಲ್ಪಟ್ಟ ನೀವಿಯಿಂದಲೂ, ಪ್ರಕಾಶಿಸುತ್ತಿರುವ, ಮಹಾರತ್ನಗಳಿಂದ ಮಾಡಿದ ಡಾಬು ಒಡವೆಗಳಿಂದಲೂ ಶೋಭಿತವಾದ ನಿನ್ನ ನಿತಂಬವನ್ನೂ, ಸ್ಪಷ್ಟವಾಗಿ ಬಲದಿಂದ ತಿರುಗಿರುವ ನಾಭೀಸುಳಿಯನ್ನೂ, ಮೂರು ವಳಿಗಳನ್ನೂ, ರೋಮ ರಾಜಿಯನ್ನೂ ನಾನು ಭಜಿಸುತ್ತೇನೆ.

೫. ಹೇ ತಾಯಿ, ಅಂಬುಜಾಕ್ಷಿ, ಸದಾ ಮಂದಹಾಸದಿಂದ ಕೂಡಿದ ಮುಖವುಳ್ಳವಳೆ, ಪ್ರಕಾಶಿಸುತ್ತಿರುವ, ದುಂಡಾದ, ಎತ್ತರವಾದ, ಮಾಣಿಕ್ಯಕುಂಭ ಸದೃಶವಾದ, ಹಾಲಿನಿಂದ ಪರಿಪೂರ್ಣವೂ ಸುಂದರವೂ ಆದ, ಮಹಾಹಾರ ದಿಂದ ಉದ್ದೀಪ್ತವಾದ ನಿನ್ನ ಶ್ರೀಸ್ತನದ್ವಯವನ್ನು ಭಜಿಸುತ್ತೇನೆ.

ಶಿರೀಶಪ್ರಸೂನೋಲ್ಲಸದ್ಬಾಹುದಂಡೈ-
ರ್ಜ್ವಲದ್ಬಾಣಕೋದಂಡಪಾಶಾಂಕುಶೈಶ್ಚ ।
ಚಲತ್ಕಂಕಣೋದಾರಕೇಯೂರಭೂಷೋ-
ಜ್ಜ್ವಲದ್ಭಿರ್ಲಸಂತೀಂ ಭಜೇ ಶ್ರೀಭವಾನೀಮ್ ॥ ೬ ॥

ಶರತ್ಪೂರ್ಣಚಂದ್ರಪ್ರಭಾಪೂರ್ಣಬಿಂಬಾ-
ಧರಸ್ಮೇರವಕ್ತ್ರಾರವಿಂದಾಂ ಸುಶಾಂತಾಮ್ ।
ಸುರತ್ನಾವಲೀಹಾರತಾಟಂಕಶೋಭಾಂ
ಮಹಾಸುಪ್ರಸನ್ನಾಂ ಭಜೇ ಶ್ರೀಭವಾನೀಮ್ ॥ ೭ ॥

ಸುನಾಸಾಪುಟಂ ಸುಂದರಭ್ರೂಲಲಾಟಂ
ತವೌಷ್ಠಶ್ರಿಯಂ ದಾನದಕ್ಷಂ ಕಟಾಕ್ಷಮ್ ।
ಲಲಾಟೇ ಲಸದ್ಗಂಧಕಸ್ತೂರಿಭೂಷಂ
ಸ್ಫುರಚ್ಛ್ರೀಮುಖಾಂಭೋಜಮೀಡೇಽಹಮಂಬ ॥ ೮ ॥

ಚಲತ್ಕುಂತಲಾಂತರ್ಭ್ರಮದ್ಭೃಂಗವೃಂದಂ
ಘನಸ್ನಿಗ್ಧಧಮ್ಮಿಲ್ಲಭೂಷೋಜ್ಜ್ವಲಂ ತೇ ।
ಸ್ಫುರನ್ಮೌಲಿಮಾಣಿಕ್ಯಬದ್ಧೇಂದುರೇಖಾ-
ವಿಲಾಸೋಲ್ಲಸದ್ದಿವ್ಯಮೂರ್ಧಾನಮೀಡೇ ॥ ೯ ॥

ಇತಿ ಶ್ರೀಭವಾನಿ ಸ್ವರೂಪಂ ತವೇದಂ
ಪ್ರಪಂಚಾತ್ಪರಂ ಚಾತಿಸೂಕ್ಷ್ಮಂ ಪ್ರಸನ್ನಮ್ ।
ಸ್ಫುರತ್ವಂಬ ಡಿಂಭಸ್ಯ ಮೇ ಹೃತ್ಸರೋಜೇ
ಸದಾ ವಾಙ್ಮಯಂ ಸರ್ವತೇಜೋಮಯಂ ಚ ॥ ೧೦ ॥

೬. ಬಾಗೇಹೂವಿನಂತೆ ಮೃದುವಾಗಿ ಕಂಗೊಳಿಸುತ್ತಿರುವ ಬಾಹು ದಂಡಗಳಿಂದಲೂ, ಥಳಥಳಿಸುತ್ತಿರುವ ಬಾಣ - ಬಿಲ್ಲು - ಪಾಶ - ಅಂಕುಶ ಗಳಿಂದಲೂ, ಚಲಿಸುತ್ತಿರುವ ಕಂಕಣ, ವಿಶಾಲವಾದ ಕೇಯೂರ (ಇವೇ ಮೊದಲಾದ) ಪ್ರಕಾಶಮಾನವಾದ ಆಭರಣಗಳಿಂದ ಕಂಗೊಳಿಸುತ್ತಿರು ವವಳೂ ಆದ ಶ್ರೀಭವಾನಿಯನ್ನು ಭಜಿಸುತ್ತೇನೆ.

೭. ಶರದೃತುವಿನ ಪೂರ್ಣಚಂದ್ರನ ಪ್ರಭೆಯಂಥ ಪ್ರಭೆಯಿಂದ ತುಂಬಿದ ಮತ್ತು ದುಂಡಗಿರುವ ತುಟಿಗಳನ್ನೂ, ಮಂದಹಾಸಯುತ ಮುಖಾರವಿಂದವನ್ನೂ ಹೊಂದಿ ಅತ್ಯಂತ ಶಾಂತಳಾಗಿರುವ, ಉತ್ತಮರತ್ನ ಮತ್ತು ಹಾರಕುಂಡಲಗಳಿಂದ ಶೋಭಿಸುತ್ತಿರುವ, ಅತ್ಯಂತ ಪ್ರಸನ್ನಳಾಗಿರುವ ಶ್ರೀಭವಾನಿಯನ್ನು ಭಜಿಸುತ್ತೇನೆ.

೮. ಹೇ ತಾಯಿ, ಸುಂದರವಾದ ಮೂಗು, ಸುಂದರವಾದ ಹುಬ್ಬು ಮತ್ತು ಹಣೆ, ಸಂಪದ್ಯುಕ್ತವಾದ ತುಟಿಗಳು, ದಾನವಿಚಕ್ಷಣವಾದ ಕಟಾಕ್ಷ, ಹಣೆಯಲ್ಲಿ ಹೊಳೆಯುತ್ತಿರುವ ಗಂಧ-ಕಸ್ತೂರಿಗಳೆಂಬ ಭೂಷಣ-ಇವುಗಳಿಂದ ಕೂಡಿದ ನಿನ್ನ ಶ್ರೀಮುಖಕಮಲವನ್ನು ನಾನು ಸ್ತುತಿಸುತ್ತೇನೆ.

೯. ಚಲಿಸುತ್ತಿರುವ ಮುಂಗುರುಳುಗಳನ್ನೇ ಒಳಗೆ ಹಾರಾಡುತ್ತಿರುವ ಭೃಂಗಗಳನ್ನಾಗಿ ಉಳ್ಳ, ಘನವೂ ಸ್ನಿಗ್ಧವೂ ಆದ ಮತ್ತು ಆಭರಣದಿಂದ ಕೂಡಿದ ಉಜ್ಜ್ವಲವಾದ ತುರುಬನ್ನುಳ್ಳ, ಪ್ರಕಾಶಿಸುತ್ತಿರುವ ಕಿರೀಟದಲ್ಲಿ ಮಾಣಿಕ್ಯದ ಇಂದುರೇಖೆಯನ್ನು ಹೊಂದಿ ಕಂಗೊಳಿಸುತ್ತಿರುವ ನಿನ್ನ ದಿವ್ಯವಾದ ಶಿರಸ್ಸನ್ನು ಸ್ತುತಿಸುತ್ತೇನೆ.

೧೦. ಹೇ ಭವಾನಿ, ಈ ಪ್ರಪಂಚಕ್ಕಿಂತ ಶ್ರೇಷ್ಠವೂ, ಅತಿಸೂಕ್ಷ್ಮವೂ ಪ್ರಸನ್ನವೂ ಆದ ನಿನ್ನ ಈ ಸ್ವರೂಪವು ಹೀಗಿರುವುದು. ಹೇ ತಾಯಿ, (ನಿನ್ನ) ಮಗುವಾದ ನನ್ನ ಹೃದಯಕಮಲದಲ್ಲಿ ಸರ್ವತೇಜೋಮಯವೂ ವಾಙ್ಮಯವೂ ಆದ (ನಿನ್ನ ಸ್ವರೂಪವು) ಯಾವಾಗಲೂ ಗೋಚರಿಸುತ್ತಿರಲಿ.

ಗಣೇಶಾಭಿಮುಖ್ಯಾಖಿಲೈಶ್ಶಕ್ತಿಬೃಂದೈ-
ರ್ವೃತಾಂ ವೈ ಸ್ಫುರಚ್ಚಕ್ರರಾಜೋಲ್ಲಸಂತೀಮ್ ।
ಪರಾಂ ರಾಜರಾಜೇಶ್ವರಿ ತ್ರೈಪುರಿ ತ್ವಾಂ
ಶಿವಾಂಕೋಪರಿಸ್ಥಾಂ ಶಿವಾಂ ಭಾವಯಾಮಿ ॥ ೧೧ ॥

ತ್ವಮರ್ಕಸ್ತ್ವಮಿಂದುಸ್ತ್ವಮಗ್ನಿಸ್ತ್ವಮಾಪ-
ಸ್ತ್ವಮಾಕಾಶಭೂವಾಯವಸ್ತ್ವಂ ಮಹತ್ತ್ವಮ್ ।
ತ್ವದನ್ಯೋ ನ ಕಶ್ಚಿತ್ಪ್ರಪಂಚೋಽಸ್ತಿ ಸರ್ವಂ
ತ್ವಮಾನಂದಸಂವಿತ್ಸ್ವರೂಪಾಂ ಭಜೇಽಹಮ್ ॥ ೧೨ ॥

ಶ್ರುತೀನಾಮಗಮ್ಯೇ ಸುವೇದಾಗಮಜ್ಞಾ
ಮಹಿಮ್ನೋ ನ ಜಾನಂತಿ ಪಾರಂ ತವಾಂಬ ।
ಸ್ತುತಿಂ ಕರ್ತುಮಿಚ್ಛಾಮಿ ತೇ ತ್ವಂ ಭವಾನಿ
ಕ್ಷಮಸ್ವೇದಮತ್ರ ಪ್ರಮುಗ್ಧಃ ಕಿಲಾಹಮ್ ॥ ೧೩ ॥

ಗುರುಸ್ತ್ವಂ ಶಿವಸ್ತ್ವಂ ಚ ಶಕ್ತಿಸ್ತ್ವಮೇವ
ತ್ವಮೇವಾಸಿ ಮಾತಾ ಪಿತಾ ಚ ತ್ವಮೇವ ।
ತ್ವಮೇವಾಸಿ ವಿದ್ಯಾ ತ್ವಮೇವಾಸಿ ಬಂಧು-
ರ್ಗತಿರ್ಮೇ ಮತಿರ್ದೇವಿ ಸರ್ವಂ ತ್ವಮೇವ ॥ ೧೪ ॥

ಶರಣ್ಯೇ ವರೇಣ್ಯೇ ಸುಕಾರುಣ್ಯಮೂರ್ತೇ
ಹಿರಣ್ಯೋದರಾದ್ಯೈರಗಣ್ಯೇ ಸುಪುಣ್ಯೇ ।
ಭವಾರಣ್ಯಭೀತೇಶ್ಚ ಮಾಂ ಪಾಹಿ ಭದ್ರೇ
ನಮಸ್ತೇ ನಮಸ್ತೇ ನಮಸ್ತೇ ಭವಾನಿ ॥ ೧೫ ॥

೧೧. ಹೇ ರಾಜರಾಜೇಶ್ವರಿ, ತ್ರಿಪುರವಧು, ಗಣೇಶನನ್ನು ಮುಂದಿಟ್ಟು ಕೊಂಡಿರುವ ಎಲ್ಲ ಶಕ್ತಿಸಮೂಹಗಳಿಂದ ಆವೃತಳಾದ, ಪ್ರಕಾಶಿಸುತ್ತಿರುವ ಶ್ರೀಚಕ್ರದಲ್ಲಿ ಕಂಗೊಳಿಸುತ್ತಿರುವ, ಶಿವನ ತೊಡೆಯ ಮೇಲೆ ಕುಳಿತಿರುವ ಪರಾಶಕ್ತಿಯಾದ ಶಿವೆಯಾದ ನಿನ್ನನ್ನು ಧ್ಯಾನಿಸುತ್ತೇನೆ.

೧೨. ನೀನು ಸೂರ್ಯ, ನೀನು ಚಂದ್ರ, ನೀನು ಅಗ್ನಿ, ನೀನು ನೀರು, ನೀನು ಆಕಾಶ; ಭೂಮಿ-ವಾಯುಗಳೂ ನೀನೇ, ಮಹತ್ ತತ್ತ್ವವೂ ನೀನೇ; ನಿನಗಿಂತ ಬೇರೆಯಾದ ಮತ್ತಾವ ಪ್ರಪಂಚವೂ ಇಲ್ಲ. ಎಲ್ಲವೂ ನೀನೇ. ಚಿದಾನಂದರೂಪಳಾದ ನಿನ್ನನ್ನು ನಾನು ಭಜಿಸುತ್ತೇನೆ.

೧೩. ಶ್ರುತಿಗಳಿಗೆ ನಿಲುಕದ ತಾಯೇ, ವೇದ-ಆಗಮಾದಿ ಶಾಸ್ತ್ರಗಳನ್ನು ಚೆನ್ನಾಗಿ ಬಲ್ಲ ಜ್ಞಾನಿಗಳೂ ಕೂಡ ನಿನ್ನ ಮಹಿಮೆಯ ಪಾರವನ್ನರಿಯರು. (ಹಾಗಿದ್ದರೂ) ನಿನ್ನ ಸ್ತುತಿಯನ್ನು ಮಾಡಲಿಚ್ಛಿಸುತ್ತಿದ್ದೇನೆ ! ಹೇ ಭವಾನಿ, ಈ ನನ್ನ ಅಪರಾಧವನ್ನು ಕ್ಷಮಿಸು ! ನಾನು ಅತ್ಯಂತ ಮುಗ್ಧನಲ್ಲವೆ?

೧೪. ನೀನು (ನನ್ನ) ಗುರು; ನೀನೇ ಶಿವನು, ಶಕ್ತಿಯೂ ನೀನೇ, ನೀನೇ ತಾಯಿಯಾಗಿದ್ದೀಯೆ. ನೀನೇ ತಂದೆಯೂ ಕೂಡ. ನೀನೇ ವಿದ್ಯೆ; ನನಗೆ ನೀನು ಬಂಧುವೂ ಗತಿಯೂ ಬುದ್ಧಿಯೂ ಆಗಿರುತ್ತೀಯೆ. ಹೇ ದೇವಿ, ನನ್ನ ಸರ್ವಸ್ವವೂ ನೀನೇ !

೧೫. ಹೇ ಭವಾನಿ, ಶರಣುಯೋಗ್ಯಳೆ, ಶ್ರೇಷ್ಠಳೆ, ಅತ್ಯಂತ ಕಾರುಣ್ಯದ ಮೂರ್ತಿಯೇ, ಹಿರಣ್ಯಗರ್ಭಬ್ರಹ್ಮಾದಿಗಳಿಂದಲೂ ಅರಿಯಲಾಗದವಳೇ, ಪೂರ್ಣ್ಯರೂಪಳೇ, ಮಂಗಳಸ್ವರೂಪಳೇ, ಸಂಸಾರವೆಂಬ ಅರಣ್ಯದಲ್ಲಿ ಸಿಕ್ಕಿ ಹೆದರಿರುವ ನನ್ನನ್ನು ಕಾಪಾಡು ! ನಿನಗೆ ನಮಸ್ಕಾರ ! ನಿನಗೆ ನಮಸ್ಕಾರ !

ಇತೀಮಾಂ ಮಹಚ್ಛ್ರೀಭವಾನೀಭುಜಂಗಂ
ಸ್ತುತಿಂ ಯಃ ಪಠೇದ್ಭಕ್ತಿಯುಕ್ತಶ್ಚ ತಸ್ಮೈ ।
ಸ್ವಕೀಯಂ ಪದಂ ಶಾಶ್ವತಂ ವೇದಸಾರಂ
ಶ್ರಿಯಂ ಚಾಷ್ಟಸಿದ್ಧಿಂ ಭವಾನೀ ದದಾತಿ ॥ ೧೬ ॥

ಭವಾನೀ ಭವಾನೀ ಭವಾನೀ ತ್ರಿವಾರ-
ಮುದಾರಂ ಮುದಾ ಸರ್ವದಾ ಯೇ ಜಪಂತಿ ।
ನ ಶೋಕಂ ನ ಮೋಹಂ ನ ಪಾಪಂ ನ ಭೀತಿಃ
ಕದಾಚಿತ್ ಕಥಂಚಿತ್ ಕುತಶ್ಚಿಜ್ಜನಾನಾಮ್ ॥ ೧೭ ॥

॥ ಇತಿ ಭವಾನೀಭುಜಂಗಮ್ ಸಂಪೂರ್ಣಮ್ ॥

೧೬. ಹೀಗೆ ಮಹತ್ತಾದ ಶ್ರೀಭವಾನೀಭುಜಂಗವೆಂಬ ಈ ಸ್ತುತಿಯನ್ನು ಯಾವನು ಭಕ್ತಿಯುಕ್ತನಾಗಿ ಪಠಿಸುವನೋ, ಅವನಿಗೆ ಭವಾನಿಯು ವೇದದ ಸಾರವಾದ ತನ್ನ ಶಾಶ್ವತ ಪದವನ್ನೂ, ಐಶ್ವರ್ಯವನ್ನೂ, ಅಷ್ಟಸಿದ್ಧಿಗಳನ್ನೂ ಕೊಡುತ್ತಾಳೆ.

೧೭. 'ಭವಾನೀ, ಭವಾನೀ, ಭವಾನೀ' ಎಂದು ಯಾರು ತ್ರಿಕಾಲಗಳಲ್ಲಿಯೂ ಸದಾ ಸಂತೋಷದಿಂದ ಮತ್ತು ಯಥೇಷ್ಟವಾಗಿ ಜಪಿಸುತ್ತಾರೋ ಅಂತಹ ಜನರಿಗೆ ಶೋಕವಾಗಲೀ ಮೋಹವಾಗಲೀ, ಪಾಪವಾಗಲೀ ಭಯವಾಗಲೀ ಯಾವಾಗಲೂ ಹೇಗೂ ಎಲ್ಲಿಂದಲೂ ಉಂಟಾಗುವುದಿಲ್ಲ!

ಹೀಗೆ ಭವಾನೀಭುಜಂಗ ಸ್ತೋತ್ರವು ಮುಗಿಯಿತು.

# ಮೀನಾಕ್ಷೀಸ್ತೋತ್ರಮ್

ಶ್ರೀವಿದ್ಯೇ ಶಿವವಾಮಭಾಗನಿಲಯೇ ಶ್ರೀರಾಜರಾಜಾರ್ಚಿತೇ
ಶ್ರೀನಾಥಾದಿಗುರುಸ್ವರೂಪವಿಭವೇ ಚಿಂತಾಮಣೀಪೀಠಿಕೇ ।
ಶ್ರೀವಾಣೀಗಿರಿಜಾನುತಾಂಘ್ರಿಕಮಲೇ ಶ್ರೀಶಾಂಭವೀ ಶ್ರೀಶಿವೇ
ಮಧ್ಯಾಹ್ನೇ ಮಲಯಧ್ವಜಾಧಿಪಸುತೇ ಮಾಂ ಪಾಹಿ
ಮೀನಾಂಬಿಕೇ ॥ ೧ ॥

ಚಕ್ರಸ್ಥೇऽಚಪಲೇ ಚರಾಚರಜಗನ್ನಾಥೇ ಜಗತ್ಪೂಜಿತೇ
ಆರ್ತಾಲೀವರದೇ ನತಾಭಯಕರೇ ವಕ್ಷೋಜಭಾರಾನ್ವಿತೇ ।
ವಿದ್ಯೇ ವೇದಕಲಾಪಮೌಲಿವಿದಿತೇ ವಿದ್ಯುಲ್ಲತಾವಿಗ್ರಹೇ
ಮಾತಃ ಪೂರ್ಣಸುಧಾರಸಾರ್ದ್ರಹೃದಯೇ ಮಾಂ ಪಾಹಿ
ಮೀನಾಂಬಿಕೇ ॥ ೨ ॥

ಕೋಟೀರಾಂಗದರತ್ನಕುಂಡಲಧರೇ ಕೋದಂಡಬಾಣಾಂಚಿತೇ
ಕೋಕಾಕಾರಕುಚದ್ವಯೋಪರಿಲಸತ್ಪ್ರಾಲಂಬಿಹಾರಾಂಚಿತೇ ।
ಶಿಂಜನ್ನೂಪುರಪಾದಸಾರಸಮಣಿಶ್ರೀಪಾದುಕಾಲಂಕೃತೇ
ಮದ್ದಾರಿದ್ರ್ಯಭುಜಂಗಗಾರುಡಖಗೇ ಮಾಂ ಪಾಹಿ
ಮೀನಾಂಬಿಕೇ ॥ ೩ ॥

ಬ್ರಹ್ಮೇಶಾಚ್ಯುತಗೀಯಮಾನಚರಿತೇ ಪ್ರೇತಾಸನಾಂತಸ್ಸ್ಥಿತೇ
ಪಾಶೋದಂಕುಶಚಾಪಬಾಣಕಲಿತೇ ಬಾಲೇಂದುಚೂಡಾಂಚಿತೇ ।
ಬಾಲೇ ಬಾಲಕುರಂಗಲೋಲನಯನೇ ಬಾಲಾರ್ಕಕೋಟ್ಯುಜ್ಜ್ವಲೇ
ಮುದ್ರಾರಾಧಿತದೈವತೇ ಮುನಿಸುತೇ ಮಾಂ ಪಾಹಿ
ಮೀನಾಂಬಿಕೇ ॥ ೪ ॥

# ಮೀನಾಕ್ಷೀಸ್ತೋತ್ರ

೧. ಹೇ ಶ್ರೀವಿದ್ಯಾಸ್ವರೂಪಿಣಿ, ಶಿವನ ಎಡಭಾಗದಲ್ಲಿ ನೆಲಸಿರುವವಳೇ, ಕುಬೇರನಿಂದ ಪೂಜಿಸಲ್ಪಟ್ಟವಳೇ, ಶ್ರೀನಾಥನೇ ಮೊದಲಾದ ಗುರುಗಳ ಸ್ವರೂಪದಲ್ಲಿರುವ ಐಶ್ವರ್ಯರೂಪಿಣಿಯೇ, ಚಿಂತಾಮಣಿಯನ್ನೇ ಪೀಠವಾಗಿ ಉಳ್ಳವಳೇ, ಲಕ್ಷ್ಮೀ, ಸರಸ್ವತೀ, ಪಾರ್ವತೀ-ಇವರಿಂದ ನಮಸ್ಕರಿಸಲ್ಪಟ್ಟ ಚರಣಕಮಲವುಳ್ಳವಳೇ, ಶಂಭುಮಹಿಷಿಯೇ, ಮಂಗಳ ಸ್ವರೂಪಳೇ, ನಡುಹಗಲಿನಂತೆ ಪ್ರಕಾಶಳೇ, ಮಲಯರಾಜನ ಮಗಳೇ, ಹೇ ಮೀನಾಂಬಿಕೇ, ನನ್ನನ್ನು ಕಾಪಾಡು !

೨. ಯಂತ್ರದಲ್ಲಿ ನೆಲಸಿರುವವಳೇ, ಚಾಪಲ್ಯರಹಿತಳೇ, ಚರಾಚರ ಜಗತ್ತಿಗೆ ಒಡೆಯಳೇ, ಜಗಜ್ಜನರಿಂದ ಪೂಜಿತಳಾದವಳೇ, ಆರ್ತರ ಸಮೂಹಕ್ಕೆ ವರದಾಯಕಳೇ, ನಮಸ್ಕರಿಸಿದವರಿಗೆ ಅಭಯವನ್ನು ಉಂಟು ಮಾಡುವವಳೇ, ಕುಚಗಳ ಭಾರದಿಂದ ಯುಕ್ತಳಾದವಳೇ, ಜ್ಞಾನ ಸ್ವರೂಪಳೇ, ವೇದಸಮೂಹಕ್ಕೆ ಕಿರೀಟಪ್ರಾಯವಾದ ವೇದಾಂತಗಳಿಂದ ಅರಿಯಲ್ಪಟ್ಟವಳೇ, ವಿದ್ಯುಲ್ಲತೆಯ ಸ್ವರೂಪವುಳ್ಳವಳೇ, ತಾಯೆ, ಅಮೃತದಿಂದ ಪೂರ್ಣವಾಗಿ ತೋಯ್ದ ಹೃದಯವುಳ್ಳವಳೇ, ಮೀನಾಂಬಿಕೇ, ನನ್ನನ್ನು ಕಾಪಾಡು !

೩. ಕಿರೀಟ, ತೋಳ್ಬಳೆ, ರತ್ನಕುಂಡಲ - ಇವನ್ನು ಧರಿಸಿರುವವಳೇ, ಬಿಲ್ಲುಬಾಣಗಳಿಂದ ಕೂಡಿದವಳೇ, ರಕ್ತತಾವರೆಯಂತಹ ಕುಚಗಳೆರಡರ ಮೇಲೆ ಲಂಬಿತವಾದ ಹಾರವನ್ನುಳ್ಳವಳೇ, ಶಬ್ದಮಾಡುತ್ತಿರುವ ಗೆಜ್ಜೆಯನ್ನೂ, ತಾವರೆಗಳನ್ನೂ, ಮಣಿಗಳನ್ನೂ ಉಳ್ಳ ಪಾದುಕೆಯಿಂದ ಅಲಂಕೃತಳಾದವಳೇ, ನನ್ನ ದಾರಿದ್ರ್ಯವೆಂಬ ಸರ್ಪಕ್ಕೆ ಗರುಡಪಕ್ಷಿಯಂತಿರುವ ಮೀನಾಂಬಿಕೆಯೇ, ನನ್ನನ್ನು ಕಾಪಾಡು !

೪. ಬ್ರಹ್ಮ, ಈಶ್ವರ, ವಿಷ್ಣು - ಇವರಿಂದ ನಿನ್ನ ಚರಿತ್ರೆಯನ್ನು ಹಾಡಿಸಿ ಕೊಂಡವಳೇ, ಪ್ರೇತಾಸನದ ಮಧ್ಯೆ ಕುಳಿತಿರುವವಳೇ, ಪಾಶ, ಎತ್ತಿ ಹಿಡಿದ ಅಂಕುಶ, ಬಿಲ್ಲು, ಬಾಣ-ಇವನ್ನು ಧರಿಸಿದವಳೇ, ಬಾಲಚಂದ್ರನನ್ನು ತಲೆಯಲ್ಲಿ ಅಲಂಕಾರವಾಗಿ ಮಾಡಿಕೊಂಡಿರುವವಳೇ, ಕುಮಾರಿಯೇ, ಎಳೆಯ ಜಿಂಕೆಯಂತೆ ಚಪಲವಾದ ಕಣ್ಣುಳ್ಳವಳೇ, ಕೋಟಿ ಬಾಲಸೂರ್ಯರ ಪ್ರಭೆಯನ್ನುಳ್ಳವಳೇ, (ಶಂಖಯೋನ್ಯಾದಿ) ಮುದ್ರೆಗಳಿಂದ ಆರಾಧಿಸಲ್ಪಡುವ ದೈವವೇ, ಮುನಿತನಯೇ, ಹೇ ಮೀನಾಂಬಿಕೇ, ನನ್ನನ್ನು ಕಾಪಾಡು !

ಗಂಧರ್ವಾಮರಯಕ್ಷಪನ್ನಗನುತೇ ಗಂಗಾಧರಾಲಿಂಗಿತೇ
ಗಾಯತ್ರೀಗರುಡಾಸನೇ ಕಮಲಜೇ ಸುಶ್ಯಾಮಲೇ ಸುಸ್ಥಿತೇ ।
ಖಾತೀತೇ ಖಲದಾರುಪಾವಕಶಿಖೇ ಖದ್ಯೋತಕೋಟ್ಯುಜ್ಜ್ವಲೇ
ಮಂತ್ರಾರಾಧಿತದೈವತೇ ಮುನಿಸುತೇ ಮಾಂ ಪಾಹಿ
ಮೀನಾಂಬಿಕೇ ॥ ೫ ॥

ನಾದೇ ನಾರದತುಂಬುರಾದ್ಯವಿನುತೇ ನಾದಾಂತನಾದಾತ್ಮಿಕೇ
ನಿತ್ಯೇ ನೀಲಲತಾತ್ಮಿಕೇ ನಿರುಪಮೇ ನೀವಾರಶೂಕೋಪಮೇ ।
ಕಾಂತೇ ಕಾಮಕಲೇ ಕದಂಬನಿಲಯೇ ಕಾಮೇಶ್ವರಾಂಕಸ್ಥಿತೇ
ಮದ್ವಿದ್ಯೇ ಮದಭೀಷ್ಟಕಲ್ಪಲತಿಕೇ ಮಾಂ ಪಾಹಿ
ಮೀನಾಂಬಿಕೇ ॥ ೬ ॥

ವೀಣಾನಾದನಿಮೀಲಿತಾರ್ಧನಯನೇ ವಿಸ್ರಸ್ತಚೂಲೀಭರೇ
ತಾಂಬೂಲಾರುಣಪಲ್ಲವಾಧರಯುತೇ ತಾಟಂಕಹಾರಾನ್ವಿತೇ ।
ಶ್ಯಾಮೇ ಚಂದ್ರಕಲಾವತಂಸಕಲಿತೇ ಕಸ್ತೂರಿಕಾಫಾಲಿಕೇ
ಪೂರ್ಣೇ ಪೂರ್ಣಕಲಾಭಿರಾಮವದನೇ ಮಾಂ ಪಾಹಿ
ಮೀನಾಂಬಿಕೇ ॥ ೭ ॥

ಶಬ್ದಬ್ರಹ್ಮಮಯೀ ಚರಾಚರಮಯೀ ಜ್ಯೋತಿರ್ಮಯೀ ವಾಙ್ಮಯೀ
ನಿತ್ಯಾನಂದಮಯೀ ನಿರಂಜನಮಯೀ ತತ್ತ್ವಂಮಯೀ ಚಿನ್ಮಯೀ ।
ತತ್ತ್ವಾತೀತಮಯೀ ಪರಾತ್ಪರಮಯೀ ಮಾಯಾಮಯೀ ಶ್ರೀಮಯೀ
ಸರ್ವೈಶ್ವರ್ಯಮಯೀ ಸದಾಶಿವಮಯೀ ಮಾಂ ಪಾಹಿ
ಮೀನಾಂಬಿಕೇ ॥ ೮ ॥

॥ ಇತಿ ಮೀನಾಕ್ಷೀಸ್ತೋತ್ರಮ್ ಸಂಪೂರ್ಣಮ್ ॥

೫. ಗಂಧರ್ವರು, ದೇವತೆಗಳು, ಯಕ್ಷರು, ಪನ್ನಗರು - ಇವರಿಂದ (ಸ್ತುತಿಸಲ್ಪಟ್ಟವಳೆ), ಗಂಗಾಧರ ಶಿವನಿಂದ ಆಲಿಂಗಿತಳಾದವಳೇ, ಗಾಯತ್ರಿಯ ರೂಪದಲ್ಲಿ ಗರುಡಾಸನಳಾಗಿರುವವಳೇ, ಕಮಲಸಂಭವಳೇ, ಕೃಷ್ಣವರ್ಣವುಳ್ಳವಳೇ, ಅಚಲಳೇ, ಇಂದ್ರಿಯಾತೀತಳೇ, ಖಲಜನರೆಂಬ ಮರಕ್ಕೆ ಅಗ್ನಿಶಿಖೆಯಂತೆ ಇರುವವಳೇ, ಕೋಟಿಸೂರ್ಯರಂತೆ ಉಜ್ಜ್ವಲಳೇ, ಮಂತ್ರಗಳಿಂದ ಆರಾಧಿಸಲ್ಪಡುವ ದೈವವೇ, ಮುನಿತನಯೇ, ಹೇ ಮೀನಾಂಬಿಕೇ, ನನ್ನನ್ನು ಕಾಪಾಡು!

೬. ನಾದರೂಪಿಣಿ, ನಾರದ ತುಂಬುರು ಮೊದಲಾದವರಿಂದ ಸ್ತುತಿಸಲ್ಪಟ್ಟವಳೇ, ಓಂಕಾರದ ಗುರಿಯೂ, ಓಂಕಾರಾತ್ಮಳೂ ಆದವಳೇ, ನಿತ್ಯಳೇ, ನೀಲಲತೆಯಂತಹ ಶರೀರವುಳ್ಳವಳೇ, ಅತುಲಳೇ, ನೀವಾರಧಾನ್ಯದ ತುದಿಯಂತೆ ಅತ್ಯಂತ ಸೂಕ್ಷ್ಮಳಾದವಳೇ, ಸುಂದರಿಯೇ, ರತಿಯೇ, ಕದಂಬವನವಾಸಿಯೇ, ಕಾಮೇಶ್ವರನ ತೊಡೆಯಲ್ಲಿ ಕುಳಿತಿರುವವಳೇ, ನನ್ನ ಜ್ಞಾನರೂಪಳೇ, ನನ್ನ ಆಶೆಗಳಿಗೆ ಕಲ್ಪತರುವಂತಿರುವವಳೇ, ಹೇ ಮೀನಾಂಬಿಕೇ, ನನ್ನನ್ನು ಕಾಪಾಡು!

೭. ವೀಣಾನಾದವನ್ನು ಕೇಳುತ್ತ ಅರ್ಧಮುಚ್ಚಿದ ಕಣ್ಣುಳ್ಳವಳೇ, ಜಾರಿದ ತಲೆಕೂದಲುಳ್ಳವಳೇ, ತಾಂಬೂಲದಿಂದ ಕೆಂಪಾದ ಚಿಗುರಿನಂತೆ ಕಾಣುವ ತುಟಿಯಿಂದ ಕೂಡಿರುವವಳೇ, ಕುಂಡಲ-ಹಾರಗಳನ್ನು ಧರಿಸಿದವಳೇ, ಶ್ಯಾಮಲವರ್ಣಳೇ, ಚಂದ್ರಕಲೆಯನ್ನು ಶಿರೋಭೂಷಣವಾಗಿ ಧರಿಸಿದವಳೇ, ಹಣೆಯಲ್ಲಿ ಕಸ್ತೂರಿಯ ತಿಲಕವನ್ನುಳ್ಳವಳೇ, ಪೂರ್ಣರೂಪಳೇ, ಪೂರ್ಣಚಂದ್ರನಂತೆ ಸುಂದರವಾದ ಮುಖವುಳ್ಳವಳೇ, ಹೇ ಮೀನಾಂಬಿಕೇ, ನನ್ನನ್ನು ಕಾಪಾಡು!

೮. ಹೇ ಮೀನಾಂಬಿಕೇ, (ನೀನು) ಶಬ್ದಸ್ವರೂಪಳು, ಚರಾಚರಜಗತ್ ಸ್ವರೂಪಳು, ಜ್ಯೋತಿರ್ಮಯಿಯು ಮತ್ತು ವಾಕ್‌ಸ್ವರೂಪಳು. (ನೀನು) ನಿತ್ಯಾನಂದರೂಪಳು, ನಿರಂಜನಮಯಳು, ತತ್ತ್ವರೂಪಳು, ಚಿನ್ಮಯಿಯು. (ನೀನೇ) ತತ್ತ್ವಕ್ಕೆ ಆಚೆಯೂ ಇರುವವಳು, ಪರಾತ್ಪರಳು, ಮಾಯಾಮಯಳು ಮತ್ತು ಶ್ರೀರೂಪಳು. (ನೀನು) ಸಕಲೈಶ್ವರ್ಯಮಯಿ ಮತ್ತು ಸದಾಶಿವರೂಪಳು. ನನ್ನನ್ನು ಕಾಪಾಡು!

ಹೀಗೆ ಮೀನಾಕ್ಷೀಸ್ತೋತ್ರವು ಮುಗಿಯಿತು.

# ಶ್ಯಾಮಲಾನವರತ್ನಮಾಲಿಕಾ

ಓಂಕಾರಪಂಜರಶುಕೀಮುಪನಿಷದುದ್ಯಾನಕೇಲಿಕಲಕಂಠೀಮ್ ।
ಆಗಮವಿಪಿನಮಯೂರೀಮಾರ್ಯಾಮಂತರ್ವಿಭಾವಯೇ
ಗೌರೀಮ್ ॥ ೧ ॥

ದಯಮಾನದೀರ್ಘನಯನಾಂ ದೇಶಿಕರೂಪೇಣ
ದರ್ಶಿತಾಭ್ಯುದಯಾಮ್ ।
ವಾಮಕುಚನಿಹಿತವೀಣಾಂ ವರದಾಂ ಸಂಗೀತಮಾತೃಕಾಂ
ವಂದೇ ॥ ೨ ॥

ಶ್ಯಾಮಲಿಮಸೌಕುಮಾರ್ಯಾಂ ಸೌಂದರ್ಯಾನಂದ-
ಸಂಪದುನ್ಮೇಷಾಮ್ ।
ತರುಣಿಮಕರುಣಾಪೂರಾಂ ಮದಜಲಕಲ್ಲೋಲಲೋಚನಾಂ
ವಂದೇ ॥ ೩ ॥

ನಖಮುಖಮುಖರಿತವೀಣಾನಾದರಸಾಸ್ವಾದನವನವೋಲ್ಲಾಸಮ್ ।
ಮುಖಮಂಬ ಮೋದಯತು ಮಾಂ ಮುಕ್ತಾತಾಟಂಕ-
ಮುಗ್ಧಹಸಿತಂ ತೇ ॥ ೪ ॥

ಸರಿಗಮಪದನಿಸತಾಂತಾಂ ವೀಣಾಸಂಕ್ರಾಂತಕಾಂತಹಸ್ತಾಂ ತಾಮ್ ।
ಶಾಂತಾಂ ಮೃದುಲಸ್ವಾಂತಾಂ ಕುಚಭರತಾಂತಾಂ ನಮಾಮಿ
ಶಿವಕಾಂತಾಮ್ ॥ ೫ ॥

ಅವಟುತಟಘಟಿತಚೂಲೀತಾಡಿತತಾಲೀಪಲಾಶತಾಟಂಕಾಮ್ ।
ವೀಣಾವಾದನವೇಲಾಕಂಪಿತಶೀರ್ಷಾಂ ನಮಾಮಿ
ಮಾತಂಗೀಮ್ ॥ ೬ ॥

# ಶ್ಯಾಮಲಾನವರತ್ನಮಾಲಿಕಾ

೧. ಓಂಕಾರವೆಂಬ ಪಂಜರದಲ್ಲಿ ಗಿಳಿಯಂತಿರುವ, ಉಪನಿಷತ್ತುಗಳೆಂಬ ಉದ್ಯಾನವನದಲ್ಲಿ ಆಟವಾಡುತ್ತಿರುವ ಕೋಗಿಲೆಯಂತಿರುವ, ಆಗಮಗಳೆಂಬ ಅರಣ್ಯದಲ್ಲಿನ ನವಿಲಿನಂತಿರುವ, ಶ್ರೇಷ್ಠಳಾದ ಗೌರಿಯನ್ನು ಹೃದಯದಲ್ಲಿ ಧ್ಯಾನಿಸುತ್ತೇನೆ.

೨. ಕರುಣೆಯನ್ನು ಸೂಸುತ್ತಿರುವ ವಿಶಾಲನೇತ್ರಗಳನ್ನುಳ್ಳ, ಶ್ರೀಗುರುವಿನ ರೂಪದಿಂದ ಅಭ್ಯುದಯಮಾರ್ಗವನ್ನು ತೋರಿಸುತ್ತಿರುವ, ಎಡಕುಚದ ಮೇಲೆ ವೀಣೆಯನ್ನಿಟ್ಟುಕೊಂಡಿರುವ, ವರದಾತೃವೂ ಸಂಗೀತ ಮಾತೆಯೂ ಆದ ಶಾರದೆಯನ್ನು ವಂದಿಸುತ್ತೇನೆ.

೩. ಕೃಷ್ಣವರ್ಣದ ಸುಕುಮಾರಿಯೂ, ಸೌಂದರ್ಯ-ಆನಂದಗಳೆಂಬ ಸಂಪತ್ತಿನಿಂದ ಪ್ರಕಾಶಿಸುತ್ತಿರುವವಳೂ, ತಾರುಣ್ಯದ ಕರುಣೆಯಿಂದ ತುಂಬಿರುವವಳೂ, ಮದಜಲವೆಂಬ ಅಲೆಯಿಂದ ತೋಯ್ದ ಕಣ್ಣುಳ್ಳವಳೂ (ಆದ ದೇವಿಯನ್ನು) ನಮಸ್ಕರಿಸುತ್ತೇನೆ.

೪. ಹೇ ತಾಯಿ, ಉಗುರುಗಳ ತುದಿಯಿಂದ ನುಡಿಸಲ್ಪಟ್ಟ ವೀಣೆಯ ನಾದದ ರಸವನ್ನು ಆಸ್ವಾದಿಸುತ್ತ ಹೊಸ ಹೊಸ ಉಲ್ಲಾಸವನ್ನು ವ್ಯಕ್ತಪಡಿಸುತ್ತಿರುವ, ಮುತ್ತಿನ ಕರ್ಣಕುಂಡಲವನ್ನು ಧರಿಸಿ ಮೋಹಗೊಳಿಸುವ ಮಂದಹಾಸವನ್ನುಳ್ಳ, ನಿನ್ನ ಮುಖವು ನನ್ನನ್ನು ಆನಂದಗೊಳಿಸಲಿ.

೫. (ಏನನ್ನು ನುಡಿಸಿದರೂ) ಸಪ್ತಸ್ವರಗಳಲ್ಲಿಯೇ ಕೊನೆಗೊಳ್ಳುವ, ಸುಂದರವಾದ ತನ್ನ ಕೈಯನ್ನು ವೀಣೆಯ ಮೇಲೆ ಇಟ್ಟುಕೊಂಡಿರುವ, ಶಾಂತ ಸ್ವಭಾವಳೂ, ಮೃದುಹೃದಯಳೂ ಆದ, ಕುಚಗಳ ಭಾರದಿಂದ ದಣಿದಿರುವ ಆ ಶಿವವಲ್ಲಭೆಯನ್ನು ನಮಸ್ಕರಿಸುತ್ತೇನೆ.

೬. ವೀಣಾವಾದನ ಸಮಯದಲ್ಲಿ ತೂಗುತ್ತಿರುವ ತಲೆಯನ್ನುಳ್ಳ, (ಆದುದರಿಂದಲೇ) ಕತ್ತಿನ ಹಿಂಭಾಗದ ಮೇಲಿರುವ ರವಿಕೆಯಿಂದ ತಾಳೆಯೆಲೆಯಂತೆ ವಿಶಾಲವಾಗಿರುವ ಕುಂಡಲವು ಉಜ್ವಲಿಸುತ್ತಿರುವ ಮಾತಂಗಿಯನ್ನು ನಮಸ್ಕರಿಸುತ್ತೇನೆ.

ಮಣಿಭಂಗಮೇಚಕಾಂಗೀಂ ಮಾತಂಗೀ ನೌಮಿ ಸಿದ್ಧಮಾತಂಗೀಮ್ ।
ಯೌವನವನಸಾರಂಗೀಂ ಸಂಗೀತಾಂಭೋರುಹಾನುಭವ-
ಭೃಂಗೀಮ್ ॥ ೭ ॥

ವೀಣಾರವಾನುಷಂಗಂ ವಿಕಚಮದಾಮೋದಮಾಧುರೀಭೃಂಗಮ್ ।
ಕರುಣಾಪೂರತರಂಗಂ ಕಲಯೇ ಮಾತಂಗಕನ್ಯಕಾಽಪಾಂಗಮ್ ॥ ೮ ॥

ಮೇಚಕಮಾಸೇಚನಕಂ ಮಿಥ್ಯಾದೃಷ್ಟಾಂತಮಧ್ಯಭಾಗಂ ತೇ ।
ಮಾತಃ ಸ್ವರೂಪಮನಿಶಂ ಮಂಗಲಸಂಗೀತಸೌರಭಂ ಮನ್ಯೇ ॥ ೯ ॥

॥ ಇತಿ ಶ್ಯಾಮಲಾನವರತ್ನಮಾಲಿಕಾ ಸ್ತೋತ್ರಮ್ ಸಂಪೂರ್ಣಮ್ ॥

೭. ರತ್ನದ ವೈಖರಿಯಂತೆ ವಿಚಿತ್ರವರ್ಣದ ಅಂಗಗಳನ್ನುಳ್ಳ, ಸಿದ್ಧ ಶ್ರೇಷ್ಠಳಾದ, ಯೌವನವೆಂಬ ವನದಲ್ಲಿ ಹೆಣ್ಣುಜಿಂಕೆಯಂತಿರುವ, ಸಂಗೀತ ವೆಂಬ ಕಮಲದ ಮಧುವನ್ನು ಕುಡಿಯುತ್ತಿರುವ, ಜೇನಿನಂತಿರುವ ಮಾತಂಗಿ ಯನ್ನು ನಮಸ್ಕರಿಸುತ್ತೇನೆ.

೮. ವೀಣಾಧ್ವನಿಯಲ್ಲಿ ಅನುರಕ್ತವಾಗಿರುವ, ಅತ್ಯಂತ ಆನಂದ ವೆಂಬ ಮಾಧುರ್ಯಕ್ಕೆ ಭೃಂಗದಂತಿರುವ, ಕರುಣೆಯೆಂಬ ಪ್ರವಾಹಕ್ಕೆ ಅಲೆಯಂತಿರುವ, ಮಾತಂಗಕನ್ಯೆಯ ಕಡೆಗಣ್ಣೋಟವನ್ನು ಉಪಾಸಿಸುತ್ತೇನೆ.

೯. ಹೇ ತಾಯಿ, ಯಾವಾಗಲೂ ಮಂಗಳವಾದ ಸಂಗೀತದ ಸೌರಭದಿಂದ ಕೂಡಿದ ನಿನ್ನ ಸ್ವರೂಪವು ಎಷ್ಟು ನೋಡಿದರೂ ತೃಪ್ತಿಯಾಗ ದಂಥದ್ದು, ವಿಚಿತ್ರವರ್ಣಗಳುಳ್ಳದ್ದು. ಅದಕ್ಕೆ ಮಧ್ಯವಾಗಲಿ ಕೊನೆಯಾಗಲಿ ಇದೆಯೆಂದು ಭಾವಿಸುವುದು ಕೇವಲ ಮಿಥ್ಯೆ; (ಹೀಗೆಂದು) ನಾನು ಅರಿಯುತ್ತೇನೆ.

ಹೀಗೆ ಶ್ಯಾಮಲಾನವರತ್ನಮಾಲಿಕಾ ಸ್ತೋತ್ರವು ಮುಗಿಯಿತು.

## ವಿಶ್ವಸಾರತಂತ್ರ

ನಮಸ್ತೇ ಶರಣ್ಯೇ ಶಿವೇ ಸಾನುಕಂಪೇ
ನಮಸ್ತೇ ಜಗದ್ವ್ಯಾಪಿಕೇ ವಿಶ್ವರೂಪೇ ।
ನಮಸ್ತೇ ಜಗದ್ವಂದ್ಯಪಾದಾರವಿಂದೇ
ನಮಸ್ತೇ ಜಗತ್ತಾರಿಣಿ ತ್ರಾಹಿ ದುರ್ಗೇ ॥

ನಮಸ್ತೇ ಜಗಚ್ಚಿಂತ್ಯಮಾನಸ್ವರೂಪೇ
ನಮಸ್ತೇ ಮಹಾಯೋಗಿನಿ ಜ್ಞಾನರೂಪೇ ।
ನಮಸ್ತೇ ಸದಾನಂದನಂದಸ್ವರೂಪೇ
ನಮಸ್ತೇ ಜಗತ್ತಾರಿಣಿ ತ್ರಾಹಿ ದುರ್ಗೇ ॥

ಅನಾಥಸ್ಯ ದೀನಸ್ಯ ತೃಷ್ಣಾತುರಸ್ಯ
ಭಯಾರ್ತಸ್ಯ ಭೀತಸ್ಯ ಬದ್ಧಸ್ಯ ಜಂತೋಃ ।
ತ್ವಮೇಕಾ ಗತಿರ್ದೇವಿ ನಿಸ್ತಾರದಾತ್ರಿ
ನಮಸ್ತೇ ಜಗತ್ತಾರಿಣಿ ತ್ರಾಹಿ ದುರ್ಗೇ ॥

# ವಿಶ್ವಸಾರತಂತ್ರ

ಆಶ್ರಯದಾತೆ, ಶುಭಕರಿ ಮತ್ತು ದಯಾಪೂರಿತಳಾದ ನಿನಗೆ ನಮಸ್ಕಾರ. ಜಗದ್ವ್ಯಾಪಿನಿ ಮತ್ತು ವಿಶ್ವರೂಪಿಣಿಯಾದ ನಿನಗೆ ನಮಸ್ಕಾರ. ಎಲ್ಲರೂ ವಂದಿಸುವ ಪಾದಪದ್ಮಗಳುಳ್ಳ ನಿನಗೆ ನಮಸ್ಕಾರ. ಜಗದ್ರಕ್ಷಕಿಯಾದ ನಿನಗೆ ನಮಸ್ಕಾರ. ಭಕ್ತರ ಕಷ್ಟಗಳನ್ನು ಪರಿಹರಿಸುವ ಜಗಜ್ಜನನಿ! ನಮ್ಮನ್ನು ಸಲಹು.

ಜಗತ್ತಿಗೆಲ್ಲಾ ಧ್ಯಾನಸ್ವರೂಪಿಣಿಯಾದ ನಿನಗೆ ನಮಸ್ಕಾರ. ಮಹಾಯೋಗ ಮತ್ತು ಜ್ಞಾನಗಳ ಮೂರ್ತಿಯಾದ ನಿನಗೆ ನಮಸ್ಕಾರ. ಸದಾ ಆನಂದಮಯನಾದ ಭಗವಂತನ ಆನಂದವಾದ ನಿನಗೆ ನಮಸ್ಕಾರ. ಜಗದ್ರಕ್ಷಕಿಯಾದ ನಿನಗೆ ನಮಸ್ಕಾರ. ಭಕ್ತರ ಕಷ್ಟಗಳನ್ನು ಪರಿಹರಿಸುವ ಜಗಜ್ಜನನಿ! ನಮ್ಮನ್ನು ಸಲಹು.

ಅನಾಥ, ದೀನ, ಆಶಾಪೀಡಿತ, ಭೀತ ಮತ್ತು ಬದ್ಧ ಜೀವಿಗಳಿಗೆ ಮೋಕ್ಷದಾಯಿನಿಯಾದ ಏಕಮಾತ್ರ ಗತಿಯು ನೀನು. ಜಗದ್ರಕ್ಷಕಿಯಾದ ನಿನಗೆ ನಮಸ್ಕಾರ. ಭಕ್ತರ ಕಷ್ಟಗಳನ್ನು ಪರಿಹರಿಸುವ ಜಗಜ್ಜನನಿ! ನಮ್ಮನ್ನು ಸಲಹು.

# ನಮ್ಮ ಕೆಲವು ಪ್ರಕಟಣೆಗಳು

ಶಿವಾನಂದಲಹರೀ (ಶ್ರೀಶಂಕರಾಚಾರ್ಯ ವಿರಚಿತ)
ಸೌಂದರ್ಯಲಹರೀ (ಶ್ರೀಶಂಕರಾಚಾರ್ಯ ವಿರಚಿತ)
ಸ್ತವಕುಸುಮಾಂಜಲಿ (ಸ್ತೋತ್ರ ಸಂಕಲನ, ಅರ್ಥಸಹಿತ)
ವೇದ ಕುಸುಮಾಂಜಲಿ
(ಸೂಕ್ತಗಳು, ರುದ್ರ, ಚಮಕ, ಮಂತ್ರಪುಷ್ಪ ಇತ್ಯಾದಿ)
ಶ್ರೀಲಲಿತಾ ಸಹಸ್ರನಾಮ ಮತ್ತು ತ್ರಿಶತೀ (ಭಾಷ್ಯಸಹಿತ)
ಶ್ರೀಲಲಿತಾ ಸಹಸ್ರನಾಮ (ಪಾರಾಯಣ)
ಶ್ರೀವಿಷ್ಣುಸಹಸ್ರನಾಮ (ಭಾಷ್ಯ)
ಶ್ರೀವಿಷ್ಣುಸಹಸ್ರನಾಮ (ಪಾರಾಯಣ)
ಶ್ರೀಶಿವಸಹಸ್ರನಾಮ (ಸಭಾಷ್ಯ)
ಶಿವಸಹಸ್ರನಾಮ (ಪಾರಾಯಣ)
ದಕ್ಷಿಣಾಮೂರ್ತಿ ಸ್ತೋತ್ರ
ಸನತ್ಸುಜಾತೀಯ (ಮಹಾಭಾರತದಲ್ಲಿ ಸನತ್ಕುಮಾರರು
ಧೃತರಾಷ್ಟ್ರನಿಗೆ ಮಾಡಿದ ಉಪದೇಶ)
ಶ್ರೀಮದ್ಭಗವದ್ಗೀತಾ (ಸಟೀಕ)
ಶ್ರೀಮದ್ಭಗವದ್ಗೀತಾ (ಪಾರಾಯಣ)
ವಿವೇಕಚೂಡಾಮಣಿ (ಶ್ರೀಶಂಕರಾಚಾರ್ಯ ವಿರಚಿತ)
ಉಪನಿಷತ್ ಭಾವಧಾರೆ
(ಮೂಲ, ತಾತ್ಪರ್ಯ ಮತ್ತು ದೀರ್ಘ ವಿವರಣೆ ಸಹಿತ)
ಗೀತಾಭಾವಧಾರೆ (ಮೂಲ, ತಾತ್ಪರ್ಯ ಮತ್ತು ದೀರ್ಘ ವಿವರಣೆ ಸಹಿತ)
ಪಾತಂಜಲ ಯೋಗದರ್ಶನ
(ಪತಂಜಲಿಯ ಯೋಗ ಸೂತ್ರಗಳ ವಿವರಣೆ, ವ್ಯಾಸಭಾಷ್ಯ ಸಹಿತ)

---

ಇತರ ಪ್ರಕಟನೆಗಳು :

ಶ್ರೀ ಲಲಿತಾಮಾತೆ

ಶ್ರೀ ಲಲಿತಾಸಹಸ್ರನಾಮ

ಶ್ರೀ ಲಲಿತಾಸಹಸ್ರನಾಮ ಮತ್ತು ತ್ರಿಶತೀ

ವೇದಕುಸುಮಾಂಜಲಿ

ಸೌಂದರ್ಯಲಹರೀ




Sri Durgā Sapta Sati Rs. 36/-

Sri Ramakrishna Ashrama Mysore 570 020